# ಅಪವಾದ

ಎಂ. ರಾಮಮೂರ್ತಿ



ವಿನೋದಿನಿ ಪ್ರಕಟಣಾಲಯ
ಬಸವನಗುಡಿ, ಬೆಂಗಳೂರು 4

ಪ್ರಥಮ ಮುದ್ರಣ, ಮಾರ್ಚ್ ೧೯೫೮
ಸಾವಿರ ಪ್ರತಿಗಳು



ಬೆಲೆ ಒಂದೂವರೆ ರೂಪಾಯಿ

ಶ್ರೀನಿವಾಸ ಮುದ್ರಣಾಲಯ
ಶಂಕರಪುರ — ಬೆಂಗಳೂರು ೪

"ನಿಮ್ಮಿಂದ ನಮ್ಮ ಮನೆ ಮುಳುಗಿ ಹೋಯಿತು"

ಗುರುತಿಲ್ಲ. ಪರಿಚಯವಿಲ್ಲ. ಯಾವೊತ್ತೂ ಎಲ್ಲಿಯೂ ನೋಡಲಿಲ್ಲ. ಅಂತಹ ಮನುಷ್ಯ ಬಂದು ಕುಳಿತುಕೊಂಡವನು ಇದ್ದಕ್ಕಿದ್ದಂತೆಯೇ "ನಿಮ್ಮಿಂದ ನಮ್ಮ ಮನೆ ಮುಳುಗಿಹೋಯಿತು" – ಎಂದರೆ ? ಯಾರಿಗಾದರೂ ಹಾಗಾದರೆ "ಇದೇನಪ್ಪ ಗ್ರಹಚಾರ" ಎನ್ನಿಸಬೇಕು – ತಾನೇ ? ಹಾಗೆಯೇ ಶಂಕರ ನಾರಣಪ್ಪನವರಿಗೂ ಆಯಿತು.

ಮಧ್ಯಾನ್ಹ ಊಟ ಮುಗಿಸಿಕೊಂಡು, ಎಲೆ ಅಡಿಕೆ ಹಾಕಿಕೊಂಡು ಚಾಪೆಯ ಮೇಲೆ ಕುಳಿತುಕೊಂಡಿದ್ದರು. ಕಿರಿಯ ಮಗಳು ಕೃಷ್ಣವೇಣಿ ತಲೆ ಕೆಳಕ್ಕೆ ದಿಂಬು ತಂದು ಇಟ್ಟಿದ್ದಳು. ಇನ್ನೇನು ಸ್ವೈಚಾಚಿ ಮಲಗಿ ಕೊಳ್ಳಬೇಕು. ಅಷ್ಟು ಹೊತ್ತಿಗೆ ಸರಿಯಾಗಿ ಈ ಮನುಷ್ಯ ಬಂದು ಹೀಗೆ ಹೇಳುತ್ತಿದ್ದಾನೆ.

ಬಂದವನಿಗೆ ಬೇಸಾರಿ ಹಾಕಿ ಹೊರಗೆಹೋಗು ಎಂದು ಹೇಳಬೇಕೆನ್ನಿಸುವಷ್ಟು ಕೋಪ ಬಂದಿತು. ಆದರೆ ಶಂಕರನಾರಣಪ್ಪ ಬಹಳ ತಾಳ್ಮೆಯ ಮನುಷ್ಯ. ಮಾತನಾಡುವ ಮೊದಲು ಹತ್ತು ಎಣಿಸಿ ಮಾತನಾಡುವ ಜಾತಿ. ಆದರಿಂದ ಸಮಾಧಾನ ತಂದುಕೊಂಡು ಹೇಳಿದರು.

'ಏನು ಸ್ವಾಮಿ. ಬಂದವರು ಇದ್ದಕ್ಕಿದ್ದಂತೆಯೇ ನನ್ನಿಂದ ಮನೆ ಮುಳುಗಿತು ಎಂದರೆ ಏನು ಅರ್ಥ ? ಸ್ವಲ್ಪ ಸಮಾಧಾನವಾಗಿ ಕುಳಿತುಕೊಳ್ಳಿ. ಏನು ವಿಷಯ ಹೇಳಿ. ನೀವು ನನ್ನನ್ನು ಯಾರೋ ಎಂದು ತಿಳಿದುಕೊಂಡು ಮಾತನಾಡುವಂತಿದೆ. ಮೊದಲು ಹೇಳಿ. ನಾನು ಯಾರೆಂಬುದನ್ನು ಬಲ್ಲಿರೋ ?"

"ನೀವು ಜೋಡೀದಾರ ಶಂಕರನಾರಣಪ್ಪನವರಲ್ಲವೇ ?"

ಈಗ ಶಂಕರನಾರಣಪ್ಪನವರಿಗೆ ಸ್ವಲ್ಪ ದಿಗಿಲಾಯಿತು.

"ಹೌದು. ನಾನೇ ಶಂಕರನಾರಣಪ್ಪ. ಏನು ವಿಷಯ ?"

ಯಾರೊಂದಿಗೆ ಮಾತನಾಡುತ್ತಿದ್ದೀಯೆ ಎಂದು ದಬಾಯಿಸಿದ ಮನುಷ್ಯ ಶಾಂತನಾಗಿ ನಾನೇ ಶಂಕರನಾರಣಪ್ಪ ಎಂದು ಹೇಳಿದ ಕೂಡಲೇ ಬಂದಿದ್ದಾತನಿಗೆ ಮತ್ತಷ್ಟು ಚೈತನ್ಯ ಬಂದಂತೆ ಆಯಿತು. ತಲೆಯ ಮೇಲಿದ್ದ ಸಿಂಬೀರುಮಾಲು ತೆಗೆದು ಚಾಪೆಯ ಮೇಲಿಟ್ಟು ಪರಿಷ್ಕಾರವಾಗಿ ಕುಳಿತುಕೊಂಡು ಅಂದರು.

"ನಾನೇನು ಹಳ್ಳಿ ಗಮಾರನಲ್ಲ, ಸ್ವಾಮಿ. ಸರಿಯಾಗಿ ವಿಚಾರಿಸಿಕೊಂಡು ಮಾಡಿಕೊಂಡು ಬಂದಿದ್ದೇನೆ."

"ಆದರೂ ಹಾಗೆ ಮಾತನಾಡಬಾರದು. ಮದ್ಯಾಹ್ನದ ಹೊತ್ತು ಮನೆಗೆ ಬಂದು ಮನೆ ಮುಳುಗಿಸಿದೆ ಎಂದರೆ ಏನರ್ಥ ?"

"ಮನೇ ಮುಳುಗಿಸಿ ನಾಶ ಮಾಡುವುದೇ ಉಂಟಂತೆ, ಹೇಳಿದರೇನು ತಪ್ಪು ?"

ಮನುಷ್ಯ ಉದ್ರೇಕಿತನಾಗಿದ್ದಾನೆ. ತಾವೂ ಜೋರು ಮಾಡಿದರೆ ಅವನೂ ಜೋರು ಮಾಡುತ್ತಾನೆ. ಸಮಾಧಾನವಾಗಿ ಮಾತನಾಡಬೇಕು. ಅವನೇಕೆ ಈರೀತಿಯಾಗಿ ಮಾತನಾಡುತ್ತಿದ್ದಾನೆ, ಏನು ಹೇಳಬೇಕೆಂದುಕೊಂಡು ಬಂದಿದ್ದಾನೆ, ಇವುಗಳನ್ನು ತಿಳಿದುಕೊಳ್ಳಬೇಕು–ಎಂದುಕೊಂಡರು ಶಂಕರನಾರಣಪ್ಪ.

"ಏನು ವಿಷಯ ಹೇಳಿ, ಸ್ವಾಮಿ."

"ನಿಮ್ಮ ಹುಡುಗ ನಮ್ಮ ಹುಡುಗಿಯ ಬುದ್ಧಿ ಕೆಡಿಸಿದ್ದಾನೆ."

# ಅಪವಾದ

ಶಂಕರನಾರಣಪ್ಪನವರ ಎದೆ ದಢಕ್ಕೆಂದಿತು. ಪಟಪಟನೆ ಹೊಡೆದು ಕೊಳ್ಳಲು ಆರಂಭವಾಯಿತು. ಇದೇನು ಗ್ರಹಚಾರ ಬಂದಿತು! ಊರು ಬಿಟ್ಟು ಊರಿಗೆ ಬಂದು ಅವರು ಬೆಂಗಳೂರಿನಲ್ಲಿ ನೆಲೆಸಿ ನಲವತ್ತು ವರ್ಷಗಳಾಗಿದ್ದವು. ಮಾನವಾಗಿ ಮರ್ಯಾದೆಯಾಗಿ ಜೀವನ ಮಾಡುತ್ತಿದ್ದರು. ಯಾರೂ ಎಂದೂ "ಶಂಕರನಾರಣಪ್ಪ ಹೀಗೆ" ಎಂದು ಬೆರಳು ತೋರಿಸಿ ಆಡುವಂತೆ ಮಾಡಿಕೊಂಡಿಲ್ಲ. ಹೀಗೇ ಬದುಕಿ ಮಾನವಾಗಿ ಒಂದು ದಿನ ಕಣ್ಣು ಮುಚ್ಚಿ ಕೊಳ್ಳೋಣ ಎಂದಿದ್ದರೆ ಕಡೆಗಾಲದಲ್ಲಿ ಎಂತಹ ಅಪಖ್ಯಾತಿಯು ಬಂದಿತು. ಈ ಹಾಳು ಹುಡುಗರಿಂದ ಮರ್ಯಾದೆ ಉಳಿಯುವಂತೆ ಇಲ್ಲ.

ಶಂಕರನಾರಾಯಣಪ್ಪ ಕಂಪಿಸುವ ಕಂಠದಿಂದ "ಇಲ್ಲ. ನಮ್ಮ ಹುಡುಗರು ಯಾರೂ ಅಂತಹವರಲ್ಲ" ಎಂದು ಹೇಳಿದರು.

"ಅಲ್ಲ – ಎಂದರೆ ಏನು ಅರ್ಥ. ನಿಮ್ಮ ಹುಡುಗ ಮಾಟವೋ ಮಳಿಗೆಯೋ ಮಾಡಿ ನಮ್ಮ ಹುಡುಗಿಯನ್ನು ವಶೀಕರಣ ಮಾಡಿಕೊಂಡಿದ್ದಾನೆ. ಅವಳು ಜಪ್ಪಯ್ಯ ಎಂದರೂ ಕೇಳುವುದಿಲ್ಲ. ಅವನನ್ನೇ ಮದುವೆ ಮಾಡಿಕೊಳ್ಳುತ್ತೇನೆ – ಎಂದು ಪಟ್ಟು ಹಿಡಿದು ಕುಳಿತು ಬಿಟ್ಟಿದ್ದಾಳೆ."

ಈಗ ಶಂಕರನಾರಣಪ್ಪನವರಿಗೆ ಸ್ವಲ್ಪ ಜೀವನ ಬಂದಂತೆ ಆಯಿತು. ವಿಷಯ ಮೊದಲು ಅವರೆಂದುಕೊಂಡಿದ್ದಷ್ಟು ಪ್ರಮಾದಕ್ಕೆ ಇಟ್ಟುಕೊಂಡಿರಲಿಲ್ಲ. "ಹುಡುಗ ಹುಡುಗಿಯರು ಪರಸ್ಪರ ಪ್ರೀತಿಸಿರುವಂತೆ ಇದೆ. ವಿಷಯ ಇಷ್ಟೇ ತಾನೇ. ಪ್ರಮಾದಕ್ಕೆ ಇಟ್ಟುಕೊಂಡರೆ "ನಮ್ಮ ಹುಡುಗಿಯನ್ನು ನಿಮ್ಮ ಮನೆಗೆ ತಂದುಕೊಳ್ಳಿ" ಎಂದು ಹೇಳಬಹುದು. ಒಟ್ಟಿನಲ್ಲಿ ಬ್ರಾಹ್ಮಣನಂತೆ ಕಂಡು ಬರುತ್ತಾನೆ. ಜಾತಿಯಲ್ಲಿ ವ್ಯತ್ಯಾಸವಿರಬಹುದು. ಈ ಕಾಲದಲ್ಲಿ ಏನು ? ತ್ರಿವರ್ಣದವರಲ್ಲಿಯೂ ಕೊಟ್ಟು ತರುವುದು ಅಭ್ಯಾಸವಾಗಿದೆ. ಬಂದಿರುವ ಮನುಷ್ಯ ನಮ್ಮವನೇ ಆದರಂತೂ ಸರಿಹೋದಂತೆಯೇ ಆಯಿತು. ವಿಷಯ ವಿವರವಾಗಿ ತಿಳಿದುಕೊಳ್ಳೋಣ" ಎಂದುಕೊಂಡರು.

"ನೀವಾರು, ಏನು ಕತೆ, ಸ್ವಲ್ಪ ವಿವರವಾಗಿ ಹೇಳಿ."

"ನಾನು ಗುಂಡಪ್ಪ ಅಂತ. ಶಿವನಸಮುದ್ರದಲ್ಲಿ ಹೈಸ್ಕೂಲು ಹೆಡ್ ಮಾಷ್ಟರು — — —

# ಅಪವಾದ

ಗುಂಡಪ್ಪ ಮುಂದೆ ಏನೋ ಹೇಳುವುದರಲ್ಲಿದ್ದರು. ಅಷ್ಟರಲ್ಲಿ ಶಂಕರ ನಾರಣಪ್ಪ "ಅಯ್ಯೋ. ನಮ್ಮ ವೆಂಕಟೇಶ ಹಾಗೆ ಮಾಡಿದನೇ ? ಚಿನ್ನ ದಂತಹ ಹುಡುಗನಿಗೆ ಈ ದುರ್ಬುದ್ಧಿಯು ಎಲ್ಲಿಂದ ಬಂದಿತು ?" ಎಂದು ಕೊಂಡರು.

ಶಂಕರನಾರಣಪ್ಪ ಅನ್ಯಾಯಸಕ್ತರಾಗಿ ಏನೋ ಯೋಚನೆ ಮಾಡುತ್ತಿದ್ದ ವನು ಗನುಸಿಸಿದ ಗುಂಡಪ್ಪ ಮಾತು ನಿಲ್ಲಿಸಿದರು.

"ಹೇಳಿ, ಗುಂಡಪ್ಪನವರೇ. ಗ್ರಹಚಾರ, ಏನೇನಿದೆಯೋ ಅವೆಲ್ಲವನ್ನೂ ಹೇಳಿ ಬಿಡಿ. ಈ ಹುಡುಗರಿಂದ ಮಾನವಾಗಿ ಬದುಕುವುದಕ್ಕಿಲ್ಲ."

"ನಿಮ್ಮ ಮಗ ನಮ್ಮೂರಿಗೆ ಬಂದು ಮೂರು ತಿಂಗಳುಗಳಾದುವು. ಹಿಂದೀ ಪಾಠ ಹೇಳುತ್ತಿದ್ದಾನೆ. ಊರಿನವರೆಲ್ಲರೂ ತಮ್ಮ ಮಕ್ಕಳನ್ನು ಪಾಠಕ್ಕೆ ಕಳಿಸುತ್ತಿದ್ದಾರೆ. ನಾನೂ ಹ್ಯಾಗೆಯೇ ನಮ್ಮ ಹುಡುಗಿ ಪ್ರಮಿಳೆ ಯನ್ನು ಕಳಿಸಿಕೊಡುತ್ತಿದ್ದೆ. ಈಗ ಅವಳು ಅವನನ್ನೇ ಮದುವೆಯಾಗ ಬೇಕೆಂದು ಕುಳಿತು ಬಿಟ್ಟಿದ್ದಾಳೆ."

"ಆಗಾಗ ಹಾಗಾಗುವುದುಂಟು: ಬುದ್ಧಿಯಿಲ್ಲದ ಹುಡುಗರು. ಸ್ವಲ್ಪ ಹತೋಟಿಯಲ್ಲಿಡಬೇಕು. ನೀವು ಸ್ಕೂಲು ಮೇಸ್ಟರಾಗಿರುವವರು. ಹುಡು ಗರನ್ನು ಹತೋಟಿ ಮಾಡುವ ವಿಷಯ ನಿಮಗೆ ನಾನು ಹೇಳಬೇಕೇ ?"

"ಇವರನ್ನು ಹತೋಟಿ ಮಾಡಿ ಮುಂದು ನೋಡಿಕೋಬೇಕು. ಅವ ಳನ್ನು ಬೈದರೂ ಇಲ್ಲ. ಹೊಡೆದರೂ ಇಲ್ಲ. ಉಪವಾಸ ಹಾಕಿದರೂ ಇಲ್ಲ. ನಿಮ್ಮವನನ್ನೇ ಕಟ್ಟಿಕೋಬೇಕು ಎನುತ್ತಾಳೆ."

ಸರಿ. ತಾವೆಂದುಕೊಂಡಲ್ಲಿಗೇ ವಿಷಯ ಬಂದಿತು – ಎಂದುಕೊಂಡರು ಶಂಕರನಾರಣಪ್ಪನವರು.

"ಈಗ ನನ್ನನ್ನು ಏನು ಮಾಡಬೇಕು ಎನ್ನುತ್ತೀರಿ, ಗುಂಡಪ್ಪನವರೇ."

"ಇದೇನು ಸ್ವಾಮಿ. ಹೀಗೆ ಮಾತನಾಡುತ್ತೀರಿ. ನಿಮ್ಮ ಮಗನನ್ನು ಕರೆಸಿ ಛೀಮಾರಿ ಹಾಕಬೇಕು. ಅವನು ನಮ್ಮ ಹುಡುಗಿಯ ತಂಟೆಗೆ ಬರದೇ ಬಂದೋಬಸ್ತು ಮಾಡಬೇಕು."

ಶಂಕರನಾರಣಪ್ಪ ತಲೆಯ ಮೇಲೆ ಕೈಯಿಟ್ಟು ಕುಳಿತುಕೊಂಡು "ಆಗಲೀ ನಪ್ಪ. ಈ ದಿನವೇ ಅವನಿಗೆ ಕಾಗದ ಬರೆಯುತ್ತೇನೆ. ನೀನು ಸಂಪಾದನೆ ಮಾಡಿ ಹಾಳಾಗುವುದು ಬೇಡ. ಬಂದು ಮನೆಯಲ್ಲಿ ತಿಂದುಕೊಂಡು ಬಿದ್ದಿರು ಎಂದು ಬರೆಯುತ್ತೇನೆ" ಎಂದರು.

"ಹಾಗಲ್ಲ. ಸ್ವಾಮಿ."

"ಮತ್ತೆ ಹೇಗೆ ?"

"ನೀವು ಈ ದಿನವೇ ನನ್ನೊಂದಿಗೆ ಶಿವನಸಮುದ್ರಕ್ಕೆ ಬರಬೇಕು. ನಿಮ್ಮ ಹುಡುಗನನ್ನು ವಾಪ್ಸು ಕರೆದುಕೊಂಡು ಬರಬೇಕು."

''ಆಗಲಪ್ಪ. ಹಾಗೂ ಮಾಡುತ್ತೇನೆ. ಇಂತಹ ಕೆಟ್ಟ ಮಕ್ಕಳನ್ನು ಹೆತ್ತ ಮೇಲೆ ಇನ್ನೂ ಏನೇನು ಮಾಡಬೇಕಾಗುತ್ತದೋ" ಎಂದು ಹೇಳಿ ''ಅಲ್ಲರೀ, ಗುಂಡಪ್ಪನವರೇ ! ಇಷ್ಟಕ್ಕೆ ನೀವು ಇಷ್ಟುದೂರ ಬರಬೇಕೇ ? ಅಲ್ಲಿಯೇ ಜೋಡು ತೆಗೆದು ಹೊಡೆದು ಹಾಳಾಗಿ ಹೋಗು ಎಂದು ಹೇಳುವುದಕ್ಕಿಲ್ಲವೇ ?"

''ಹಾಗೂ ಮಾಡುತ್ತಿದ್ದೆ, ಸ್ವಾಮಿ. ನನಗೆ ತೋರಲಿಲ್ಲ - ಅಂದು ಕೊಂಡಿದ್ದೀರಾ ? ನಾಲ್ಕು ಜನದ ಕಿವಿಗೆ ಬೀಳವಂತೆ ವಿಷಯ ಇತ್ಯರ್ಥ ಮಾಡಬೇಕು. ಯಾರ ಕಿವಿಗಾದರೂ ಬಿದ್ದರೆ ಹುಡುಗಿಯ ಬಾಳು ಹಾಳಾಗುತ್ತದೆ. ಇಲ್ಲದಿದ್ದರೆ ನಾನೇ ಅವನಿಗೆ ಚೇಮಾರಿ ಹಾಕುತ್ತಿದ್ದೆ."

ಶಂಕರನಾರಣಪ್ಪನವರೂ ಹೆಣ್ಣುಗಳನ್ನು ಹೆತ್ತ ಸದ್ಗೃಹಸ್ಥರು. ಅದರ ಕಷ್ಟ ಸುಖಗಳು ಅವರಿಗೂ ಗೊತ್ತು. ನಿಜ. ಗಲಾಟೆ ಮಾಡಿಕೊಳ್ಳುವಂತಹ ವಿಷಯವಲ್ಲ. ಗುಂಭವಾಗಿಯೇ ಬಗೆಹರಿಸಿಕೊಳ್ಳಬೇಕು ? ಹೆಣ್ಣು ಮಕ್ಕಳಿಗೆ ಕೆಟ್ಟ ಹೆಸರು ಬಂದರೆ ಯಾರು ಕಟ್ಟಿಕೊಳ್ಳುತ್ತಾರೆ ?

''ಹೌದೂ ಸ್ವಾಮಿ. ನೀವು ಹೇಳುವುದು ನಿಜ. ಇಂತಹ ವಿಷಯಗಳಲ್ಲಿ ಗಲಾಟೆ ಮಾಡಿಕೊಳ್ಳಬಾರದು. ನನಗೂ ಮೂರು ಮಂದಿ ಹೆಣ್ಣು ಮಕ್ಕಳಿದ್ದಾರೆ. ಇಬ್ಬರಿಗೆ ಇನ್ನೂ ಮದುವೆಯಾಗಬೇಕು. ಇದರ ಕಷ್ಟ ಸುಖಗಳನ್ನು ನಾನು ಬಲ್ಲೆ. ನಾನೇ ಈ ದಿನ ನಿಮ್ಮ ಜೊತೆಯಲ್ಲಿ ಬರುತ್ತೇನೆ. ಗಲಾಟೆಯಾಗದಂತೆ ನಮ್ಮ ಹುಡುಗನನ್ನು ಕರೆದುಕೊಂಡು ಬರುತ್ತೇನೆ.

ನಿಮ್ಮ ಹುಡುಗಿಯನ್ನು ನೀವು ಹತೋಟಿ ಮಾಡಿ. ಎರಡು ದಿನ ಕಳೆದರೆ ಎಲ್ಲವೂ ಸರಿಹೋಗುತ್ತದೆ."

ಶಂಕರನಾರಣಪ್ಪನವರ ಹೆಂಡತಿ ಸೀತಮ್ಮ ಹಜಾರದ ಬಾಗಿಲು ಒರಗಿಕೊಂಡು ನಿಂತಿದ್ದರು. ತಮ್ಮ ಗಂಡನಿಗೂ ಗುಂಡಪ್ಪನವರಿಗೂ ನಡೆದ ಸಂಭಾಷಣೆಯನ್ನು ಪೂರ್ಣವಾಗಿ ಕೇಳಿದರು.

ಅವರು "ಅಲ್ಲಾಂದ್ರೆ — —" ಎಂದು ನಡುವೆ ಬಾಯಿ ಹಾಕಿದರು.

ಶಂಕರನಾರಣಪ್ಪ ತಿರುಗಿ ನೋಡಿ ಹೆಂಡತಿ ನಿಂತು ಮಾತು ಕೇಳುತ್ತಿರುವುದನ್ನು ಗಮನಿಸಿದರು.

ರೇಗಿಕೊಂಡು "ಕೇಳು. ಕೇಳು, ನಿನ್ನ ಮಗನ ಪ್ರತಾಪವನ್ನು. ಬೀದಿಯಲ್ಲಿ ಮುಖ ಎತ್ತಿಕೊಂಡು ಓಡಿಯಾಡುವಂತಿಲ್ಲ" ಎಂದರು.

"ಹಾಗಲ್ಲಾಂದ್ರೆ — —"

"ಹಾಗಲ್ಲದೇ ಇನ್ನೇನು ನಿನ್ನ ತಲೆ"

ಮನೆಗೆ ಬಂದಿದ್ದವರ ಎದುರಿಗೆ ಗಂಡ ನಿನ್ನ ತಲೆ ಎಂದು ಬೈಯ್ದದ್ದು ಸೀತಮ್ಮನವರಿಗೆ ಅಪಮಾನವಾಯಿತು. ಅದೂ ಅಲ್ಲದೇ ಗುಂಡಪ್ಪನವರು ಹಿಂದುಗಡೆ ಯಾರೋ ಮಾತನಾಡಿದುದು ಕಿವಿಗೆ ಬಿದ್ದು ತಿರುಗಿ ನೋಡಿ ಸೀತಮ್ಮನವರನ್ನು ಗುರ್ತಿಸಿದ್ದರು. ಆದರೂ ಬೈದವನು ತನ್ನ ಗಂಡನಲ್ಲಾ ಎಂದು ಸಮಾಧಾನ ಮಾಡಿಕೊಂಡರು.

"ಸುಮ್ಮನೆ ನೀವು ರೇಗಬೇಡಿ. ನಮ್ಮ ವೆಂಕಟೇಶ ಸರ್ವಥಾ ಅಂತಹ ಹುಡುಗನಲ್ಲ"

"ಅಲ್ಲವಂತೆ. ಇವರು ಹೇಳುವುದನ್ನು ಕೇಳು."

ಗುಂಡಪ್ಪನವರು ಗಂಡಹೆಂಡಿರ ಮಾತುಗಳ ನಡುವೆ ಪ್ರವೇಶ ಮಾಡಿ "ಇಲ್ಲ. ಇಲ್ಲ. ವೆಂಕಟೇಶ್ ಅವರ ವಿಷಯವನ್ನಲ್ಲ ನಾನು ಹೇಳುತ್ತಿರುವುದು. ಅವರು ದೊಡ್ಡ ಮನುಷ್ಯರು. ನಾನು ಹೇಳುತ್ತಿರುವುದು ಅವರ ವಿಷಯವನ್ನಲ್ಲ. ಅವರ ತಮ್ಮ ಮಾಧವರಾಯನ ವಿಷಯ."

ಶಂಕರನಾರಣಪ್ಪನವರಿಗೆ ಹೋಗಿದ್ದ ಜೀವ ಬಂತು.

"ಮಾಧವರಾಯ ಅಂತ ನನಗೆ ಮಗನೇ ಇಲ್ಲ. ನನಗಿರುವ ಗಂಡು

ಮಕ್ಕಳು ನಾಲ್ಕು ಮಂದಿ. ವೆಂಕಟೇಶ ಮಾತ್ರ ನಿಮ್ಮೂರಿನಲ್ಲಿದ್ದಾನೆ. ಉಳಿದವರು ಇಲ್ಲಿಯೇ ಇದ್ದಾರೆ. ನೀವು ಹೇಳುತ್ತಿರುವುದು ನಮ್ಮ ಹುಡುಗನ ವಿಷಯವನ್ನಲ್ಲ. ಅರೆರೇ ಇದೇನು, ನಮ್ಮ ಹುಡುಗನ ವಿಷಯ ಹೀಗೆ ಹೇಳುತ್ತಾರೆಯಲ್ಲಾ ಎಂದು ಯೋಚನೆ ಮಾಡುತ್ತಿದ್ದೇನೆ. ನಮ್ಮ ವಂಶದಲ್ಲಿ ಹುಟ್ಟಿ ಹಾಗೆ ಮಾಡುತ್ತಾನೆಯೇ ? ನೀವು ಹೇಳುತ್ತಿರುವುದು ನಮ್ಮ ಹುಡುಗನ ವಿಷಯವಲ್ಲ. ನಮಗೂ ನೀವು ಹೇಳುತ್ತಿರುವ ವಿಷಯಕ್ಕೂ ಸಂಬಂಧವಿಲ್ಲ."

ಗುಂಡಪ್ಪನವರಿಗೆ ಮೂರನೆಯ ಬೇಸ್ತು ಬಿದ್ದ ಹಾಗಾಯಿತು.

ಹಿಂತಿರುಗಿ ಕುಳಿತುಕೊಂಡು ಸೀತಮ್ಮನವರನ್ನು ಉದ್ದೇಶಿಸಿ "ಸೀತಮ್ಮನವರೇ ! ನೀವು ಹೇಳಿ, ಆ ಮಾಧವರಾಯ ನಿಮ್ಮ ಮಗನಲ್ಲವೇ ? ನಿಮ್ಮನ್ನು ಅವನು 'ಅಮ್ಮಾ' ಎಂದು ಕರೆಯುತ್ತಿರಲಿಲ್ಲವೇ ?" ಎಂದರು.

ಶಿವನಸಮುದ್ರದ ಮೇಸ್ಟರಿಗೆ ತಮ್ಮ ಕುಟುಂಬದ ಪರಿಚಯ ಚೆನ್ನಾಗಿರುವುದನ್ನು ಕಂಡು ಶಂಕರನಾರಣಪ್ಪನವರಿಗೆ ಆಶ್ಚರ್ಯವಾಯಿತು.

"ಇವರು ನಿನಗೆಲ್ಲೇ ಗೊತ್ತು ?"

"ಚೆನ್ನಾಯಿತು. ನಾನು ಶಿವನಸಮುದ್ರಕ್ಕೆ ಹೋಗಿ ಹದಿನೈದು ದಿನವಿರಲಿಲ್ಲವೇ ? ಈ ಮೇಸ್ಟರೂ ಇವರ ಮನೆಯವರೂ ನಮ್ಮ ವೆಂಕಟೇಶನ ಮನೆಗೆ ಬರುತ್ತಿದ್ದರು. ನಮಗಿವರು ಔತಣ ಕೂಡಾ ಮಾಡಿದ್ದರು. ನಾನು ಇವರನ್ನು ಬಲ್ಲೆ."

ಹಜಾರದ ಕೋಣೆಯಲ್ಲಿ ಕುಳಿತು ಇಬ್ಬರು ಹೆಣ್ಣು ಮಕ್ಕಳೂ, ಇಬ್ಬರು ದೊಡ್ಡ ಸೊಸೆಯರೂ ಈ ಮಾತುಗಳೆಲ್ಲವನ್ನೂ ಕೇಳಿಸಿಕೊಳ್ಳುತ್ತಿದ್ದರು. ಜಯ ಕೃಷ್ಣವೇಣಿಯರು ಹೊರಗೆ ಬಂದು "ಇವರು ಹೈಸ್ಕೂಲು ಮೇಸ್ಟರು ನಮಗೆ ಗೊತ್ತಪ್ಪ. ಇವರ ಮಗಳು ಪ್ರಮಿಳಾ ಸಹ ನಮಗೆ ಗೊತ್ತು. ಅವಳು ನಮ್ಮ ಫ್ರೆಂಡ್" ಎಂದರು.

ಶಂಕರನಾರಣಪ್ಪ ಪುನಃ "ರೇಗಿಕೊಂಡು ಒಳಗೆ ಹೋಗಿ. ಅವಳು ಇವರ ಫ್ರೆಂಡಂತೆ. ಮುದುಕಿಯರಂತೆ ದೊಡ್ಡವರ ಮಾತಿಗೆ ಬಂದುಬಿಟ್ಟರು.

ಹುಡುಗರು ಎಲ್ಲಿ ಬಿದ್ದಿರಬೇಕೋ ಅಲ್ಲಿ ಬಿದ್ದಿರಬೇಕು. ತಲೆ ಹರಟೆ ಮಾಡ ಬಾರದು" ಎಂದು ಗದ್ದರಿಸಿದರು.

ಆ ಹುಡುಗಿಯರು ತೆಪ್ಪಗೆ ಒಳಗೆ ಹೋಗಿಬಿಟ್ಟರು.

ಗುಂಡಪ್ಪನವರು ಪುನಃ "ಸೀತಮ್ಮನವರೇ! ಮಾಧವರಾಯ ನಿಮ್ಮ ಮಗನಲ್ಲವೇ?" ಎಂದರು.

''ಅಲ್ಲ, ಮೇಸ್ಟರೇ! ಖಂಡಿತವಾಗಿಯೂ ಅಲ್ಲ. ಅವನು ನಮ್ಮ ಹುಡುಗನ ಸ್ನೇಹಿತ ಅಷ್ಟೇ."

''ಹಾಗಾದರೆ ಹಿಂದೀ ಮೇಸ್ಟರು ಅವನನ್ನು ತಮ್ಮಾ ತಮ್ಮಾ ಎಂದು ಹೇಳುತ್ತಾರೆಯಲ್ಲಾ."

"ವಿಶ್ವಾಸದಿಂದ ಇದ್ದಾರೆ, ಅನ್ನುತ್ತಾನೆ ಅಷ್ಟೇ. ನನ್ನನ್ನು ಆ ಹುಡುಗ ಅಮ್ಮಾ ಎಂದೇ ಕರೆಯುತ್ತಾನೆ. ಆದರೆ ಅವನು ನಮ್ಮ ಮಗನಲ್ಲ."

"ಅವನಾರು ಸೀತಮ್ಮನವರೇ."

"ಖಂಡಿತವಾಗಿಯೂ ಅವನಾರೆಂಬುದು ನನಗೆ ಗೊತ್ತಿಲ್ಲ. ಮಂಗಳೂರಿನ ಕಡೆಯವನೆಂದು ಕೇಳಿದ್ದೇನೆ. ಅವರ ತಂದೆ ಈ ಊರಿನಲ್ಲಿ ಎಲ್ಲಿಯೋ ಹೋಟಲಿಟ್ಟುಕೊಂಡಿರುವಂತೆ ಕಂಡು ಬರುತ್ತದೆ. ಅವನು ನಮ್ಮ ಹುಡುಗನ ಜೊತೆಯಲ್ಲಿ ಹಿಂದೀ ಪ್ಯಾಸು ಮಾಡಿದ. ಹಿಂದೀಪಾಠ ಹೇಳುವುದಕ್ಕೆ ಸಹಾಯಕವಾಗಿರಲಿ – ಎಂದು ಜೊತೆಯಲ್ಲಿಟ್ಟುಕೊಂಡಿದ್ದಾನೆ."

"ಆ ಹುಡುಗ ನೋಡೀಮ್ಮ ಎಂತಹ ಕೆಲಸ ಮಾಡಿದ್ದಾನೆ. ಅವನಿಗೆ ನಿಮ್ಮ ಮಗನ ಮಾತು ಎಂದರೆ ವೇದವಾಕ್ಯ. ವೆಂಕಟೇಶ್ ಹೇಳಿದಂತೆ ಕೇಳುತ್ತಾನೆ. ನಿಮ್ಮ ಮಗನ ಮುಖಾಂತರ ಹೇಳಿಸಿ ಆ ಹುಡುಗನನ್ನು ಹತೋಟಿ ಮಾಡಿಸಬೇಕು."

"ಆಗಲಿ ಮಾಡೋಣವಂತೆ. ಆದರೆ ಮೇಸ್ಟರೇ. ಪ್ರಮಿಳೆಯಂತಹ ಒಳ್ಳೆಯ ಹುಡುಗಿ ಹಾಗೆ ಮಾಡುತ್ತಿದ್ದಾಳೆಂದು ನೀವು ಹೇಳಿದರೆ ನಂಬುವುದೇ ಕಷ್ಟವಾಗುತ್ತದೆ. ಚಿನ್ನದಂತಹ ಹುಡುಗಿ. ಅವಳನ್ನು ನೋಡಿ ನಮ್ಮ ಹುಡುಗರಿಗಾರಿಗಾದರೂ ಮಾಡಿಕೊಂಡು ಸೊಸೇ ಮಾಡಿಕೊಳ್ಳಬೇಕು ಎಂದು ಆಸೆಯಾಗುತ್ತಿತ್ತು ನನಗೆ. ಅಂತಹ ಹುಡುಗಿ."

"ಅಯ್ಯೋ ! ನನ್ನ ಗ್ರಹಚಾರವಮ್ಮಾ. ನಾನು ನಿಮ್ಮ ಯಜಮಾನರನ್ನು ನೋಡಿದ್ದು ಈ ದಿನವೇ. ಆದರೂ ಇವರ ಹೆಸರು ಕೇಳಿದ್ದೆ. ನಾನೂ ಬೆಂಗಳೂರಿನಲ್ಲಿ ಸರ್ವೀಸಿನಲ್ಲಿದ್ದೆ. ನನ್ನ ತಂಗಿ ಕೂಡಾ ಸ್ಕೂಲು ಮೇಡಂ ಆಗಿದ್ದಾಳೆ. ನಾವೆಲ್ಲಾ ಇದೇ ಊರಿನವರು. ಜೋಡಿದಾರ ಶಂಕರನಾರಣಪ್ಪನವರು ಎಂದರೆ ನಮಗೆಲ್ಲಾ ಗೊತ್ತು. ಆ ಮಾಧು ನಿಮ್ಮ ಹುಡುಗನೇ ಎಂದುಕೊಂಡಿದ್ದೆ. ಒಳ್ಳೆಯವರು. ಸತ್ಕುಲ. ಹುಡುಗರು ಪರಸ್ಪರ ಪ್ರೀತಿಸುವದಾದರೆ ಅವರವರಿಗೇ ಮದುವೆ ಮಾಡಿಬಿಡೋಣ ಎಂದಿದ್ದೆ. ಎಷ್ಟಾದರೂ ಹೆತ್ತ ಹೆಣ್ಣನ್ನು ಹೊರಗಡೆ ಕೊಡದೇ ಮನೆಯಲ್ಲಿಯೇ ಇಟ್ಟುಕೊಂಡಿರುವುದಕ್ಕಾಗುತ್ತದೆಯೇ ? ನೀವು ತಂದುಕೊಳ್ಳುವುದಾದರೆ ಸಂತೋಷದಿಂದ ಒಪ್ಪಿಕೊಳ್ಳುತ್ತಿದ್ದೆ. ಆದರೆ ವಿಷಯ ವಿಪರ್ಯಾಸವಾಗಿದೆ. ಯಾವನೋ ಮಂಗಳೂರು ಹುಡುಗ ಎನ್ನುತ್ತೀರಿ. ಯಾವ ಜಾತಿಯೋ, ಯಾವ ಕುಲವೋ"

"ಯಾವ ಜಾತಿಯೇನು ? ಅವನೂ ಬ್ರಾಹ್ಮಣರ ಹುಡುಗನೇ ಎನ್ನಿ."

"ಆದರೆ ಪಾತ್ರ ಕಂಡು ಕೇಳದವನಿಗೆ ಮಗಳನ್ನು ಕೊಡುವುದೇನಮ್ಮಾ"

"ನಾನೇನು ಅವನಿಗೆ ನಿಮ್ಮ ಮಗಳನ್ನು ಕೊಟ್ಟು ಮದುವೆ ಮಾಡಿ ಎಂದು ಹೇಳಲಿಲ್ಲ, ಮೇಷ್ಟರೇ ! ಅವನು ಬ್ರಾಹ್ಮಣನೆಂದು ಹೇಳಿದೆ ಅಷ್ಟೇ. ಹುಡುಗರು ಏನೋ ಹುಡುಗತನದ ಹುಮ್ಮಸ್ಸಿನಲ್ಲಿ ಪರಸ್ಪರ ಪ್ರೇಮ ಮಾಡಿದ್ದೇವೆ ಎಂದುಕೊಂಡಿದ್ದಾರೆ. ಇದಕ್ಕೆಲ್ಲಾ ಕಾರಣ ಈಗಿನ ಕಾಲದ ಕತೆ ಪುಸ್ತಕಗಳು ನೋಡಿ. ಒಬ್ಬರಿಗೊಬ್ಬರಿಗೆ ಗಂಟುಹಾಕಿ ಮದುವೆ ಮಾಡಿಕೊಂಡರು ಅಂತ ಸುಳ್ಳು ಕತೆಗಳನ್ನು ಬರೆಯದಿದ್ದರೆ ಕತೆ ಬರೆಯುವವರಿಗೆ ಜೀವನವಾಗುವುದಿಲ್ಲ. ನಮ್ಮ ಕಾಲದಲ್ಲಿ ಹೀಗಿರಲಿಲ್ಲ. ಈಗಂತೂ ಕತೆ ಪುಸ್ತಕಗಳು ಹೆಚ್ಚಿಕೊಂಡಿವೆ. ನಮ್ಮ ಮನೆಯಲ್ಲಿಯೂ ಅಷ್ಟೇ. ಜಯಾ, ವೇಣಿಯರು ಯಾವಾಗಲೂ ಕತೆ ಪುಸ್ತಕಗಳನ್ನು ಹಿಡಿದು ಕುಳಿತುಕೊಂಡು ಬಿಡುತ್ತಾರೆ. ಓದಬೇಡಿರೇ ಎಂದು ಹೊಡೆದುಕೊಳ್ಳುತ್ತೇನೆ. ಕೇಳುವುದಿಲ್ಲ. ಈ ಕತೆ ಪುಸ್ತಕಗಳಲ್ಲಿ ಒಬ್ಬರನ್ನೊಬ್ಬರು ಪ್ರೇಮ ಮಾಡಿದರೂ ಎಂದಿರುತ್ತದೆಯಲ್ಲಾ. ಈ ಹುಡುಗರೂ ಒಬ್ಬರನ್ನೊಬ್ಬರು ಪ್ರೇಮ ಮಾಡಿದೆವು ಎಂದುಕೊಳ್ಳುತ್ತಾರೆ. ಇವೆಲ್ಲಾ ಎಂತಹ ಪ್ರೇಮ ಹೇಳಿ. ಹಾಗೆಯೇ ನಿಮ್ಮ

ಹುಡುಗಿಯೂ ಮಾಧುವೂ ಪ್ರೇಮ ಮಾಡುತ್ತಿದ್ದೇವೆ ಎಂದುಕೊಂಡಿದ್ದಾರೆ ಸರಿಹೋಗುತ್ತದೆ ಬಿಡಿ. ನೀವು ಇದಕ್ಕೆಲ್ಲಾ ಯೋಚನೆ ಮಾಡಿ."

"ನೀವು ಹೇಳುವುದು ಸರಿಯಮ್ಮಾ. ಈಗ ಪ್ರಸಂಗ ವಿಪರೀತಕ್ಕಿಟ್ಟು ಕೊಂಡಿದೆಯಲ್ಲಾ. ಏನು ಮಾಡುವುದು ಹೇಳಿ."

"ಯೋಚನೆ ಮಾಡಬೇಡಿ ಎಂದೆನಲ್ಲಾ. ನಮ್ಮ ಹುಡುಗನ ಬಳಿ ಈ ವಿಷಯ ಮಾತನಾಡಿದಿರೋ ?"

ಮಾತನಾಡದೇ ಇರುತ್ತೇನೆಯೇ. ಮಾತನಾಡಿದೆ. "ಅವರು ಮಾಧುವೂ ಪ್ರಮಿಳೆಯೂ ಪ್ರೀತಿಸುತ್ತಾರೆ. ಅವರಿಗೆ ಮದುವೆ ಮಾಡಿಬಿಡಿ" ಎಂದು ಹೇಳುತ್ತಾರೆ. ಹಾಗೆ ಮಾಡುವುದಕ್ಕಾಗುತ್ತದೆಯೆ ?"

"ಎಲ್ಲಿಯಾದರೂ ಉಂಟೇ ? ಅವನಿಗೆ ಬುದ್ಧಿಯಿಲ್ಲ."

ತಮ್ಮ ಕುಟುಂಬವೂ ಆ ಮೇಸ್ಟ್ರರೂ ಮಾತನಾಡುವುದನ್ನು ಕೇಳುತ್ತಾ ಶಂಕರನಾರಣಪ್ಪ ಅವಾಕ್ಕಾಗಿ ಕುಳಿತುಕೊಂಡರು.

ಗುಂಡಪ್ಪನವರು "ಈಗೇನು ಮಾಡುವುದಮ್ಮಾ" ಎಂದರು.

"ಏನು ಮಾಡುವುದು. ಸುಮ್ಮನೆ ನೀವು ಊರಿಗೆ ಹೋಗಿ. ಗಲಾಟೆ ಮಾಡಿಕೊಳ್ಳಬೇಡಿ. ನಾನು ಬಂದು ಮಾಧುವನ್ನು ಅಲ್ಲಿಂದ ಹೊರಡಿಸುತ್ತೇನೆ. ನಿಮ್ಮ ಹುಡುಗಿಯನ್ನು ಕರೆದು ಬುದ್ಧಿ ಹೇಳುತ್ತೇನೆ. ಅವನೇ ಹೊರಟುಹೋದ ಮೇಲೆ ಅವಳೇನು ಮಾಡುತ್ತಾಳೆ ? ಎಲ್ಲಿಯಾದರೂ ಒಂದು ಗಂಡು ನೋಡಿ ಸಾಗಿಹಾಕಿ ಬಿಡಿ."

"ಯಾವ ಜನ್ಮದ ತಾಯಿಯೋ ನೀವು. ಅಷ್ಟು ಮಾಡಿರಮ್ಮ. ಬದುಕಿಕೊಳ್ಳುತ್ತೇನೆ. ಜನ್ಮಜನ್ಮಾಂತರಕ್ಕೂ ನಿಮ್ಮ ಉಪಕಾರವನ್ನು ಮರೆಯುವುದಿಲ್ಲ."

"ಸರಿ. ಮೇಸ್ಟರೇ ! ನಿಮಗೆ ಊಟವಾಗಿದೆಯೇ ?

"ನೀವು ಅಷ್ಟು ಮಾಡೀಮ್ಮ. ಊಟ ಹಾಕಿದ್ದಕ್ಕಿಂತಲೂ ಹೆಚ್ಚು ಪುಣ್ಯ ಬರುತ್ತದೆ."

"ಆದಾಗುತ್ತದೆ ಊಟಕ್ಕೇಳಿ. ನಿಮ್ಮನ್ನು ನೋಡಿದರೆ ಊಟವಾದವರ ಹಾಗೆ ಕಂಡು ಬರುವುದಿಲ್ಲ."

"ನನಗೆ ಈಗ ಏನೂ ಬೇಡಮ್ಮ ನೀವು ಹೇಳಿದ್ದೇ ಸಾಕು."

"ಇಲ್ಲ. ನೀವು ಊಟ ಮಾಡಲೇಬೇಕು. ಯಜಮಾನರಿಗೆ ಎಲೆ ಅಡಿಕೆಕೊಟ್ಟು ನಾನು ಬಡಿಸಿಕೊಳ್ಳುವುದರಲ್ಲಿದ್ದೆ. ಯಾವುದೋ ಕೇಳಿದ ಧ್ವನಿಯಲ್ಲಾ ಎಂದುಕೊಂಡವಳು ಹೊರಗೆ ಬಂದು ನಿಮ್ಮನ್ನು ನೋಡಿದೆ. ಹಸಿದ ಬ್ರಾಹ್ಮಣ ಮನೆಗೆ ಬಂದರೆ ಹಾಗೆಯೇ ಕಳುಹಿಸಿದವರುಂಟೇ, ಏಳಿ."

ಶಂಕರನಾರಣಪ್ಪ ಸಹ ಬಲಾತ್ಕಾರ ಮಾಡಿದರು. ಮೇಷ್ಟರು ಎದ್ದು ಕೋಟು ಅಂಗಿ ಬಿಚ್ಚಿ ಕುಳಿತಿದ್ದ ಚಾಪೆಯ ಮೇಲೆಯೇ ಇಟ್ಟರು.

"ಸ್ನಾನವಾಗಿದೆಯೇ, ಮೇಸ್ಟರೇ ?"

"ಎಲ್ಲಾ ಮಾಡಿಕೊಂಡೇ ಬಸ್ಸಿಗೆ ಹೊರಟೆ. ಕೈಕಾಲು ತೊಳೆದು ಕೊಳ್ಳಬೇಕು"

ಶಂಕರನಾರಾಣಪ್ಪ ಬಚ್ಚಲು ಮನೆಗೆ ಕರೆದುಕೊಂಡು ಹೋಗಿ ನೀರು ಕೊಟ್ಟರು. ಗುಂಡಪ್ಪ ಮುಖ ಕೈಕಾಲು ತೊಳೆದುಕೊಂಡು ಗೃಹಸ್ವಾಮಿ ಕೈಯಲ್ಲಿ ಟವಲು ಹಿಡಿದುಕೊಂಡು ನಿಂತಿದ್ದರೂ ಪಂಚೆಯ ಕೊನೆಯಲ್ಲಿಯೇ ಮುಖ ಒರೆಸಿಕೊಂಡು ಒಳಗೆ ಬಂದರು.

ಅಷ್ಟುಹೊತ್ತಿಗೆ ದೊಡ್ಡ ಸೊಸೆ ಸರೋಜಾ ಎರಡು ಮಣೆಗಳನ್ನು ಹಾಕಿ ಒಂದು ಎಲೆ ಹಾಕಿದ್ದಳು. ಸೀತಮ್ಮ ಬಡಿಸತೊಡಗಿದ್ದರು.

ಗುಂಡಪ್ಪನವರನ್ನು ಎಲೆಯ ಮುಂದೆ ಕೂರಿಸಿ ತಾವೊಂದು ಮಣೆಯ ಮೇಲೆ ಕುಳಿತುಕೊಂಡರು ಶಂಕರನಾರಣಪ್ಪ.

ಊಟವು ಮೊದಲಾಯಿತು.

ಶಂಕರನಾರಣಪ್ಪ "ಮೇಸ್ಟರೇ ! ನಿಮಗೆಷ್ಟು ಮಂದಿ ಮಕ್ಕಳು" ಎಂದು ಮಾತಿಗೆ ಆರಂಭಮಾಡಿದನು.

"ಇಬ್ಬರು ಮಕ್ಕಳು ಸ್ವಾಮಿ. ಇಬ್ಬರೂ ಹೆಣ್ಣುಮಕ್ಕಳು. ದೊಡ್ಡವಳಿಗೆ ಮದುವೆಯಾಗಿ ಗಂಡನ ಮನೆಯಲ್ಲಿದ್ದಾಳೆ. ಅವಳಿಗೆ ಮೂರು ಮಕ್ಕಳು. ಅಳಿಯ ಶಿವಮೊಗ್ಗದಲ್ಲಿ ಡೆಪ್ಯುಟೀ ಕಮಿಷನರ್ ಆಫೀಸಿನಲ್ಲಿ ಕೆಲಸಕ್ಕಿದ್ದಾನೆ. ಮದುವೆಯಾಗಬೇಕಾದವಳೇ ಇವಳು. ಗಂಡು ನೋಡುತ್ತಿದ್ದೇನೆ. ಅಷ್ಟರಲ್ಲಿಯೇ ಇಷ್ಟು ರಾದ್ಧಾಂತವಾಗಿದೆ"

"ಯೋಚನೆಮಾಡಬೇಡಿ. ಅದನ್ನೆಲ್ಲಾ ಸರಿಮಾಡೋಣ. ನಮ್ಮ ಹುಡುಗ ನಿಮ್ಮ ಸ್ಕೂಲಿನಲ್ಲಿಯೂ ಪಾಠ ಹೇಳುತ್ತಾನೆಯೋ ?"

"ನಮಗೂ ಹಿಂದೀ ಮೇಷ್ಟರಿಲ್ಲ. ನಿಮ್ಮ ಮಕ್ಕಳು ಸಂಬಳವೇ ಬೇಡ. ಬೇಕಾದರೆ ದಿನವೂ ಒಂದು ಗಂಟೆಯ ಹೊತ್ತು ಸ್ಕೂಲಿನಲ್ಲಿ ಪಾಠ ಹೇಳುತ್ತೇನೆ ಎಂದರು. ನಾವು ಮೇಲಿನ ಅಧಿಕಾರಿಗಳಿಗೆ. ಬರೆದೆವು ಅವರು ಒಪ್ಪಿಕೊಳ್ಳಲಿಲ್ಲ"

"ಹಾಗಾದರೆ ಊರಿನವರೆಲ್ಲಾ ಚಂದಾ ಹಾಕಿ ಸಂಬಳ ಕೊಡುತ್ತಾರೆಯೇ ?"

ಊಟ ಮಾಡುತ್ತಿದ್ದ ಗುಂಡಪ್ಪ ತಟ್ಟನೆ ತಲೆ ಎತ್ತಿ ನೋಡಿ "ಯಾಕೆ ಸ್ವಾಮಿ, ಹೀಗೆ ಕೇಳುತ್ತೀರಿ ? ನಿಮ್ಮ ಹುಡುಗನ ವಿಷಯ ನಿಮಗೆ ಗೊತ್ತಿಲ್ಲವೆ ?" ಎಂದರು,

"ಸರಿಯಾಗಿ ಗೊತ್ತಿಲ್ಲ, ಈಗಿನ ಕಾಲದ ಹುಡುಗರು ಎಲ್ಲಿ ಹೇಳುತ್ತಾರೆ ? ಈ ಕೆಲಸವೇ ಬೇಡ, ಸಂಬಳ ಬಂದೆ (ಊಟಮಾಡಬೇಕೆ, ದೊಡ್ಡವರು ಸಂಪಾದನೆ ಮಾಡಿರುವುದು ಅಷ್ಟೋ ಇಷ್ಟೋ ಇದೆ, ಊಟ ಮಾಡಿಕೊಂಡಿರು, ಅಷ್ಟಕ್ಕೂ ಬೇಕಾದರೆ ಇರುವ ಕಡೆ ಯಾವುದಾದರೂ ಕೆಲಸ ನೋಡಿಕೋ ಎಂದು ಹೇಳಿದೆ. ಕೇಳಲಿಲ್ಲ, ನನ್ನೊಂದಿಗೆ ಅವನು ಮಾತೇ ಆಡುವುದಿಲ್ಲ, ಅವರಮ್ಮನಿಗೆ ಹೇಳುತ್ತಾನೆ, ಅವಳಿಗೆ ಯಾವುದೂ ಅರ್ಥವಾಗುವುದಿಲ್ಲ, ಅಲ್ಲಿ ಯಾವುದೋ ಕ್ಲಬ್ಬಿದೆಯಂತೆ, ಅವರು ತಿಂಗಳಿಗೆ ನೂರು ರೂಪಾಯಿ ಸಂಬಳ ಕೊಡುತ್ತಾರೆ ಎಂದು ಹೇಳಿದ, ವಿವರಗಳನ್ನು ಸರಿಯಾಗಿ ಅವನು ಹೇಳುವುದಿಲ್ಲ, ನೀವು ಅದೇ ಊರಿನವರಲ್ಲ, ನಿಮಗೆ ಗೊತ್ತಿರಬೇಕಲ್ಲ ಎಂದು ಕೇಳುತ್ತಿದ್ದೇನೆ"

"ನಮ್ಮೂರಿನಲ್ಲಿ ಆಫೀಸರುಗಳದು ಒಂದು ಕ್ಲಬ್ಬಿದೆ. ಅವರು ಈ ಊರಿನಲ್ಲಿ ಯಾವುದೋ ಹಿಂದೀ ಸಭೆಯಿದೆಯಂತಲ್ಲ, ಅದಕ್ಕೆ ಒಬ್ಬ ಹಿಂದೀ ಮೇಷ್ಟರನ್ನು ಕಳಿಸಬೇಕೆಂದು ಬರೆದುಕೊಂಡಿದ್ದರಂತೆ. ಅವರು ನಿಮ್ಮ ಹುಡುಗನನ್ನು ಕಳುಹಿಸಿದರು. ಮೊದಲು ಮೂವತ್ತೋ ನಲವತ್ತೋ ಕ್ಲಬ್ಬಿನ ಹಣದಲ್ಲಿ ಕೊಟ್ಟರು ಎಂದು ಕಾಣುತ್ತದೆ. ನಿಮ್ಮ ಮಕ್ಕಳು ಆಫೀಸರುಗಳನ್ನೆಲ್ಲಾ

ಸ್ನೇಹಮಾಡಿ ಬಿಟ್ಟಿದ್ದಾರೆ. ಇವರು ಇದ್ದರೆ ಊರು ಹೋದರೆ ಹಾಳು ಎನ್ನುವ ಸ್ಥಿತಿಗೆ ಬಂದಿದೆ. ಎರಡನೇ ತಿಂಗಳಲ್ಲಿಯೇ ಸಂಬಳ ಸಾಕಾಗುವುದಿಲ್ಲ. ನೂರು ರೂಪಾಯಿ ಕೊಟ್ಟರೆ ಇರುತ್ತೇನೆ. ಇಲ್ಲದಿದ್ದರೆ ಹೊರಟು ಹೋಗುತ್ತೇನೆ. ಎಂದರಂತೆ. ಯಾವುದೋ ಟೆಂಪರರಿ ಮೆಕ್ಯಾನಿಕಲ್ ಕೆಲಸ ಖಾಲೀ ಇತ್ತು. ಆ ಕೆಲಸಕ್ಕೆ ನಿಮ್ಮ ಮಕ್ಕಳನ್ನು ತೆಗೆದುಕೊಂಡಿರುವುದಾಗಿ ಬರೆಮುಕೊಂಡು ಸಂಬಳ ಕೊಡಿಸುತ್ತಿದ್ದಾರೆ. ತೊಂಬತ್ತೋ ಏನೋ? ಒಳ್ಳೇ ಮನೆ ಕೊಟ್ಟಿದ್ದಾರೆ. ಮನೆಯನ್ನು ನಿಮ್ಮ ಕುಟುಂಬ ನೋಡಿದ್ದಾರೆ. ಅವರು ಬಂದಿದ್ದರಲ್ಲ"

"ನೋಡಿದಿರಾ. ಇಷ್ಟೊಂದು ಒಳಸುಳಿಗಳಿವೆ. ಆದುದರಿಂದಲೇ ಅವನು ವಿಷಯವನ್ನು ಸ್ಪಷ್ಟವಾಗಿ ಹೇಳಲಿಲ್ಲ. ನಿಮ್ಮ ಮಗಳಿಗೂ ಈ ಮಾಧುವಿಗೂ ಪರಿಚಯವಾದದ್ದು ಹೇಗೆ?"

"ಆಫೀಸರುಗಳ ಹೆಂಡತಿಯರೆಲ್ಲರೂ ಹಿಂದೀ ಕಲಿಯುತ್ತಾರೆ. ನಿಮ್ಮ ಮಕ್ಕಳ ಮನೆಯಲ್ಲಿಯೇ ಹಿಂದೀ ಪಾಠಗಳು ನಡೆಯುತ್ತವೆ. ಊರಿನ ಹೆಂಗಸರೆಲ್ಲರೂ ಹೋಗಿ ಹಿಂದೀ ಕಲಿಯುತ್ತಾರೆಯಲ್ಲ ಎಂದು ನನ್ನ ಹುಡುಗಿಯನ್ನು ಕಳುಹಿಸಿದೆ. ಅಷ್ಟೇ ಅಲ್ಲ. ಸ್ಕೂಲಿನಲ್ಲಿ ಹಿಂದೀ ಹೇಳಿಕೊಡುವವರು ಇಲ್ಲದೇ ಇರುವುದರಿಂದ ಊರಿನ ಮಕ್ಕಳೆಲ್ಲರೂ ಹೋಗುತ್ತಾರೆ. ಅಲ್ಲಿ ಇವನೊಬ್ಬ ಸೇರಿಕೊಂಡು ಹೀಗಾಗಿದೆ"

"ಈ ಮಾಧುವಿಗೂ ಹಿಂದೀ ಹೇಳಿಕೊಡಲು ಬರುತ್ತದೆಯೇ?"

ಮಜ್ಜಿಗೆ ಬಡಿಸುತ್ತಿದ್ದ ಸೀತಮ್ಮನವರು "ಬರುತ್ತದೆ. ಅವನೂ ಪಾಠ ಹೇಳುತ್ತಿದ್ದಾನೆ. ಅದರಿಂದಲೇ ವೆಂಕಟೇಶೂ ಅವನನ್ನು ಇಟ್ಟುಕೊಂಡಿರುವುದು" ಎಂದರು.

"ಅವರು ಆ ಹುಡುಗನನ್ನು ಇಟ್ಟುಕೊಳ್ಳದಿದ್ದರೆ ಎಷ್ಟೋ ಚೆನ್ನಾಗಿತ್ತಮ್ಮ. ಇಂತಹ ಕೆಟ್ಟ ಜನರ ಸಹವಾಸ ಮಾಡಿದರೆ ನಮ್ಮ ಮಕ್ಕಳಿಗೆ ಗೌರವ ಬರುವುದಿಲ್ಲ"

ಸೀತಮ್ಮನವರು "ಹೋಗಲಿ ಬಿಡಿ. ಅದು ನೀವೆಂದುಕೊಂಡಿರುವಂತಹ ದೊಡ್ಡ ವಿಷಯವೇನೂ ಅಲ್ಲ, ಹುಡುಗತನ. ನಿಮ್ಮ ತಂಗಿ ಯಾರೋ

ಮೋಡಂ ಆಗಿರುವುದಾಗಿ ಹೇಳಿದಿರಲ್ಲಾ. ಅವರಿಗೆ ಈ ವಿಷಯವೇನಾದರೂ ಗೊತ್ತೇ ?" ಎಂದರು.

"ಯಾರಿಗೂ ಹೇಳಲಿಲ್ಲವಮ್ಮ. ನಾನೊಬ್ಬನೇ ಹೊಟ್ಟೆಯಲ್ಲಿಟ್ಟುಕೊಂಡು ಕೊರಗುತ್ತಿದ್ದೇನೆ. ವಿಧಿಯಿಲ್ಲದೇ ನಿಮ್ಮಗಳೆದುರಿಗೆ ಹೇಳಿಕೊಂಡೆ. ಅಂತೂ ಈ ದಿನವೇ ನಮ್ಮೊಡನೆ ಬಂದು ಕಾಪಾಡಬೇಕು"

"ಹಾಗೆ ಬೇಡ, ಮೇಷ್ಟರೆ! ನೀವು ಹೇಳಿದಂತೆ ಮಾಡಿದರೆ ಕೆಲಸ ಕೆಟ್ಟುಹೋಗುತ್ತದೆ. ನಿಮ್ಮಷ್ಟಕ್ಕೆ ನೀವು ಹೊರಟು ಹೋಗಿ. ಇಲ್ಲಿಗೆ ಬಂದಿದ್ದ ವಿಷಯ ಯಾರಿಗೂ ಸೂಕ್ಷ್ಮಕೊಡಬೇಡಿ. ನಾನು ಎರಡು ಮೂರು ದಿನಗಳಲ್ಲಿ ಬಂದು ಉಪಾಯದಿಂದ ಅವನನ್ನು ಹೊರಡಿಸಿ ಬಿಡುತ್ತೇನೆ. ಅವನು ಮೊಂಡುಬಿದ್ದು ಕುಳಿತುಕೊಂಡು ಬಿಟ್ಟರೆ ನಾವೇನು ಮಾಡಲಾಗುತ್ತದೆ. ಅವನೇನು ನಮ್ಮ ಹುಡುಗನೇ ? ಉಪಾಯದಿಂದ ಅವನನ್ನು ಸಾಗ ಹಾಕಬೇಕು"

"ಹಾಗೆಯೇ ಮಾಡಿರಮ್ಮ. ನೀವು ಎಲ್ಲವನ್ನೂ ತಿಳಿದವರು. ಹೆಣ್ಣು ಹೆತ್ತವರು. ನಾನೇನು ನಿಮಗೆ ಹೆಚ್ಚು ಹೇಳಬೇಕಾಗಿಲ್ಲ"

"ನಿಮ್ಮ ಹುಡುಗಿ ಹಿಂದೀ ಪಾಠಕ್ಕೆ ಹೋಗುತ್ತಿದ್ದಾಳೆಯೇ ?"

"ಇಲ್ಲಮ್ಮ. ನನಗೆ ಗೊತ್ತಾಗಿ ಎಂಟು ದಿನಗಳಾದುವು. ನಿಲ್ಲಿಸಿ ಬಿಟ್ಟೆ. ಹೊರಗೆ ಹೋಗಕೂಡದೆಂದು ಕಟ್ಟು ಮಾಡಿದ್ದೇನೆ"

"ಅದೇ ಗಂಡಸರಿಗೆ ತಿಳಿಯುವುದಿಲ್ಲವೆನ್ನುವುದು. ಅವಳಿಗೆ ಅಡ್ಡಿಮಾಡಬೇಡಿ. ಎಲ್ಲಿಗೆ ಬೇಕಾದರೂ ಹೋಗಿ ಬರಲಿ"

ಗುಂಡಪ್ಪ ಊಟವನ್ನು ಮುಗಿಸಿ ಕೈತೊಳೆದುಕೊಳ್ಳಲು ಹೋದರು. ಹಜಾರದಲ್ಲಿ ಬಂದು ಕುಳಿತುಕೊಂಡವರಿಗೆ ತಾಂಬೂಲವನ್ನು ತಂದಿಟ್ಟು ಸೀತಮ್ಮನವರು ಬಡಿಸಿಕೊಳ್ಳಲು ಅಡಿಗೆಮನೆಗೆ ಹೋದರು.

೨

ಎರಡು ಮೂರು ದಿನಗಳನಂತರ ಸೀತಮ್ಮನವರು ಶಿವನಸಮುದ್ರಕ್ಕೆ ಹೋದರು. ಅವರು ಒಂದೂವರೆ ತಿಂಗಳ ಮೊದಲು ಹೋಗಿದ್ದಾಗ ಹೇಗಿದ್ದಿತೋ ಹಾಗೆಯೇ ಇದ್ದಿತು. ಅದೇ ಮನೆ. ಅದೇ ಸ್ಥಿತಿ. ಮೊದಲಿನಂತೆಯೇ ವಯಸ್ಸಾದ ಹೆಂಗಸರು ಬಂದು ಪಾಠ ಹೇಳಿಸಿಕೊಳ್ಳುತ್ತಾರೆ. ಬೆಳಗಾಗ ಸಾಯಂಕಾಲದ ಹೊತ್ತು ಊರಿನ ಗಂಡುಮಕ್ಕಳು ಹೆಣ್ಣುಮಕ್ಕಳು ಪಾಠಕ್ಕೆ ಬರುತ್ತಾರೆ.

ವೆಂಕಟೇಶುವಿನ ಮನೆಯೂ ಸ್ಕೂಲಿನಂತೆಯೇ ಇದ್ದಿತು. ಆದರೆ ಸ್ಕೂಲಿನಲ್ಲಿ ಯಾರೂ ವಾಸಮಾಡುವುದಿಲ್ಲ. ಇಲ್ಲಿ ವೆಂಕಟೇಶನೂ ಅವನ ಸ್ನೇಹಿತ ಮಾಧುವೂ ವಾಸಮಾಡುತ್ತಾರೆ. ಅಷ್ಟೇ ವ್ಯತ್ಯಾಸ.

ಮನೆಯಲ್ಲಿ ಕೆಲಸದವಳಿದ್ದಾಳೆ. ಬೆಳಗಾಗ ಸಾಯಂಕಾಲ ಬಂದು ಗುಡಿಸುತ್ತಾಳೆ. ಹುಡುಗರು ಎರಡು ಹೊತ್ತು ಕಾಫಿ ಮಾಡಿಕೊಳ್ಳುತ್ತಾರೆ. ಪುರಸೊತ್ತಿದ್ದರೆ ಸಾರೋ ಹುಳಿಯೋ ಮಾಡುತ್ತಾರೆ. ಇಲ್ಲದಿದ್ದರೆ ಅದನ್ನು ಹೋಟಲಿನಿಂದಲೇ ತರುತ್ತಾರೆ.

ಬೀದಿಯ ಬಾಗಿಲು ಕೋಣೆಯಲ್ಲಿ ವೆಂಕಟೇಶನ ಮತ್ತು ಮಾಧುವಿನ ಹಾಸಿಗೆಗಳೂ ಬಟ್ಟೆಗಳೂ ಇರುತ್ತವೆ. ಸಾಧಾರಣವಾಗಿ ಅವರಿಬ್ಬರೂ

ಹಗಲು ಹೊತ್ತು ಅಲ್ಲಿಗೆ ಹೋಗುವುದೇ ಇಲ್ಲ. ಹಜಾರದ ಒಳಬಾಗಿಲೂ ಅಷ್ಟೇ. ಸಾಧಾರಣವಾಗಿ ಹಾಕಿಯೇ ಇರುತ್ತದೆ. ಕ್ಲಬ್ಬಿನಿಂದ ದೊಡ್ಡ ಜಮಖಾನ ಕೊಟ್ಟಿದ್ದಾರೆ. ಅದನ್ನು ವಿಶಾಲವಾದ ಹಜಾರದಲ್ಲಿ ಹಾಸಿದ್ದಾರೆ. ನಡುವೆ ಕಿಟಕಿಯ ಕೆಳಗೆ ಸಣ್ಣ ಕಾಲುಮಣೆಯನ್ನಿಟ್ಟು ಅದರ ಮೇಲೆ ಒಂದು ಗಾಂಧೀ ಪ್ರತಿಮೆಯನ್ನು ಇಟ್ಟಿದ್ದಾರೆ. ಕೊರಳಿಗೆ ಕೈನೂಲಿನ ದಾರದ ಹಾರಹಾಕಿಕೊಂಡು ಆ ಪುಣ್ಯಾತ್ಮ ನಗುತ್ತಾ ಕುಳಿತಿದ್ದಾನೆ.

ವೆಂಕಟೇಶನೂ ಮಾಧುವೂ ಬೆಳಗಿನಿಂದ ಸಂಜೆಯವರೆವಿಗೆ ಅದೇ ಹಜಾರದಲ್ಲಿ. ಅದೇ ಜಮಖಾನದ ಮೇಲೆ ಕುಳಿತಿರುತ್ತಾರೆ. ಬಂದವರಿಗೆ ಪಾಠವನ್ನು ಹೇಳಿ ಕೊಡುತ್ತಿರುತ್ತಾರೆ.

ಸೀತಮ್ಮನವರು ಬಂದ ಮೇಲೆ ಅಡಿಗೆಗೆ ಕಳೆಬಂದಿತು. ಹೋದ ದಿನ ಸಾಯಂಕಾಲ ರುಚಿಯಾದ ಸಾರು, ಹುರುಳೀಕಾಯಿ ಪಲ್ಯ ಕಾಯಿಚಟ್ನಿಗಳನ್ನು ಮಾಡಿದ್ದರು.

ವೆಂಕಟೇಶ ಸಾರನ್ನ ತಿಂದ ಮೇಲೆ ಚಟ್ನಿಯಲ್ಲಿ ಕಲಸಿಕೊಂಡು "ಅಮ್ಮ, ನೀನು ಇಲ್ಲಿಯೇ ಇದ್ದು ಬಿಡಬಾರದೇಕೇ" ಎಂದ.

"ಇರಬಹುದು. ಮೊದಲಿನಿಂದಲೂ ಇದ್ದಿದ್ದರೆ ಚೆನ್ನಾಗಿಯೇ ಇದ್ದಿತು ಎನ್ನು. ಆದರೆ ನೀನು ಮಹಾ ಸಂಪಾದನೆ ಮಾಡುತ್ತೀ ಎಂದು ಇಲ್ಲಿರಬೇಕು-ಎನ್ನು"

ಎಷ್ಟು ಸಂಪಾದನೆಯೋ? ಆ ಮಾತೆಲ್ಲಾ ಏಕೆ? ಮನೆಯಲ್ಲಿ ಸಾಮಾನು ಇಲ್ಲದಿದ್ದರೆ ಕೇಳು. ಯೋಚನೆ ಮಾಡಮ್ಮ. ಇಲ್ಲಿ ಒಲೆ ಹಚ್ಚುವ ಕಷ್ಟವಿಲ್ಲ. ಸ್ವಿಚ್ ಹಾಕಿದರೆ ಅಡಿಗೆಯಾಗುತ್ತದೆ. ನೀರು ಕಾಯುತ್ತದೆ. ಅದೂ ಅಲ್ಲದೇ ಬೆಂಗಳೂರಿನಷ್ಟು ಕೆಲಸವೂ ಇಲ್ಲ. ನಿನಗೆ ರೆಸ್ಟು ಸಿಕ್ಕಿದಂತೆ ಆಗುತ್ತದೆ"

"ನಾನಿಲ್ಲಿ ಕುಳಿತುಕೊಂಡರೆ ಮನೇ ಕಡೆ ಯಾರೋ?"

"ಅತ್ತಿಗೆಯರಿಬ್ಬರಿಲ್ಲವೇ. ಅವರು ನೋಡಿಕೋತಾರೆ. ನೀನೇ ಗೂಟ ಹೊಡೆದುಕೊಂಡು ಕುಳಿತಿರಬೇಕೇ?"

"ಅದು ಬೇಡ. ನೀನು ಮದುವೆ ಮಾಡಿಕೊಂಡು ಬಿಡು. ಆಗ ನಿನ್ನ ಹೆಂಡತಿ ರುಚಿರುಚಿಯಾಗಿ ಮಾಡಿ ಬಡಿಸುತ್ತಾಳೆ. ನೀನು ಅಮ್ಮ ಒಬ್ಬಳಿದ್ದಾಳೆಂದು ಸಹ ಮರೆತು ಬಿಡುತ್ತೀಯೆ?"

ವೆಂಕಟೇಶ ಮಾತನಾಡುವಷ್ಟರಲ್ಲಿ ಮಾಧು ಬಾಯಿಹಾಕಿ "ಹಾಗೆ ಮಾಡಿಬಿಡೀಮ್ಮ. ಈ ಅಣ್ಣನಿಗೊಂದು ಮದುವೆ ಮಾಡಿಬಿಡಿ. ಅತ್ತಿಗೆ ಬಂದರೆ ನನಗೂ ಅನುಕೂಲ. ಸುಖವಾಗಿರಬಹುದು" ಎಂದ.

ಸೀತಮ್ಮ ನಗುತ್ತಾ "ಅವನಿಗಿಂತಲೂ ಮೊದಲು ನಿಮಗೆ ಮದುವೆ ಮಾಡಬೇಕು, ಮಾಧು" ಎಂದರು.

ಅವನು ಸೀತಮ್ಮನವರ ನಗುವಿನ ಸೂಕ್ಷ್ಮವನ್ನು ಅರಿಯಲಾಗದೇ "ಹುಡುಗನಾದ ನನಗೀಗಲೇ ಮದುವೆಯಾಕಮ್ಮ" ಎಂದ.

"ಬೇಡಪ್ಪ. ಮದುವೆ ಬೇಡ. ಗೂಳಿಯಂತೆ ತಿರುಗುತ್ತಿರಲು ನಿನ್ನನ್ನು ಬಿಟ್ಟುಬಿಟು.... —"

ಭೋಜನ ಮುಗಿಯಿತು. ಆ ದಿನವೇನೂ ಅವರು ತಾವು ಬಂದ ವಿಷಯವನ್ನು ಕುರಿತು ಮಾತನಾಡಲಿಲ್ಲ.

ಬಂದ ದಿನವೂ ಮಾರನೆಯ ದಿನವೂ ಸೀತಮ್ಮನವರು ಗಮನಿಸಿ ನೋಡಿದರು. ಆ ಎರಡು ದಿನವೂ ಪ್ರಮೀಳೆಯು ಹಿಂದೀ ಹೇಳಿಸಿಕೊಳ್ಳಲು ಬಂದಳು. ಪಾಠವಾದ ಮೇಲೆ ಮಾಧವೂ ಪ್ರಮೀಳೆಯು ಎಲ್ಲಿಯಾದರೂ ಪ್ರತ್ಯೇಕವಾಗಿ ಹೊರಟು ಹೋಗುತ್ತಾರೆ ಏನೋ ಎಂದು ಸೀತಮ್ಮ ನಿರೀಕ್ಷಿಸಿದರು. ಅವರು ಹಾಗೇನೂ ಹೋಗಲಿಲ್ಲ. ಪಾಠವಾದನಂತರ ಇತರರು ಹೊರಟು ಹೋದಂತೆ ಪ್ರಮೀಳೆಯು ಹೊರಟು ಹೋಗುತ್ತಿರಲಿಲ್ಲ. ಹಿಂದೀ ಮೇಷ್ಟರ ಮನೆಯಲ್ಲಿಯೇ ಇರುತ್ತಿದ್ದಳು. ಇಬ್ಬರೂ ಹಜಾರದಲ್ಲಿಯೇ ಮಾತನಾಡುತ್ತಾ ಕುಳಿತುಕೊಳ್ಳುವರು. ಹೊತ್ತಾಗಿ ಪ್ರಮೀಳೆಯು ಮನೆಗೆ ಹೋಗುವಂತಹ ಸಮಯವಾಗಲು ಎದ್ದು ಹೊರಗೆ ಹೋಗುವರು. ಆ ಬೀದಿಯಲ್ಲಿ ಹೆಚ್ಚು ಜನ ಸಂಚಾರವಿರುತ್ತಿರಲಿಲ್ಲ. ಅಲ್ಲಿಯೇ ನಿಂತು ಮಾತನಾಡುವರು

ಹಾಳು ಮಾತು. ಏನು ಮಾತುಗಳೋ! ಅವು ಜೀವಸಹಿತವಾದ

ಬಾಯಿಗಳು. ಇಲ್ಲದೇ ಮರದಲ್ಲಿ ಮಾಡಿದವುಗಳಾಗಿದ್ದರೆ ಮುಂದು ಹೋಗು ತ್ತಿದ್ದವು.

ಅನಂತರ ಪ್ರಮಿಳೆ ಅಲ್ಲಿಂದ ಮನೆಗೆ ಹೊರಟು ಹೋಗುತ್ತಿದ್ದಳು. ಮಾಧುವು ವಾಪ್ಸು ಬರುತ್ತಿದ್ದ.

ಅವರಿಬ್ಬರೂ ಮಾತನಾಡುತ್ತಾ ಕುಳಿತುಕೊಂಡಿದ್ದಾಗ ನಿಂತುಕೊಂಡಿದ್ದಾಗ ಸೀತಮ್ಮನವರು ಅಂದುಕೊಳ್ಳುತ್ತಿದ್ದರು.

"ಪಾಪ. ಏನೂ ತಪ್ಪುಮಾಡದ ಹಸುಗೂಸುಗಳವರು. ಇಬ್ಬರೂ ನೋಡುವುದಕ್ಕೆ ಲಕ್ಷಣವಾಗಿದ್ದಾರೆ. ಒಬ್ಬರನ್ನೊಬ್ಬರು ನೋಡಿ ಪ್ರೀತಿಸುತ್ತಿದ್ದೇವೆಂದುಕೊಂಡಿದ್ದಾರೆ. ಅದರಲ್ಲಿ ತಪ್ಪೇನು ? ಹುಡುಗಿಗೆ ಹುಡುಗ ಸರಿಯಾದ ವಯಸ್ಸಿನವನಲ್ಲವೆಂಬುದಂತೂ ವಾಸ್ತವ. ಆದರೆ ಅನುರೂಪನಾದ ವರ. ಯಾಕೆ ಮದುವೆ ಮಾಡಬಾರದು-ಎಂದುಕೊಳ್ಳುತ್ತಿದ್ದರು.

ಆದರೆ ಆಕೆ ಬಂದಾಗಲೇ ಎರಡು ದಿನಗಳಾಗಿದ್ದವು. ಬಂದುದರಲ್ಲಿ ಒಂದು ಉದ್ದೇಶವೂ ಇತ್ತು. ಅದನ್ನು ತೀರಿಸಿಕೊಳ್ಳದೇ ಹೊರಡುವುದಕ್ಕಾಗುತ್ತದೆಯೇ ? ಹೊರಡದೇ ಇಲ್ಲಿಯೇ ಇರುವುಕ್ಕಾಗುತ್ತಯೆ ?

ಬಂದ ಮೂರನೆಯ ದಿನ ಮಾಧುವಿಲ್ಲದ ಸಮಯವನ್ನು ಸಾಧಿಸಿ ಮಗನೊಂದಿಗೆ ಹೇಳಿದರು.

"ವೆಂಕಟೇಶು. ನಾನೊಂದು ಮಾತು ಹೇಳುತ್ತೇನೆ. ಕೇಳುತ್ತೀಯ ?"

"ಹೇಳಮ್ಮ, ನೀನು ಹೇಳಿದ ಮಾತಿಗೆ ನಾನೆಂದಾರೂ ಇಲ್ಲವೆಂದಿದ್ದೇನೆಯೇ ?"

"ನೀನು ನನ್ನ ಮಾತು ತೆಗೆದು ಹಾಕುವುದಿಲ್ಲವೆಂಬ ನಂಬಿಕೆಯಿಂದಲೇ ಬಂದಿದ್ದೇನೆ"

ತಾಯಿ ತನ್ನನ್ನು ನೋಡುವುದಕ್ಕೆ ಬಂದಿದ್ದಾಳೆ ಎಂದು ವೆಂಕಟೇಶ ಭಾವಿಸಿರಲಿಲ್ಲ. ಏನೋ ಎರಡು ದಿನ ಮಗನೊಂದಿಗೆ ಇದ್ದುಕೊಂಡು ಹೋಗಲಿ ಬಂದಿದ್ದಾಳೆ - ಎಂದುಕೊಂಡಿದ್ದ. ಅಮ್ಮಾ ತಾನು ಬಂದದ್ದು ಯಾವುದೋ ಕಾರಣಕ್ಕೆ ಎಂದು ಹೇಳಿದಾಗ ಆ ಕಾರಣವೇನು ತಿಳಿದುಕೊಳ್ಳಬೇಕೆಂದು ಅವನಿಗೆ ಮನಸ್ಸಾಯಿತು.

"ಪೀಠಿಕೆ ಎಲ್ಲಾ ಇರಲಿ. ನೀನು ಬಂದ ವಿಷಯವೇನು, ಹೇಳಮ್ಮ."

"ಹೇಳುತ್ತೇನಪ್ಪಾ. ಹೇಳದಿದ್ದರಾಗುತ್ತದೆಯೇ ? ನೀನು ಮಾಧುವನ್ನು ಇಲ್ಲಿಂದ ಕಳುಹಿಸಿಬಿಡಬೇಕು."

ಆ ಮಾತು ಕೇಳಿ ವೆಂಕಟೇಶನಿಗೆ ಗಾಬರಿಯಾಯಿತು.

"ಯಾಕಮ್ಮ ಅವನ ಮೇಲೆ ನಿನಗೆ ಅಷ್ಟೊಂದು ಕೋಪ. ನೀನು ಎಂದರೆ ಅವನು ಹೆತ್ತತಾಯಿಗಿಂತಲೂ ಹೆಚ್ಚಾಗಿ ವಿಶ್ವಾಸ ಮಾಡುತ್ತಾನೆ. ಹಾಗಿರುವಾಗ ನೀನು ಅವನನ್ನು ಹೊರಡಿಸಬೇಕು–ಎಂದು ಹೇಳುತ್ತೀಯಲ್ಲಾ ?"

"ನನಗೇನು ಅವನ ಮೇಲೆ ಈರ್ಷೆಯಿಲ್ಲ. ಅವನ ಮತ್ತು ನಿನ್ನ ಇಬ್ಬರ ಹಿತದಿಂದಲೂ ಹೇಳುತ್ತಿದ್ದೇನೆ. ಅವನನ್ನು ಈ ದಿನವೇ ಕಳುಹಿಸಿಬಿಡು."

"ಯಾಕೆ, ಅವನೇನು ಮಾಡಿದ ?"

"ಏನು ಮಾಡಿದ ಅಂತೀಯಲ್ಲಾ ತಿಳಿಯದವನಂತೆ. ಅವನು ಮೇಸ್ಟರು ಗುಂಡಪ್ಪನವರ ಮಗಳು ಪ್ರಮಿಳೆಯನ್ನು ಪ್ರೀತಿ ಮಾಡುತ್ತಿದ್ದಾನಂತೆ. ಗೇಣುದ್ದದ ಹುಡುಗರು. ಪ್ರೀತಿ ಎಂದರೇನು ? ಹೀಗೆಲ್ಲಾ ಮಾಡಿದರೆ ಮಾನ ಬರುತ್ತದೆಯೇನೋ ?"

ಗಮನಿಸಬೇಕಾಗಿಲ್ಲದ ವಿಷಯವನ್ನು ಅಮ್ಮ ದೊಡ್ಡದು ಮಾಡಿ ಮಾತನಾಡುತ್ತಿದ್ದಾಳೆಂಬ ಧೋರಣೆಯಲ್ಲಿ "ಅವರವರು ಪ್ರೀತಿ ಮಾಡಿದರೆ ತಪ್ಪೇ. ಗುಂಡಪ್ಪನವರು ಬಂದು ಈ ವಿಷಯ ನನ್ನೊಂದಿಗೆ ಹೇಳಿದರು. ನಾನು ಅದೇ ದಿವಸ ಪ್ರಮಿಳೆ ಮಾಧೂ ಇಬ್ಬರನ್ನೂ ಇಟ್ಟುಕೊಂಡು ಕೇಳಿದೆ. ಅವರು ಪರಸ್ಪರ ಪ್ರೀತಿಸುತ್ತಿರುವುದಾಗಿ ಹೇಳಿದರು. ಅಪ್ಪ ಅಮ್ಮ ಕಟ್ಟಿದ ಗೂಟಕ್ಕೆ ನೇತು ಬಿಡಿಯುವುದು ಪ್ರಯೋಜನವಿಲ್ಲವೆಂದೂ, ಗಂಡು ಹೆಣ್ಣುಗಳು ಪರಸ್ಪರ ಪ್ರೀತಿಸಿ ಮದುವೆ ಮಾಡಿಕೊಳ್ಳಬೇಕೆಂದೂ ಹೇಳಿದರು. ಎಷ್ಟೇ ನಿಷ್ಠೂರ ಬಂದರೂ, ಕಷ್ಟಗಳು ಬಂದರೂ ತಾವು ಮದುವೆ ಮಾಡಿಕೊಳ್ಳುವುದಾಗಿಯೂ ಹೇಳಿದರು" ಎಂದ.

"ಅದೇ ನಾನು ಹೇಳುತ್ತಿರುವುದು. ಅದರಿಂದಲೇ ಅವನನ್ನು ಇಲ್ಲಿಂದ ಹೊರಡಿಸಬೇಕೆಂದು ಹೇಳುತ್ತಿರುವುದು."

"ಅವನದೇನು ತಪ್ಪು ಹೇಳು, ಅವರುಗಳು ಇಬ್ಬರೂ ಸೇರಿ ಒಂದು

ಹೋದರೆ ? ಮದುವೆ ಮಾಡಿಕೊಂಡು ಬಿಟ್ಟರೆ ? ಎಷ್ಟೋ ಮದುವೆಯ ಮಾತುಕತೆಗಳು ಬರುತ್ತವೆ. ನಿನಗೆ ಜ್ಞಾಪಕವಿಲ್ಲವೇನಮ್ಮ. ನಮ್ಮಣ್ಣ ವಾಸುವಿಗೆ ಎಷ್ಟೊಂದು ಹೆಣ್ಣುಗಳು ಬಂದುವು. ಆಗೆಲ್ಲಾ ಆ ಹೆಣ್ಣುಗಳು ವಾಸುವಿನ ಹೆಂಡತಿಯರೆಂದೂ, ಆ ಹುಡುಗಿಯರಿಗೆ ವಾಸುವೇ ಗಂಡನೆಂದೂ ಮಾತನಾಡಿದೆ. ಅಷ್ಟರಿಂದಲೇ ಅವರೆಲ್ಲಾ ಗಂಡ ಹೆಂಡಿರೇ ಆದರೆ ? ಗಂಡು ಹೆಣ್ಣು ಅಂತ ಇದ್ದ ಮೇಲೆ ಇಂತಹ ಮಾತುಗಳು ಎಷ್ಟೋ ಬರುತ್ತವೆ. ಇವಕ್ಕೇಕೆ ನೀನು ಇಷ್ಟೊಂದು ಗಾಬರಿ ಪಡಬೇಕು – ಅಂತ."

"ಈ ವಿಷಯ ಹಾಗಲ್ಲ, ವೆಂಕಟೇಶೂ. ನಾನು ಹೇಳುವುದನ್ನು ಕೇಳು. ನೀವುಗಳಿಬ್ಬರೂ ಮೇಸ್ಟರುಗಳು. ಶಿಷ್ಯರನ್ನು ಪ್ರೀತಿಸಿ ಮದುವೆ ಮಾಡಿಕೊಳ್ಳುತ್ತೀರೆಂದು ಗೊತ್ತಾದರೆ ನಿಮ್ಮಲ್ಲಿ ಪಾಠಹೇಳಿಸಿಕೊಳ್ಳುವುದಕ್ಕೆ ಯಾರು ಬರುತ್ತಾರೆ ? ಸ್ವಲ್ಪ ನಾನು ಹೇಳುವ ವಿಷಯವನ್ನು ಆಲೋಚನೆ ಮಾಡಿ ನೋಡು."

"ನೀನು ಹೇಳುವುದು ಚೆನ್ನಾಗಿದೆ ಅಮ್ಮ. ಇಲ್ಲಿ ದಿನವೂ ಹತ್ತಾರು ಮಂದಿ ಹೆಂಗಸರು ಬಂದು ಪಾಠ ಹೇಳಿಸಿಕೊಳ್ಳುತ್ತಾರೆ. ಅವರನ್ನೆಲ್ಲಾ ಪ್ರೀತಿಸುತ್ತಾರೆಯೇ ? ನಾನು ಈಗ ಯಾರನ್ನಾದರೂ ಪ್ರೀತಿಸಿದ್ದೇನೆಂದು ನಿನ್ನ ಕಿವಿಗೆ ಬಿದ್ದಿದೆಯೆ ? ಋಣಾನುಬಂಧದಿಂದ ಒಮ್ಮೊಮ್ಮೆ ಹೀಗಾಗುವುದುಂಟು. ಮೈಸೂರಿನಲ್ಲಿ ನನ್ನ ಸ್ನೇಹಿತ ಒಬ್ಬನಿದ್ದಾನೆ. ಬೆಂಗಳೂರಿನಲ್ಲಿ ಅವನೂ ನನ್ನೊಂದಿಗೆ ಹಿಂದೀ ಕಲಿಯುತ್ತಿದ್ದ. ಅವನು ಪ್ರಚಾರಕನಾಗಿ ಮೈಸೂರಿಗೆ ಹೋದ. ಅಲ್ಲಿ ತನ್ನಲ್ಲಿ ಪಾಠ ಹೇಳಿಸಿಕೊಳ್ಳಲು ಬರುತ್ತಿದ್ದವಳನ್ನು ಪ್ರೀತಿಸಿ ಮದುವೆಯಾದ. ಇಷ್ಟಕ್ಕೂ ಅವರು ಬೇರೆಬೇರೆ ಜಾತಿ. ಗಂಡ ಹೆಂಡಿರು ಸುಖವಾಗಿಯೇ ಇದ್ದಾರೆ. ಇಬ್ಬರೂ ಹಿಂದೀ ಹೇಳಿಕೊಟ್ಟು ಜೀವನ ಮಾಡುತ್ತಾರೆ. ಅವರನ್ನು ಯಾರು ತಾನೇ ಅನ್ನುತ್ತಾರೆ ? ಮಾಧು ವಿಷದೂ ಹಾಗೆಯೇ ಆಗುತ್ತದೆ. ನೀನು ನೋಡುತ್ತಿರು. ಇಷ್ಟರಲ್ಲಿಯೇ ಮಾಧುವಿಗೂ ಪ್ರಮಿಳೆಗೂ ನಮ್ಮ ಕ್ಲಬ್ಬಿನಲ್ಲಿಯೇ ಮದುವೆ ಮಾಡಿಸುತ್ತೇನೆ"

"ಅದೆಲ್ಲಾ ಆಗುವುದಿಲ್ಲ. ಮೊನ್ನೇ ದಿನ ಮೇಸ್ಟರು ಗುಂಡಪ್ಪ ನಮ್ಮೂರಿಗೆ ಬಂದಿದ್ದರು. ನಮ್ಮ ಮನೆಗೆ ಬಂದು ಈ ವಿಷಯ ನಿಮ್ಮಪ್ಪನೊಡನೆ

ಮಾತನಾಡಿದರು. ನಿಮ್ಮಪ್ಪ ಹಾರಾಡುತ್ತಾ ಕುಳಿತುಕೊಂಡಿದ್ದಾರೆ. ನೀನು ಮಾಧುವನ್ನು ಇಲ್ಲಿಂದ ಕಳುಹಿಸದೇ ಇದ್ದರೆ ತಾವು ದೇಶಾಂತರ ಹೋಗುವುದಾಗಿ ಹೇಳುತ್ತಾರೆ. ಹಾಗೇನಾದರೂ ಆದರೆ ನಾನೂ ಕೆರೆಯನ್ನೋ ಭಾವಿಯನ್ನೋ ನೋಡಿಕೊಳ್ಳಬೇಕಾಗುತ್ತದೆ."

ವೆಂಕಟೇಶನು ಸ್ವಲ್ಪಹೊತ್ತು ಯೋಚನೆ ಮಾಡಿ "ಆಗಲಮ್ಮ. ಹಾಗೆಯೇ ಆಗಲಿ. ನಾಳೆಯ ದಿನ ಸಾಯಂಕಾಲದೊಳಗಾಗಿ ನಾವು ಇಲ್ಲಿಂದ ಪ್ರಯಾಣ ಮಾಡಿ ಬಿಡೋಣ" ಎಂದು ಹೇಳಿದ.

"ಪ್ರಯಾಣ ಮಾಡಿಬಿಡೋಣ ಎಂದರೇನೋ ?"

"ನಾನೂ, ನೀನೂ, ಸಾಧು ಎಲ್ಲರೂ ಹೊರಟು ಬಿಡೋಣ. ನಾನು ಪುನಃ ಈ ಊರಿನ ಮುಖ ನೋಡುವುದಿಲ್ಲ."

"ಅಲ್ಲವೋ ? ನೀನೇಕೆ ಪ್ರಯಾಣ ಮಾಡಬೇಕೋ ? ಅವನನ್ನು ಕಳಿಸಿಬಿಡು ಎಂದು ಹೇಳಿದರೆ ನೀನೇಕೆ ಹೊರಡುತ್ತೇನೆಂದು ಹೇಳುತ್ತೀ ? ಎಲ್ಲಿಯಾದರೂ ಉಂಟೇನೋ ?"

"ಅದಾಗುವುದಿಲ್ಲವಮ್ಮ. ಅವನು ಏನಾದರೂ ತಪ್ಪು ಮಾಡಿದ್ದರೆ ಮುಖದ ಮೇಲೆ ಹೊಡೆದು ಹೊರಗೆಹೋಗು ಎಂದು ಹೇಳುತ್ತಿದ್ದೆ. ಈಗ ಹುಡುಕಿದರೂ ಅವನಲ್ಲಿ ತಪ್ಪು ಕಂಡು ಬರುವುದಿಲ್ಲ. ಅವನೊಬ್ಬ ಹುಡುಗಿಯನ್ನು ಪ್ರೀತಿಸುತ್ತಾನೆ. ಅವಳನ್ನು ಮನಸಾರ ಪ್ರೀತಿ ಮಾಡುತ್ತಾನೆ. ಅದು ತಪ್ಪೇ ? ನನಗಂತೂ ತಪ್ಪಾಗಿ ಕಂಡು ಬರುವುದಿಲ್ಲ. ನನ್ನ ಆತ್ಮಸಾಕ್ಷಿಗೆ ವಿರೋಧವಾಗಿ ''ನೀನು ತಪ್ಪು ಮಾಡಿದ್ದೀಯೆ. ಹೊರಟುಹೋಗು" ಎಂದು ಹೇಳುವುದಕ್ಕೆ ನನಗೆ ಮನಸ್ಸು ಬರುವುದಿಲ್ಲ. ಆದರೆ ಸಂದರ್ಭ ಸುಮ್ಮನಿರುವಂತಿಲ್ಲ. ಆದದರಿಂದ ನಾನೇ ಇಲ್ಲಿಂದ ಹೊರಟು ಹೋಗುತ್ತೇನೆ"

"ಏನಾದರೂ ಆಗಲಿ. ನೀನು ಹೊರಡಬೇಕಾಗಿ ಬಂದರೂ ಸರಿಯೇ. ಅವನು ಇಲ್ಲಿರಕೂಡದು. ನೀನು ಏನು ಏರ್ಪಾಟು ಮಾಡಿಕೊಳ್ಳುತ್ತೀಯೋ ಮಾಡಿಕೋ. ನಾಳೆಯ ದಿನ ಸಾಯಂಕಾಲದೊಳಗಾಗಿ ಅವನಾದರೂ ಊರುಬಿಟ್ಟು ಹೋರಡಬೇಕು. ನಾವಾದರೂ ಅವನನ್ನು ಕರೆದುಕೊಂಡು ಇಲ್ಲಿಂದ ಹೊರಟು ಹೋಗಬೇಕು."

ಸೀತಮ್ಮನವರು ಹೇಳಿದ್ದು ಖಡಾಖಡಿಯಾಗಿತ್ತು. ಏನು ಮಾಡಿದರೂ ಅವರು ತಮ್ಮ ಮನಸ್ಸು ಬದಲಾಯಿಸುವುದಿಲ್ಲವೆಂಬ ಅರ್ಥ ಆ ಮಾತಿನಲ್ಲಿ ಅಡಕವಾಗಿತ್ತು.

ತನ್ನ ಆತ್ಮಸಾಕ್ಷಿಗೆ ವಿರೋಧವಾಗಿ ಮಾಧುವನ್ನು ಹೊರಟುಹೋಗು ಎಂದು ಹೇಳುವುದಿಲ್ಲವೆಂದು ವೆಂಕಟೇಶ ಹೇಳುವುದಂತೂ ಹೇಳಿದ್ದ. ಮಾತಿನ ಭರದಲ್ಲಿ ಅದು ನ್ಯಾಯವಾಗಿಯೂ ಕಂಡಿತು. ಆದರೆ ಆ ಉದ್ವೇಗ ಕಳೆದು ಮನಸ್ಸು ಶಾಂತವಾದ ಮೇಲೆ ತಾನು ಹೇಳಿದ್ದು ಸರಿಯಲ್ಲವೆಂದು ಎನ್ನಿಸಿತು. ತನಗೂ ಮಾಧುವಿಗೂ ಏನು ಸಂಬಂಧ ? ಅವನಿಗಾಗಿ ತನ್ನ ಜೀವನವನ್ನೇಕೆ ಹಾಳು ಮಾಡಿಕೊಳ್ಳಬೇಕು.

ವೆಂಕಟೇಶ ಶಂಕರನಾರಣಪ್ಪನವರ ಮೂರನೆಯ ಮಗ. ಮೊದಲ ನೆಯ ಅಣ್ಣ ಬಳೇಪೇಟೆಯಲ್ಲಿ ಅಂಗಡಿಯನ್ನಿಟ್ಟುಕೊಂಡು ಟೈಪಿಸ್ಟ್ ಆಗಿದ್ದ. ದಿನಕ್ಕೆ ಏಳೂ ಎಂಟೂ ಸಂಪಾದನೆಯಾಗುತ್ತಿತ್ತು. ಎರಡನೆಯವನು ಬಿ.ಎಸ್.ಸ್ಸಿ ಮಾಡಿಕೊಂಡು ಖಾಸಗೀ ಹೈಸ್ಕೂಲೊಂದರಲ್ಲಿ ಮೇಸ್ಟರಾಗಿದ್ದ. ಕಡೆಯವನು ಓದುತ್ತಿದ್ದ.

ಇವನು ಮಾತ್ರ ಏನೋ ಆಗಿ ಓದಲಿಲ್ಲ. ಸ್ಕೂಲು ಬಿಟ್ಟುಬಿಟ್ಟು ಮನೆಯಲ್ಲಿಯೇ ಇದ್ದ. ಅಣ್ಣಂದಿರು ತಮ್ಮ ತಮ್ಮ ಮೂಗಿನ ನೇರಕ್ಕೆ ಸರಿ ಯಾಗಿ ಅವನಿಗೆ ಮಾರ್ಗ ತೋರಿಸಿದ್ದರು. ದೊಡ್ಡಣ್ಣ "ಟೈಪಿಂಗ್ ಕಲಿತೋ: ನನ್ನ ಅಂಗಡಿಗೆ ಬಂದು ನನಗೆ ಸಹಾಯ ಮಾಡು" ಎಂದಿದ್ದ. ಸಣ್ಣಣ್ಣ ವಯಸ್ಸಾದರೇನು ? ಕಷ್ಟಪಟ್ಟು ಓದು. ಈ ಕಾಲದಲ್ಲಿ ಎಸ್ಸೆಸ್ಸೆಲ್ಸಿಯಾದರೂ ಮಾಡದಿದ್ದರೆ ಪ್ರಯೋಜನವಿಲ್ಲ ಎಂದು ಹೇಳುತ್ತಿದ್ದ. ಅಪ್ಪ ಯಾವು ದೊಂದು ಸಲಹೆಯನ್ನೂ ಮಾಡದೇ "ನಿನಗೆ ದಂಡ ಪಿಂಡಾ ಹಾಕುವುದು ನನ್ನ ಹಣೆಯ ಬರಹ. ತಿಂದುಕೊಂಡು ಬಿದ್ದಿರು" ಎಂದಿದ್ದರು.

ಅದಾವುದನ್ನೂ ಮಾಡದೇ ವೆಂಕಟೇಶ ಹಿಂದೀ ಕಲಿಯತೊಡಗಿದ. ಬುದ್ಧಿವಂತನಾದ ಹುಡುಗ. ಬಂದಾದ ಮೇಲೊಂದು ಪರೀಕ್ಷೆಗಳು ಪಾಸಾ ದುವು. ಪ್ರಚಾರಕವೂ ಆಯಿತು. ಪಿಎಸ್‌ಸ್ಸೀಗೆ ಅಪ್ಲಿಕೇಷನ್ ಹಾಕಿ ಮನೆ ಯಲ್ಲಿ ಕುಳಿತ.

ತಂದೆ ಹೇಳಿದಂತೆ ದಂಡದ ಕೂಳು ತಿಂದುಕೊಂಡಿರಲು ಮನಸ್ಸಿಲ್ಲದೇ ಅಲ್ಲಿ ಇಲ್ಲಿ ಹಿಂದೀ ಪಾಠಗಳು ಸಿಗುತ್ತವೆಯೋ ಎಂದು ಹುಡುಕಾಡಿದ. ಆ ಓಡಿಯಾಟವಲ್ಲಿ ಶಿವನಸಮುದ್ರದಲ್ಲಿ ಕೆಲಸ ಸಿಕ್ಕಿತು

ವೆಂಕಟೇಶ್‌ಗಿಂತ ಮಾಧು ವಯಸ್ಸಿನಲ್ಲಿ ಸ್ವಲ್ಪ ಸಣ್ಣವ. ಆದರೂ ವೆಂಕಟೇಶನಿಗಾಗಿದ್ದ ಪರೀಕ್ಷೆಗಳೆಲ್ಲವೂ ಅವನಿಗೂ ಆಗಿದ್ದವು. ವೆಂಕಟೇಶನಿಗೆ ಯಾರೂ ಜೊತೆಗಾರರಿಲ್ಲದ ಕಾಲದಿಂದಲೂ ಮಾಧು ಜೊತೆ. ಅವನನ್ನು ಕರೆದುಕೊಂಡು ಶಿವನಸಮುದ್ರಕ್ಕೆ ಬಂದಿದ್ದ.

ಶಿವನಸಮುದ್ರಕ್ಕೆ ಬಂದಾಗ ಭವಿಷ್ಯ ಸ್ವಲ್ಪವೂ ಆಶಾಪೂರ್ಣವಾಗಿರಲಿಲ್ಲ. ಅಲ್ಲಿನ ಕ್ಲಬ್ಬಿನವರು ತಿಂಗಳಿಗೆ ಮೂವತ್ತೋ ನಲವತ್ತೋ ಮಾತ್ರ ಸಂಬಳ ಕೊಡುವುದಾಗಿ ಹೇಳಿದ್ದರು. ಆದರಿಂದಲೇ ಹಿಂದೀ ಸಭೆಯವರು ಇವನನ್ನು ಹೋಗು ಎಂದಿದ್ದು. ಇಲ್ಲದಿದ್ದರೆ ತಮಗೆ ಬೇಕಾದ ಮತ್ತಾರನ್ನಾದರೂ ಕಳುಹಿಸಿಕೊಡುತ್ತಿದ್ದರು.

ಎಲ್ಲಾದರೊಂದು ಕಡೆ ತಗುಲಿಕೊಂಡ ಮೇಲೆ ಅಲ್ಲಿಯೇ ಕಚ್ಚಿಕೊಳ್ಳುವುದು ವೆಂಕಟೇಶನ ಸ್ವಭಾವ. ಬೆಳಗಿನಿಂದ ಸಂಜೆಯವರೆವಿಗೆ ಬಂದವರೆಗೆಲ್ಲರಿಗೂ ಪಾಠ ಹೇಳುತ್ತಿದ್ದ. ಎಲ್ಲ ಆಫೀಸರುಗಳಿಗೂ ಮುಖ್ಯವಾಗಿ ಅವರ ಅಮ್ಮಾವರುಗಳಿಗೂ ಬೇಕಾದವನಾದ. ಹುಡುಗ ಲಕ್ಷಣವಾಗಿದ್ದ. ಪ್ರಿಯವಾಗಿ ಮಾತನಾಡುತ್ತಿದ್ದ. ಎಲ್ಲರ ಪ್ರೀತಿ ವಿಶ್ವಾಸಗಳನ್ನೂ ಸಂಪಾದನೆ ಮಾಡಿದ್ದ. ಅದರಿಂದ ಹೇಗೋ ಉಪಾಯಾಂತರಗಳಿಂದ ಒಳ್ಳೆಯ ಸಂಭಾವನೆಯನ್ನು ಕೊಡಿಸುತ್ತಿದ್ದರು. ಒಳ್ಳೆಯ ಮನೆಯನ್ನೂ ಕೊಟ್ಟಿದ್ದರು. ಹಿಂದೀ ಮೇಸ್ಟರಿಗೆ ಇದ್ದಕ್ಕಿದ್ದಂತೆಯೇ ಏರ್ಪಟ್ಟ ಇಷ್ಟೊಂದು ಅನುಕೂಲಗಳಿಗಾಗಿ ಊರಿನವರಾರೂ ಕರುಬುತ್ತಿರಲಿಲ್ಲ.

ವೆಂಕಟೇಶ ತಾಯೊಂದಿಗೆ ಮಾತನಾಡುವಾಗಲಂತೂ ಮಾಧುವನ್ನು ಹೋಗು ಎಂದು ಹೇಳಲಾಗುವುದಿಲ್ಲ. ನಾನೂ ಅವನೊಡನೆ ಹೊರಟು ಹೋಗಬೇಕಾಗುತ್ತದೆ – ಎಂದು ಹೇಳಿದ್ದ. ಆದರೆ ಮನಸ್ಸು ಶಾಂತವಾದ ಮೇಲೆ ಅವನಿಗಾಗಿ ತಾನೇಕೆ ತನ್ನ ಜೀವನವನ್ನು ಹಾಳು ಮಾಡಿಕೊಳ್ಳಬೇಕು ಎಂದೆನಿಸತೊಡಗಿತು.

ಆ ರೀತಿ ಯೋಚನೆ ಮಾಡುತ್ತಿದ್ದ ಮನಸ್ಸಿನ ಮತ್ತೊಂದು ಕಡೆಯಲ್ಲಿ "ಮಾಧವನದೇನು ತಪ್ಪು ? ಅವನು ಪ್ರಮಿಳೆಯನ್ನು ಪ್ರೇಮ ಮಾಡುತ್ತಾನೆ. ಅವಳೂ ಅವನನ್ನು ಪ್ರೇಮ ಮಾಡುತ್ತಾಳೆ. ಅದೇ ಅಪರಾಧವೇ ? ನಿರ್ದೋಷಿಯನ್ನು ತಾನು ದಂಡಿಸುವುದೇ ? ಕೂಡದು" ಎಂದು ವಿಡಿಯುವುದು.

ಇದೆಲ್ಲದಕ್ಕಿಂತಲೂ ಮುಖ್ಯವಾದ ಅಂಶ ಅವನ ತಾಯಿಯದು.

ತಾಯಿ ತಂದೆಗಳಿಗೆ ಮಕ್ಕಳ ಮೇಲೆಲ್ಲಾ ಸರಿಸಮವಾದ ಪ್ರೀತಿ ವಿಶ್ವಾಸಗಳು ಇರುತ್ತವೆಂದು ಹೇಳುತ್ತಾರೆ. ಆದರೆ ಅದು ಪೂರ್ಣಸತ್ಯವಲ್ಲ. ಮಕ್ಕಳಲ್ಲಿ ಯಾರು ಕೆಟ್ಟಿರುತ್ತಾರೆಯೋ, ಯಾರ ಭವಿಷ್ಯವು ಪ್ರಕಾಶಮಾನವಾಗಿ ಕಂಡು ಬರುತ್ತಿರುವುದಿಲ್ಲವೋ, ಅವರ ಮೇಲೆಯೇ ತಾಯಿ ತಂದೆಗಳಿಗೆ ಹೆಚ್ಚು ಸಹಾನುಭೂತಿ ಇರುತ್ತದೆ. ಅದು ಪ್ರೇಮವಾಗಿ ಕಂಡು ಬರುತ್ತದೆ. ತಂದೆಯ ಪ್ರೇಮಕ್ಕಿಂತಲೂ ತಾಯಿಯ ಪ್ರೀತಿಯು ಪ್ರತ್ಯಕ್ಷವಾಗಿರುತ್ತದೆ.

ಕೆಲಸವಿಲ್ಲದೇ, ಓದು ಬರಹವಿಲ್ಲದೇ ಮನೆಯಲ್ಲಿ ಕುಳಿತುಕೊಂಡ ವೆಂಕಟೇಶನ ವಿಷಯದಲ್ಲಿ ಸೀತಮ್ಮನವರ ಮನಸ್ಸು ಯಾವಾಗಲೂ ಕೊರೆಯುತ್ತಿತ್ತು. ಅದು ಪ್ರೀತಿಯಾಗಿ ಪ್ರಕಾಶವಾಗುತ್ತಲೂ ಇತ್ತು. ಅರ್ಥಾತ್ ಎಲ್ಲ ಮಕ್ಕಳಿಗಿಂತಲೂ ಸೀತಮ್ಮನವರು ವೆಂಕಟೇಶನನ್ನು ಬಹಳ ಪ್ರೀತಿಸುತ್ತಿದ್ದರು. ಅವನೂ ಅವರನ್ನು ವಿಪರೀತ ಪ್ರೀತಿಸುತ್ತಿದ್ದ.

ಅಂಥಾ ತಾಯಿ ಕೆರೆಯನ್ನೋ ಭಾವಿಯನ್ನೋ ನೋಡುತ್ತೇನೆ ಎನ್ನುತ್ತಾರೆ.

ತಾಯಿಯ ಮಾತು ತೆಗೆದು ಹಾಕಲಾರ. ಸ್ನೇಹಿತನನ್ನು ಹೋಗು ಎನ್ನಲಾರ. ಆದರಿಂದ ತಾನೇ ಇಲ್ಲಿಂದ ಹೊರಟುಬಿಡುವುದೆಂದು ಅಂದುಕೊಂಡಿದ್ದ. ಎಷ್ಟು ಯೋಚನೆ ಮಾಡಿದರೂ ಅದೇ ಸರಿಯಾದ ಮಾರ್ಗವೆಂದು ಭಾಸವಾಗುತ್ತಿತ್ತು.

ಆದರೂ ಇಷ್ಟು ಒಳ್ಳೆಯ ಕೆಲಸವನ್ನು ಕೈಯಾರ ಬಿಟ್ಟು ಹೋಗಬೇಕಲ್ಲ ಎಂದು ಮನಸ್ಸಿನಲ್ಲಿ ಕೊರೆಯುತ್ತಿತ್ತು.

ಮಧ್ಯಾಹ್ನ ಅಮ್ಮಾವರುಗಳು ಪಾಠಕ್ಕೆ ಬಂದರು. ಸಂಜೆ ಹುಡುಗರು

ಮಕ್ಕಳು ಬಂದರು. ಯಥಾಪ್ರಕಾರ ಎಲ್ಲರಿಗೂ ಪಾಠಗಳನ್ನು ಹೇಳಿದ. ಆದರೆ ಮೊದಲಿನ ಉತ್ಸಾಹವಿಲ್ಲ. ಶಿಷ್ಯರುಗಳೆಲ್ಲರೂ ಹಿಂದೀ ಮೇಷ್ಟರು ಯಾಕೋ ಬೇಜಾರುಗೊಂಡಿದ್ದಾರೆ ಎಂದುಕೊಂಡರು.

ಮಾಧುವು ಗೆಳೆಯನಲ್ಲಾದ ವ್ಯತ್ಯಾಸವನ್ನು ಗಮನಿಸಿದ. ಇದ್ದಕ್ಕೆ ಇದ್ದಂತೆಯೇ ಈ ಬದಲಾವಣೆ ಯಾಕಾಯಿತೆಂದು ಅವನಿಗೆ ಅರ್ಥವಾಗಲಿಲ್ಲ. ಒಂದೆರಡು ಬಾರಿ ಮಾತನಾಡಿಸಿ ನೋಡಿದ. ಇಲ್ಲ. ಮಾತನಾಡಲಿಲ್ಲ.

ಪಾಠಗಳು ಮುಗಿದು ಎಲ್ಲರೂ ಹೊರಟುಹೋದ ಮೇಲೆ ವೆಂಕಟೇಶ ಸ್ನೇಹಿತನೊಡನೆ ಏನಾದರೂ ತಮಾಷೆಯಾಗಿ ಮಾತನಾಡುವ ಪದ್ಧತಿ. ಹಾಗೆ ಮಾತನಾಡುತ್ತಾನೆಯೇನೋ ಎಂದು ಮಾಧು ನೋಡಿದ. ಅದರ ಸೂಚನೆಗಳೇ ಕಂಡುಬರಲಿಲ್ಲ. ವೆಂಕಟೇಶ ತನ್ನಷ್ಟಕ್ಕೆ ತಾನೇ ತುಲಸೀ ರಾಮಾಯಣವನ್ನು ಓದತೊಡಗಿದ.

ಊಟ ಮಾಡುವಾಗಲೂ ಮಾತಿಲ್ಲ. ಆಮೇಲೆಯೂ ಇಲ್ಲ.

ವೆಂಕಟೇಶನಿಗೆ ಏನಾಗಿದೆ ತಿಳಿದುಕೊಳ್ಳಬೇಕೆಂದು ಮಾಧುವಿಗೆ ಬಯಕೆಯುಂಟಾಯಿತು.

ಹಜಾರದಲ್ಲಿ ವೆಂಕಟೇಶ ಪುಸ್ತಕ ಮುಂದೆ ಮಾಡಿಕೊಂಡು ಕುಳಿತಿರುವಾಗ ಮಾಧು ಕೇಳಿದ.

"ಯಾಕೆ, ವೆಂಕಣ್ಣ. ಏನೋ ಒಂದು ವಿಧವಾಗಿದ್ದೀರಲಾ"

"ಎಲ್ಲಾ ನಿನ್ನ ಪ್ರಸಾದವೇನಪ್ಪಾ"

"ಏನದು ? ನನ್ನಿಂದ ಏನಾಯಿತು ?"

"ಅದೇ, ನಿನ್ನ ಪ್ರೇಮದ ಪರಿಣಾಮ"

ಮಾಧುವಿಗೆ ಯೋಚನೆಗಿಟ್ಟುಕೊಂಡಿತು. ಎಷ್ಟು ಯೋಚಿಸಿದರೂ ವಿಷಯ ಬಗೆಹರಿಯಲಿಲ್ಲ.

"ಸ್ವಲ್ಪ ಅರ್ಥವಾಗುವಂತೆ ಹೇಳಿ"

"ಅರ್ಥವಾಗುವಂತೆ ಹೇಳುವುದೇನು ಬಂತು ಹೇಳು. ನೀನು ಪ್ರಮೀಳೆಯನ್ನು ಪ್ರೀತಿಸಲಾರಂಭಿಸಿದೆ. ಈ ವಿಷಯ ನಮ್ಮಪ್ಪನಿಗೆ ತಿಳಿಯಿತು. ಅವರು ನನ್ನನ್ನು ಕೆಲಸ ಬಿಡಿಸಿ ಕರೆದುಕೊಂಡು ಬರಬೇಕೆಂದು ನಮ್ಮಮ್ಮ

ನನ್ನು ಕಳುಹಿಸಿದ್ದಾರೆ. ನಾನು ನಾಳೆಯ ದಿನ ರಾಜೀನಾಮೆಕೊಟ್ಟು ಊರಿಗೆ ಹೊರಟುಹೋಗಬೇಕು. ಅಂತೂ ನಿನ್ನಿಂದ ಇಷ್ಟೊಂದು ರಾದ್ಧಾಂತವಾಯಿತು. ಇರುವ ಕೆಲಸ ಕಳೆದುಕೊಂಡು ಊರಿಗೆ ಹೋಗಬೇಕು. ಅದಕ್ಕೆ ನಾನು ಹೆದರುವುದಿಲ್ಲ. ನಮ್ಮಪ್ಪ ಹಾಕುವ ದಂಡ ಪಿಂಡವನ್ನು ತಿಂದುಕೊಂಡು ಬಿದ್ದಿರಬೇಕಲ್ಲಾ ಎಂದು ಯೋಚಿಸುತ್ತಿದ್ದೇನೆ."

"ಇದಕ್ಕೆ ಯಾಕಣ್ಣಾ ಇಷ್ಟು ಯೋಚನೆ ಮಾಡಬೇಕು. ನಾನು ನಿಮ್ಮ ಜೊತೆಯಲ್ಲಿರುವುದರಿಂದ ಅಲ್ಲವೇ ನಿನಗೆ ತೊಂದರೆ, ನೀವು ಊರಿಗೆ ಹೋಗಬೇಕಾಗುವುದು. ಎಲ್ಲ ಆ ರಗಳೆಯೇ ಬೇಡ. ನಾನು ನಾಳೆಯ ದಿನ ಬೆಳಗಾಗಿನ ಬಸ್ಸಿನಲ್ಲಿ ಹೊರಟುಹೋಗುತ್ತೇನೆ. ಆಗ ನೀವು ಇಲ್ಲಿಯೇ ಇರಬಹುದಲ್ಲ"

ಅಷ್ಟುಹೊತ್ತಿಗೆ ಅಡಿಗೇ ಮನೆಯ ಕೆಲಸವನ್ನು ಮುಗಿಸಿಕೊಂಡು ಬಂದಿದ್ದ ಸೀತಮ್ಮನವರು ಈ ಮಾತನ್ನು ಕೇಳಿದರು.

"ಮಾಧು ಹೇಳುವುದು ಸರಿಯಾಗಿದೆ ವೆಂಕಟೇಶು. ನಾಳೇ ಬೆಳಗಾಗಿನ ಬಸ್ಸಿಗೆ ಮಾಧುವು ಹೊರಟುಹೋಗಲಿ. ಬೇಕಾದರೆ ಈ ಗಲಾಟೆಯೆಲಾ ಪೂರೈಸಿದ ಮೇಲೆ ಎರಡು ತಿಂಗಳು ಬಿಟ್ಟುಕೊಂಡು ಅವನನ್ನು ಕರೆಸಿಕೋ."

"ಅದಾಗುವುದಿಲ್ಲ. ಮಾಧು ಏನೂ ತಪ್ಪು ಮಾಡಿಲ್ಲವೆಂದೇ ನನ್ನ ಅಭಿಪ್ರಾಯ. ನಿರಪರಾಧಿಯನ್ನು ನಾನು ಹೋಗು ಎಂದು ಹೇಳುವುದಿಲ್ಲ. ಅವನನ್ನು ಹೋಗಗೊಡುವುದೂ ಇಲ್ಲ."

ಮಾಧುವು "ಅವರ ಮಾತು ಹಾಗಿರಲಮ್ಮ. ವಿಷಯವೇನು. ನನಗೆ ಎಲ್ಲವನ್ನೂ ವಿವರವಾಗಿ ಹೇಳಿ" ಎಂದ.

ಸೀತಮ್ಮನವರು ನಾಲ್ಕೈದು ದಿನಗಳ ಹಿಂದೆ ಗುಂಡಪ್ಪನವರು ತಮ್ಮ ಮನೆಗೆ ಬಂದದ್ದೂ, ಮಾತನಾಡಿದ್ದೂ, ಆ ಮೇಲೆ ತಾವು ಬಂದದ್ದೂ ಎಲ್ಲ ವಿಷಯವನ್ನೂ ಇದ್ದಕ್ಕಿದ್ದಂತೆ ಹೇಳಿಬಿಟ್ಟರು.

ಮಾಧು ಯೋಚನೆ ಮಾಡಿ "ಎಲ್ಲಾ ಸರಿಯಾಗಿದೆ. ನೀವೊಂದು ತಪ್ಪು ಕೆಲಸ ಮಾಡಿದಿರಿ, ಅಮ್ಮ. ನೀವು ಬಂದ ದಿನವೇ ಈ ವಿಷಯವನ್ನು ಸೂಕ್ಷ್ಮವಾಗಿ ನನ್ನೊಂದಿಗೆ ಹೇಳಿದ್ದರೆ ನಾನು ಆಗಲೇ ಹೊರಟುಹೋಗುತ್ತಿದ್ದೆ. ಹೋಗಲಿ. ಈಗ ಆದ ನಷ್ಟವಾದರೂ ಏನು ? ನಾನು ಈ ಊರು

ಬಿಟ್ಟು ಹೊರಟುಹೋದರೆ ಪ್ರಮಿಳೆಯ ಮತ್ತು ನನ್ನ ಪ್ರೇಮವು ಅಳಿದು ಹೋಗುವುದೆಂದು ಮೇಸ್ಟರು ಗುಂಡಪ್ಪ ಭಾವನೆ ಮಾಡುತ್ತಾರೆ. ಪ್ರೇಮ ವೆಂಬುದು ಅಂತಹ ಹಗುರವಾದುದಲ್ಲ. ನಾನು ಈ ಊರು ಬಿಟು ಹೋಗು ವುದರಿಂದಲೇ ಆ ಪ್ರೇಮವು ಅಳಿದು ಹೋಗುವುದಾದರೆ ಹೋಗಲಿ. ಅಂತಹ ಪ್ರೇಮವು ವಾಸ್ತವವಾದ ಪ್ರೇಮವೇ ಅಲ್ಲ. ಈಗ ವಿಷಯವಿಷ್ಟೆ. ನಾನು ಈ ಊರು ಬಿಟ್ಟು ಹೊರಟುಹೋಗಬೇಕೆಂದು ಅಲ್ಲವೇ ? ಆಗಲಿ. ನಾನು ನಾಳೆ ಬೆಳಗಾಗಿನ ಬಸ್ಸಿಗೇ ಹೊರಟುಹೋಗುತ್ತೇನೆ. ಇನ್ನು ಈ ಊರಿನ ಕಡೆ ಮುಖಹಿಡುವುದಿಲ್ಲ. ಸರಿಯೇ ? ವೆಂಕಣ್ಣ ಈಗಿನಂತೆಯೇ ಇಲ್ಲಿರಬಹು ದಲ್ಲ" ಎಂದ.

ಸೀತಮ್ಮ "ಅಷ್ಟೇ ಮಾಧು. ನಿಮ್ಮೂರಿನ ಕಡೆ ಹೆಣ್ಣುಗಳು ಅತ್ಯಂತ ರೂಪವತಿಯರೆಂದು ಕೇಳಿದ್ದೇನೆ. ಈ ಪ್ರಮಿಳೆಗಾಗಿ ಯಾಕೆ ಇಷ್ಟೊಂದು ಪತರಗುಟ್ಟುತ್ತೀ. ನಿನಗೆ ಹುಡುಗತನ. ಅನುಭವವಿಲ್ಲ. ನನ್ನ ಮಾತು ಕೇಳು. ಇವಳನ್ನು ಮರೆತು ಬಿಡು" ಎಂದರು.

ಮಾಧುವು ಮನಸ್ಸಿನಲ್ಲಿಯೇ ತಾನು ಪ್ರಮಿಳೆಯನ್ನು ಮರೆತು ಬಿಡು ವುದು ಸಾಧ್ಯವೇ ಎಂದು ಯೋಚನೆ ಮಾಡಿದ. ಅವನಿಗೆ ಅದು ಸಾಧ್ಯವೆಂದು ಕಂಡು ಬರಲಿಲ್ಲ. ಆದರೆ ತನ್ನ ಮನಸ್ಸಿನಲ್ಲಿ ಬಂದ ಆ ಭಾವನೆಯನ್ನು ಅವನು ಬಾಯಿಬಿಟ್ಟು ಹೇಳಲಿಲ್ಲ.

ವೆಂಕಟೇಶನು "ಅದಾಗುವುದಿಲ್ಲ. ನಾನು ಈ ವಿಷಯದಲ್ಲಿ ನಿರ್ಧಾರ ಮಾಡಿ ಬಿಟ್ಟಿದ್ದೇನೆ. ಕೆಲಸಕ್ಕೆ ರಾಜೀನಾಮೆ ಕೊಟ್ಟು ನಾಳಿನ ಮಧ್ಯಾಹ್ನದ ಬಸ್ಸಿನಲ್ಲಿ ನಾನು ಹೊರಟುಹೋಗುತ್ತೇನೆ" ಎಂದ.

"ಬೇಡ ವೆಂಕಣ್ಣ. ನಾನೇ ಹೊರಟುಹೋಗುತ್ತೇನೆ. ಅದು ಖಂಡಿತ. ನಾನು ಹೊರಟುಹೋದ ಮೇಲೆ ನೀವು ಇರುವುದೂ ಹೋಗುವುದೂ ಎರಡೂ ಒಂದೇ."

"ಅದು ನಿನಗೆ ಒಂದೇ ಆಗಿರಬಹುದು. ಇತರರಿಗೆ ಒಂದೇ ಆಗಿರ ಬಹುದು. ಆದರೆ ನನ್ನ ಮನಸ್ಸಿಗಂತೂ ಅದು ಹಾಗಲ್ಲ. ನೀನು ಹೋಗು ವುದು, ಹೋಗದಿರುವುದರ ಮೇಲೆ ನನ್ನ ನಿರ್ಧಾರ ಬದಲಾವಣೆಯಾಗುವು

ದಿಲ್ಲ. ನನ್ನ ಮಾತಿನಲ್ಲಿ ನಿನಗೆ ಲವಲೇಶವಾದರೂ ಗೌರವವಿದ್ದರೆ ನೀನು ನಾಳೇ ಪ್ರಾತಃಕಾಲ ಪ್ರಯಾಣ ಮಾಡಬೇಡ. ಅದು ಚೆನ್ನಾಗಿರುವುದಿಲ್ಲ. ನಾವುಗಳು ಇಲ್ಲಿಗೆ ಒಟ್ಟಿಗೆ ಬಂದೆವು. ಒಟ್ಟಿಗೆ ಹೊರಟುಹೋಗೋಣ."

ಮಾಧುವು "ನಿಮಗೆ ಹೇಗೆಬೇಕೋ ಹಾಗಾಗಲಿ. ಆದರೆ ನನ್ನಿಂದ ನಿಮಗೆ ತೊಂದರೆಯಾಯಿತು. ಅದು ನನ್ನ ಮನಸ್ಸಿಗೆ ಬಹಳ ದುಃಖವನ್ನು ಉಂಟುಮಾಡುತ್ತದೆ" ಎಂದು ಹೇಳಿದ.

ಮಾರನೆಯ ದಿನ ಪ್ರಾತಃಕಾಲ ವೆಂಕಟೇಶ ಕ್ಲಬ್ಬಿನ ಸೆಕ್ರೆಟರಿಯವರನ್ನು ಹೋಗಿ ನೋಡಿ ತಾನು ಜರೂರಾಗಿ ಬೆಂಗಳೂರಿಗೆ ಹೊರಟುಹೋಗಬೇಕಾಗಿದೆಯೆಂದೂ ತನ್ನನ್ನು ಕಳುಹಿಸಿಕೊಡಬೇಕಾಗಿಯೂ ಹೇಳಿದ. ಸೆಕ್ರೆಟರಿ ರಂಗರಾಯರು ಎಷ್ಟೋ ಹೇಳಿದರು. ಅವನು ಒಪ್ಪಲಿಲ್ಲ.

ಕಡೆಗವರು "ಪಂಡಿತರೇ ! ನೀವು ಹೋಗುವುದು ನಮಗೆ ಸರ್ವಥಾ ಇಷ್ಟವಿಲ್ಲ. ಆದರೂ ನೀವು ಹೊರಡಲೇಬೇಕಾಗಿದೆ ಎಂದು ಹಟ ಹಿಡಿದ ಮೇಲೆ ನಾವೇನು ತಾನೇ ಮಾಡುವುದಕ್ಕೆ ಸಾಧ್ಯ ? ನಾನು ಪ್ರೆಸಿಡೆಂಟರೊಡನೆ ಮಾತನಾಡುತ್ತೇನೆ" ಎಂದರು.

ಆ ದಿನ ಮಧ್ಯಾಹ್ನ ಕ್ಲಬ್ಬಿನ ಪ್ರೆಸಿಡೆಂಟ್ ರಾಮಾನುಜಯ್ಯಂಗಾರ್ಯರೂ ಅವರ ಹೆಂಡತಿ ರಾಜಮ್ಮನವರೂ ವೆಂಕಟೇಶನ ಮನೆಗೆ ಬಂದರು. ಹಾಗೆ ಹೋಗಕೂಡದೆಂದು ವೆಂಕಟೇಶನಿಗೂ ಅವನ ತಾಯಿಗೂ ಹೇಳಿದರು.

ಎಷ್ಟು ಹೇಳಿದರೂ ವೆಂಕಟೇಶ ಒಪ್ಪಲಿಲ್ಲ. ಒಂದೇ ಪಟ್ಟು ಹಿಡಿದ.

ರಾಜಮ್ಮನವರು "ಮೇಸ್ಟರೇ ! ನಿಮಗೆ ಏನಾದರೂ ಅನಾನುಕೂಲವಾಗಿದ್ದರೆ ನನ್ನೊಡನೆ ಹೇಳಿರಿ. ನಾನು ಸರಿಮಾಡಿಕೊಡುತ್ತೇನೆ. ನೀವು ಹೊರಟುಹೋಗುವುದು ನಮಗಾರಿಗೂ ಇಷ್ಟವಿಲ್ಲ" ಎಂದರು.

"ಅಂತಹದೇನೂ ಇಲ್ಲಮ್ಮ ಈಗ ನನಗೆ ಬರುತ್ತಿರುವ ಸಂಬಳ ಸಾಕು. ಒಳ್ಳೇ ಮನೆಯನ್ನು ಕೊಟ್ಟಿದ್ದೀರಿ. ಇನ್ನೇನು ಬೇಕು. ಆದರೆ ನನಗೇನೋ ಹೊರಟುಹೋಗಬೇಕೆಂದು ಮನಸ್ಸಾಗಿ ಬಿಟ್ಟಿದೆ. ಕಾರಣ ಏನೆಂದು ಕೇಳಬೇಡಿ. ಸುಳ್ಳುಹೇಳಬೇಕಾಗುತ್ತದೆ. ನಿಮ್ಮೊಂದಿಗೆ ಸುಳ್ಳು ಹೇಳುವುದು

ನನಗೆ ಇಷ್ಟವಿಲ್ಲ. ನಾನು ಹೊರಟುಹೋಗುತ್ತೇನೆ. ದೊಡ್ಡ ಮನಸ್ಸು ಮಾಡಿ ಕಳುಹಿಸಿಕೊಡಿ."

"ಸರಿ. ನೀವು ಹಾಗೆ ಹೇಳಿದ ಮೇಲೆ ನಾವು ಏನು ಹೇಳುವುದು? ಯಾವಾಗ ಹೋಗುತ್ತೀರಿ?"

"ಈ ದಿನ ಸಂಜೆಯ ಬಸ್ಸಿಗೇ ಹೋಗಬೇಕೆಂದಿದ್ದೇನೆ."

"ಅದಾಗುವುದಿಲ್ಲ. ನಾಳೇ ಭಾನುವಾರ ಕ್ಲಬ್ಬಿನಲ್ಲಿ ನಿಮ್ಮ ಗೌರವಾರ್ಥವಾಗಿ ಒಂದು ಫಂಕ್ಷನ್ ಏರ್ಪಡಿಸುತ್ತೇವೆ. ಸಣ್ಣ ಫಂಕ್ಷನ್. ಅದನ್ನು ಮಾಡಿಕೊಂಡು ಹೊರಡುವಿರಂತೆ."

ವೆಂಕಟೇಶ ವಿಧಿಯಿಲ್ಲದೇ ಅದಕ್ಕೆ ಒಪ್ಪಿಕೊಂಡ.

ಆ ದಿನ ಪಾಠ ಪ್ರವಚನಗಳೇನೂ ನಡೆಯಲಿಲ್ಲ. ಬಂದವರಿಗೆಲ್ಲಾ ವೆಂಕಟೇಶ ತಾನು ಹೊರಡುತ್ತೇನೆಂದು ಹೇಳುವುದು. ಅವರುಗಳು ಬೇಡವೆನ್ನುವುದು, ಇವನು ಒಪ್ಪದಿರುವುದು, ಇವುಗಳಷ್ಟೇ ನಡೆದುವು.

ಸಾಯಂಕಾಲ ಮಾಮೂಲಿನಂತೆ ಎರಡು ಹಿಂದೀ ಪುಸ್ತಕಗಳನ್ನು ಹಿಡಿದುಕೊಂಡು ಪ್ರಮಿಳೆಯು ಬಂದಳು. ಹಿಂದೀ ಮೇಸ್ಟರು ಹೊರಟುಹೋಗುತ್ತಾರೆಂದು ಅವಳಿಗೆ ಗೊತ್ತಾಗಿ ಸಿಡಿಲೇ ತಲೆಯ ಮೇಲೆ ಎರಗಿ ಬಿದ್ದಂತಾಯಿತು. ಆದರೆ ಏನೂ ಮಾತನಾಡದೇ ಸುಮ್ಮನೇ ಕುಳಿತುಕೊಂಡಿದ್ದಳು.

ಎಲ್ಲರೂ ಹೊರಟುಹೋದರೂ ಪ್ರಮಿಳೆಯು ಮಾತ್ರ ಹೊರಡಲಿಲ್ಲ. ಸೀತಮ್ಮನವರು ಒಳಗೆ ಅಡಿಗೆಯ ಮನೆಯಲ್ಲಿದ್ದರು ಹೊರಗಡೆ ಹಜಾರದಲ್ಲಿ ಮಾಧುವೂ ವೆಂಕಟೇಶನೂ ಕುತಿದ್ದರು.

ಪ್ರಮಿಳೆಯು ಎದ್ದು ಹೋಗುತ್ತಾಳೆಯೋನೋ ಎಂದು ವೆಂಕಟೇಶ ಸ್ವಲ್ಪಹೊತ್ತು ನಿರೀಕ್ಷೆ ಮಾಡಿ ನೋಡಿದ. ಅವಳು ಎದ್ದುಹೋಗುವ ಯೋಚನೆಗಳು ಕಂಡು ಬರಲಿಲ್ಲ. ಇಷ್ಟಕ್ಕೆಲ್ಲಾ ಕಾರಣಳಾದ ಅವಳಿರುವಾಗ ಅಲ್ಲಿ ಕುಳಿತುಕೊಂಡಿರಲು ಅವನಿಂದ ಆಗಲಿಲ್ಲ. ಅವಳ ಕಡೆಗೆ ದುರದುರನೆ ನೋಡಿ ಎದ್ದು ಹೊರಟುಹೋದ.

ವೆಂಕಟೇಶ ಎದ್ದು ಹೊರಟುಹೋದ ಕೂಡಲೇ ಪ್ರಮಿಳೆ ಕಣ್ಣು ಸನ್ನೆ ಮಾಡಿ ಮಾಧುನನ್ನು ಕರೆದು ತಾನೆದ್ದು ಹೊರಟಳು. ಅವನೂ ಅವಳನ್ನು

ಅನುಸರಿಸಿ ಹೋದ. ಅವರುಗಳಿಬ್ಬರೂ ಬೀದಿಯಲ್ಲಿ ನಿಂತು ಮಾತನಾಡ ತೊಡಗಿದರು.

"ಅದೇನು ಮೇಷ್ಟರು ಇದ್ದಕ್ಕಿದ್ದಂತೆಯೇ ಹೊರಟುಹೋಗುವುದು ?"

ಸೂಕ್ಷ್ಮವಾಗಿ ಮಾಧುವು ವಿಷಯವೆಲ್ಲವನ್ನೂ ವಿವರಿಸಿದ.

"ಓಹೋ ? ನಮ್ಮಪ್ಪ ಇಷ್ಟೊಂದು ರಾದ್ಧಾಂತ ಮಾಡಿದನೋ? ಇರಲಿ. ಈಗ ನೀವೇನು ಮಾಡುತ್ತೀರಿ ?"

"ನಾನೇನು ಮಾಡುತ್ತೇನೆ ? ಅದನ್ನೇ ಯೋಚಿಸುತ್ತಿದ್ದೇನೆ. ಯಾವುದೂ ತೋರುತ್ತಿಲ್ಲ. ನಾನು ಸಾಹಿತ್ಯರತ್ನ ಪರೀಕ್ಷೆಯನ್ನು ಮಾಡಬೇಕೆಂದಿದ್ದೇನೆ. ಅದಕ್ಕಾಗಿ ಕೆಲವು ದಿನ ಕಾಶಿಯಲ್ಲಿದ್ದು ಅಲ್ಲಿಯೇ ಓದಿಕೊಂಡು ಬರಬೇಕೆಂದಿದ್ದೇನೆ."

"ನೀವು ಅಸಮಾಧಾನ ಮಾಡಿಕೊಳ್ಳದಿದ್ದರೆ ನಾನೊಂದು ಮಾತು ಹೇಳಲೇ ?"

"ಹೇಳು. ಪ್ರಮಿಳಾ. ನೀನು ಏನು ಹೇಳಿದರೂ ಕೇಳುತ್ತೇನೆ."

"ನೀವು ಈ ಊರು ಬಿಟ್ಟು ಹೋದ ಮೇಲೆ ನನಗಿಲ್ಲಿ ಒಂದು ಗಳಿಗೆ ಸಹ ಇರಲು ಇಷ್ಟವಿಲ್ಲ. ನನ್ನನ್ನೂ ಕರೆದುಕೊಂಡು ಹೋಗಿ ನಾನೂ ಕಾಶಿಗೆ ಬಂದು ಬಿಡುತ್ತೇನೆ."

ಪ್ರಮಿಳೆಯಾಡಿದ ಮಾತು ಮಾಧುವಿಗೆ ವಿಸ್ಮಯವನ್ನುಂಟು ಮಾಡಿತು. ಅವಳ ಬಾಯಿಂದ ಅಂತಹ ಮಾತು ಬರುವುದೆಂದು ಅವನು ನಿರೀಕ್ಷೆಯೇ ಇರಲಿಲ್ಲ.

"ನೀನು ಅಪ್ಪ ಅಮ್ಮನನ್ನೂ ಬಿಟ್ಟು ಬಂದು ಬಿಡುತ್ತೀಯಾ ?"

"ನನ್ನ ಭಾಗಕ್ಕೆ ಅವರೊಬ್ಬರೂ ಇಲ್ಲ. ನೀವು ಕರೆದುಕೊಂಡು ಹೋಗುವುದಾದರೆ ಸರಿ. ಇಲ್ಲದಿದ್ದರೆ ಕಾವೇರಿಯಲ್ಲಿ ಹಾರಿಕೊಂಡು ಪ್ರಾಣ ಬಿಡುತ್ತೇನೆ."

"ಅಂತಹ ಮಾತನ್ನಾಡಬೇಡ. ಇಷ್ಟಕ್ಕೆಲ್ಲಾ ಕಾವೇರಿಯಲ್ಲಿ ಯಾಕೆ ಹಾರಬೇಕು."

"ನಮ್ಮ ಅಪ್ಪನಂತೂ ಕೈ ಬಿಟ್ಟರು. ನೀವೂ ಕೈ ಬಿಡುವುದಾದರೆ ಹೇಳಿ. ಯಾರು ಕೈ ಬಿಟ್ಟರೂ ಕಾವೇರಮ್ಮ ಕೈ ಬಿಡುವುದಿಲ್ಲ."

"ಹಾಗೆಲ್ಲಾ ಮಾತನಾಡಬೇಡ. ಅದಕ್ಕೆ ಏನಾದರೊಂದು ಯೋಚನೆ ಮಾಡೋಣ."

ಅವರುಗಳಿಬ್ಬರೂ ಬಲುಹೊತ್ತು ಅಲ್ಲಿಯೇ ಮಾತನಾಡುತ್ತಿದ್ದು ಆಲೋಚನೆ ಮಾಡಿದರು.

ಹೊತ್ತಾಗಿದ್ದುದರಿಂದ ಸಾಧು ಅಷ್ಟುದೂರ ಹೋಗಿ ಪ್ರಮಿಳೆಯನ್ನು ಬಿಟ್ಟು ಬಂದ.

ಆ ದಿನ ಏನೂ ವಿಶೇಷವಿಲ್ಲದೇ ಕಳೆದುಹೋಯಿತು.

ಮಾರನೆಯ ದಿನ ಬೆಳಗಾಗ ಕ್ಲಬ್ಬಿನಲ್ಲಿ ಸಣ್ಣದೊಂದು ಫಂಕ್ಷನ್ ಇಟ್ಟು ಕೊಂಡರು. ಅತಿಥಿಗಳಾದ ವೆಂಕಟೇಶ ಸಾಧು ಇವರುಗಳಿಗೂ ಸದಸ್ಯರುಗಳಿಗೂ ಕಾಫಿ ತಿಂಡಿಗಳನ್ನು ಮಾಡಲಾಗಿತ್ತು. ಅದನ್ನು ಹಂಚಿದ ಮೇಲೆ ಎಲ್ಲರೂ ಒಂದು ಕಡೆ ಸೇರಿದರು.

ಕ್ಲಬ್ಬಿನ ಅಧ್ಯಕ್ಷರಾದ ರಾಮಾನುಜಂಯ್ಯಂಗಾರ್ಯರು "ಈ ಮೂರು ತಿಂಗಳಿಂದ ಶ್ರೀಮಾನ್ ವೆಂಕಟೇಶ್ ಅವರು ನಮ್ಮೂರಿನಲ್ಲಿ ಹಿಂದೀ ಪ್ರಚಾರ ಮಾಡುತ್ತಿರುವುದು ಎಲ್ಲರಿಗೂ ತಿಳಿದಿರುವಂತಹ ವಿಷಯವಷ್ಟೇ. ಇವರು ಇಲ್ಲಿ ಕೇವಲ ಹಿಂದೀ ಪಂಡಿತರಾಗಿ ಮಾತ್ರವಿರಲಿಲ್ಲ. ನಮ್ಮ ಬೃಹತ್ ಕುಟುಂಬದಲ್ಲಿಯೇ ಒಬ್ಬರಾಗಿ ಬೆರೆತುಹೋಗಿದ್ದರು. ಯಾವ ಸಂದರ್ಭಲ್ಲಿಯೇ ಆಗಲೀ ಅವರನ್ನು ನೋಡಿದಾಗ ನಮ್ಮ ಅಣ್ಣ ತಮ್ಮಂದಿರಲ್ಲಿ ಒಬ್ಬರೆಂದೇ ಭಾವನೆಯುಂಟಾಗುತ್ತಿತ್ತು. ಅವರೂ ಅಷ್ಟೇ ಸಂಬಳಕ್ಕಾಗಿ ಕೆಲಸ ಮಾಡುವ ಸ್ವಭಾವದವರಲ್ಲ. ಸೇವಾತತ್ಪರತೆಯೇ ಜೀವನದಲ್ಲಿ ಮುಖ್ಯವಾದ ಆದರ್ಶವಾಗಿ ಉಳ್ಳವರು. ಅಂತಹ ನಮ್ಮ ಹಿಂದೀ ಮೇಷ್ಟರು ಅನಿವಾರ್ಯದಿಂದ ಹೊರಟುಹೋಗಬೇಕಾಗಿ ಬಂದಿರುವುದು ನಿಮಗೆ ತಿಳಿಯದಿರುವ ವಿಷಯವಲ್ಲ. ನನ್ನ ಮನಸ್ಸಿಗೆ ಇವರಿಂದ ಎಷ್ಟು ವ್ಯಥೆಯಾಗಿದೆಯೋ ನಿಮ್ಮ ಮನಸ್ಸುಗಳಿಗೂ ಅಷ್ಟೇ ವ್ಯಥೆಯಾಗಿದೆ. ಈ ವಿಷಯವಾಗಿ ಎಷ್ಟು

ಮಾತನಾಡಿದರೂ ಒಂದೇ. ಅವರು ಬಿಟ್ಟು ಹೋಗದೇ ನಮ್ಮೊಡನೆಯೇ ಇದ್ದಿದ್ದರೆ ಬಹಳ ಚೆನ್ನಾಗಿದ್ದಿತು" ಎಂದು ಹೇಳಿದರು.

ಅನಂತರ ಇಬ್ಬರು ಮೂವರು ಭಾಷಣಗಳನ್ನು ಮಾಡಿದರು. ಎಲ್ಲರ ಭಾಷಣಗಳೂ. ಅಯ್ಯಂಗಾರ್ಯರ ಮಾತಿನಲ್ಲಿ ಕಂಡು ಬಂದ ಅರ್ಥವನ್ನೇ ಒಳಗೊಂಡಿದ್ದವು. ಅದು ಕ್ಲಬ್ಬಿನ ಸದಸ್ಯರು ಕೂಡಿ ಬೀಳ್ಕೊಡಿಗೆಯ ಸಮಾರಂಭವನ್ನು ನೆರವೇರಿಸುತ್ತಿದ್ದಂತೆ ಇರಲಿಲ್ಲ. ಆಪ್ತರಾದವರೊಬ್ಬರು ಹೊರಟು ಹೋಗುನಂತಹ ಸಂದರ್ಭದಲ್ಲಿ ಅವರಿಗೆ ಬೇಕಾದವರೆಲ್ಲರೂ ಸೇರಿ ಗೋಳು ಕರೆಯುವಂತಿದ್ದಿತು.

ಭಾಷಣಗಳೆಲ್ಲವೂ ಆದನಂತರ ಹಿಂದೀ ಮೇಸ್ಟರುಗಳಿಬ್ಬರಿಗೂ ಪುಷ್ಪ ಹಾರಗಳನ್ನು ಸಮರ್ಪಿಸಲಾಯಿತು.

ಕಡೆಯಲ್ಲಿ ಕಾರ್ಯದರ್ಶಿಗಳಾದ ಸುಬ್ಬಯ್ಯನವರು ವಂದನಾರ್ಪಣೆ ಮಾಡಿದರು. ಅದೇ ಸಮಯದಲ್ಲಿ ಅವರು ''ಶ್ರೀ ವೆಂಕಟೇಶರ ಸಹೋದರರಾದ ಶ್ರೀ ಮಾಧವರಾಯರು ಸಹ ನಮ್ಮೂರಿನಲ್ಲಿ ಹಿಂದೀ ಹೇಳಿಕೊಟ್ಟು ಬಹಳ ಸೇವೆ ಸಲ್ಲಿಸಿದ್ದಾರೆ. ಅವರ ಸೇವೆಯನ್ನು ಈ ಸಂದರ್ಭದಲ್ಲಿ ನೆನೆಯಬೇಕಾದುದು ನಮ್ಮ ಕರ್ತವ್ಯ" ಎಂದು ಹೇಳಿದರು.

ಆದೇ ದಿನ ಮಧ್ಯಾಹ್ನದ ಬಸ್ಸಿಗೆ ಸೀತಮ್ಮನವರೂ ವೆಂಕಟೇಶ ಮಾಧುಗಳೂ ಬೆಂಗಳೂರಿಗೆ ಪ್ರಯಾಣ ಮಾಡಿದರು.

ಗುಂಡಪ್ಪನವರಿಗೆ ಕೆಟ್ಟದೊಂದು ಕನಸು ಬಿದ್ದ ಹಾಗಾಗಿತ್ತು.

ಪ್ರಮಿಳೆ ಎಂದೂ ತಾಯಿ ತಂದೆಗಳಿಗೆ ಎದುರು ಹೇಳಿದವಳಲ್ಲ. ಯಾರೊಂದಿಗೇ ಆಗಲಿ ಗಟ್ಟಿಯಾಗಿ ಮಾತನಾಡುತ್ತಿದ್ದ ಹುಡುಗಿ ಸಹ ಅಲ್ಲ. ಅಂತಹ ಹುಡುಗಿ ತಿರುಗಿಬಿದ್ದಳೆಂದರೆ ಯಾರಿಗೇ ಆಗಲಿ ಆದರ ಅನುಭವ ಎಷ್ಟು ಕಹಿಯಾಗಿರಬೇಕು ?

ಮಗಳು ತಿರುಗಿಬಿದ್ದಾಗ ಗುಂಡಪ್ಪನವರಿಗೂ ಅವರ ಕುಟುಂಬ ಪಾತಮ್ಮನವರಿಗೂ ದಿಗಿಲಾಯಿತು. ಮೊದಲು ಪ್ರಮಿಳೆಗೆ ಹುಚ್ಚು ಹಿಡಿಯಿತೋ ಎಂದು ಸಂದೇಹಿಸಿದರು. ಅಥವಾ ಇದೇನಾದರೂ ಗಾಳಿಗೀಳಿಯ ಚೇಷ್ಟೆಯೋ ಎಂದು ಸಹ ಆಲೋಚಿಸಿದರು. ಮಗಳು ಪುನಃಪುನಃ ತಾನು ಮಾಧವರಾಯನನ್ನು ಪ್ರೀತಿಸುವುದಾಗಿಯೂ ಅವನನ್ನೇ ಮದುವೆ ಮಾಡಿಕೊಳ್ಳುವುದಾಗಿಯೂ ಹೇಳಿದಾಗ ಅವರು ಒಳ್ಳೆಯ ಪೇಚಿಗೆ ಬಿದ್ದರು.

ಪ್ರಮಿಳೆಯ ಬುದ್ಧಿಯು ಕೆಟ್ಟದೆ ಎಂಬುದರಲ್ಲಿ ಅವರಿಗಾವ ಬಗೆಯ ಸಂದೇಹವೂ ಉಳಿಯಲಿಲ್ಲ. ಆದರೆ ಮಗಳ ಬುದ್ಧಿಯು ಕೆಡುವುದಕ್ಕೆ ಅವಳೇ ಕಾರಣವಲ್ಲ. ಅವಳ ಬುದ್ಧಿಯನ್ನು ಕೆಡಿಸಿದವನು ಮಾಧವರಾಯ ಎಂದು ದೃಢಪಡಿಸಿಕೊಂಡಿದ್ದರು.

ಒಂದೊಂದು ಬಾರಿ ಒಬ್ಬರೇ ಕುಳಿತು ಯೋಚಿಸುವಾಗ ಗುಂಡಪ್ಪನವರ ಮನಸ್ಸಿನಲ್ಲಿ ಬಗೆಬಗೆಯ ಆಲೋಚನೆಗಳು ಬರುವುವು.

ತಾಯಿ ತಂದೆಗಳು ನೋಡಿದ ಗಂಡು ಮಗಳಿಗೆ ಒಪ್ಪಿಗೆಯಾಗಲಿಲ್ಲವೆಂದೇ ಇಟ್ಟುಕೊಳ್ಳೋಣ. ಅಂತಹ ಸಂದರ್ಭದಲ್ಲಿ ಹುಡುಗಿ ಏನು ಮಾಡಬೇಕು ? "ಮದುವೆ ಮಾಡಿಕೋತೀ ಏನೇ ? ಹುಡುಗ ಮನಸ್ಸಿಗೊಪ್ಪಿತೇನೇ ?" ಎಂದರೆ ಮುಖಕೊಟ್ಟು ಮಾತನಾಡದೇ ಮೂತೀ ತಿರುಗಿಸಿಕೊಳ್ಳಬೇಕು. ಅಥವಾ ಅದಕ್ಕೂ ಒಂದು ರೀತಿ ನೀತಿಯಿದೆ. ಸೂಕ್ಷ್ಮವಾಗಿ ತಾಯಿಯೊಡನೆಯೋ, ಅಕ್ಕನೊಡನೆಯೋ ಅಥವಾ ಯಾರಾದರೂ ಗೆಳತಿಯೊಡನೆಯೋ "ಅವನ ಹಲ್ಲು ಉಬ್ಬು" "ಕಪ್ಪಗಿದ್ದಾನೆ" "ಮೆಳ್ಳಗಣ್ಣು" ಎಂದು ಏನಾದರೊಂದು ಹೇಳಬಹುದು. ಇನ್ನೂ ಧೈರ್ಯಸ್ಥಳಾದ ಹುಡುಗಿಯಾದರೆ "ನನಗೆ ಅವನು ಒಪ್ಪಲಿಲ್ಲ" ಎನ್ನಬೇಕು.

ಅದೆಲ್ಲವನ್ನೂ ಬಿಟ್ಟು "ನೀವು ಯಾರನ್ನೂ ಕರತರಬೇಡಿ. ನಾನು ಇವರುಗಳು ಯಾರನ್ನೂ ಮದುವೆ ಮಾಡಿಕೊಳ್ಳುವುದಿಲ್ಲ. ನಾನು ಮದುವೆ ಮಾಡಿಕೊಳ್ಳುವುದು ಹಿಂದೀ ಮೇಷ್ಟರನ್ನು ಮಾತ್ರ" ಎಂದು ಘಂಟಾಘೋಷವಾಗಿ ಹೇಳುವುದೇ ?

ಬಾಯಿಬಿಟ್ಟು ಮಾತನಾಡದ ಹುಡುಗಿ ಹೀಗೆ ಗಯ್ಯಾಳಿಯಂತೆ ಮಾತನಾಡಬೇಕಾದರೆ ಏನೋ ಇರಬೇಕು.

ಆ ಏನೋ ಏನಾಗಿರಬೇಕೆಂದು ಯೋಚಿಸಿದಾಗ ಬಗೆಬಗೆಯಾಗಿ ತೋರುವುವು. ಹುಡುಗಿಯ ಬುದ್ಧಿ ಕೆಡಿಸುವುದಕ್ಕೆ ಆ ಮುಂಡೇಮಗ ಏನೋ ಮಾಡಿರಬೇಕೆಂದೆನಿಸುವುದು.

ಹೆಂಗಸರ ಬುದ್ಧಿ ಕೆಡಿಸಲು ದುಷ್ಟರಾದ ಗಂಡುಸರು ಏನೇನು ಮಾಡಲು ಸಾಧ್ಯವೆಂಬುದನ್ನು ಗುಂಡಪ್ಪನವರು ಊಹಿಸಬಲ್ಲವರಾಗಿದ್ದರು. ಮಂತ್ರಿಸಿಕೊಟ್ಟ ಬೂದಿಯನ್ನು ಮುಖದ ಮೇಲೆ ಊದಿಬಿಡುವುದು, ವಶೀಕರಣ ಮಂತ್ರವನ್ನು ಬರೆದ ವೀಳೆಯದೆಲೆಯನ್ನು ತಿನ್ನಿಸುವುದು, ಹೆಜ್ಜೆಯಿಡುವ ಕಡೆ ಯಂತ್ರಬರೆಯುವುದು ಹೀಗೆ ಏನೇನೋ ತಂತ್ರಗಳಿವೆ. ಅದರಲ್ಲಿ ಅವನು

ಯಾವುದಾದರೊಂದನ್ನು ಮಾಡಿರಬೇಕು. ಅದಿಲ್ಲದೇ ಅರಗಿಣಿಯಂತಹ ಹುಡುಗಿ ಹೀಗೆ ಎದುರು ಬೀಳುವುದಿಲ್ಲ.

ಮಗಳ ಬುದ್ಧಿ ಕೆಟ್ಟದೆ ಎಂದು ತಾಯಿ ತಂದೆಗಳಿಗೆ ಗೊತ್ತಾಗುವಂತಹ ಪ್ರಮೇಯ ಸಹ ಏರ್ಪಟ್ಟಿದ್ದಿತು.

ಗುಂಡಪ್ಪನವರು ತಮ್ಮ ತಂಗೀ ನಾಗರತ್ನಮ್ಮನಿಗೆ ಪ್ರಮಿಳೆಗೆ ಒಬ್ಬ ಗಂಡು ನೋಡಬೇಕೆಂದು ಬಲು ದಿನಗಳಿಂದ ಹೇಳಿಕೊಂಡಿದ್ದರು. ಆಕೆ ಎರಡು ಮೂರು ಕಡೆ ಗಂಡು ನೋಡಿಯೂ ಇದ್ದರು. ಅದಾವುದೂ ಗುಂಡಪ್ಪನವರಿಗೆ ಒಪ್ಪಿಗೆಯಾಗಲಿಲ್ಲ. ಸುಮಾರು ತಿಂಗಳ ಹಿಂದೆ ಒಬ್ಬ ಹುಡುಗನಿದ್ದಾನೆಂದೂ ಬಹಳ ಒಳ್ಳೆಯ ಸಂಬಂಧನೆಂದೂ ಕಾಗದ ಬಂದಿತು. ಆ ಗಂಡಿನ ವಿಷಯ ವಿಚಾರಿಸಿ ತಿಳಿದುಕೊಂಡು ಗುಂಡಪ್ಪ ತಮ್ಮ ಒಪ್ಪಿಗೆಯನ್ನು ಕೊಟ್ಟಿದ್ದರು. ನಾಗರತ್ನಮ್ಮ ಗಂಡನ್ನು ಕರೆದುಕೊಂಡು ಬಂದು ಶಿವನ ಸಮುದ್ರದಲ್ಲಿಳಿದರು.

ಹೆಣ್ಣಿನ ಮನೆಯವರು ಗಂಡು ನೋಡದೆಯೇ ಹೆಚ್ಚು ಕಡಮೆಯಾಗಿ ಒಪ್ಪಿಕೊಂಡಿದ್ದರು. ಗಂಡೂ ಗಂಡಿನ ಮನೆಯವರೂ ಕಣ್ಣು ನೋಡಿ ಒಪ್ಪಿಕೊಂಡರು. ಜಾತಕಾನುಕೂಲ ಮೊದಲೇ ಕೂಡಿ ಬಂದಿತ್ತು. ಮದುವೆಯಾಗಬೇಕಾದರೆ ಮೊದಲು ನಡೆಯಬೇಕಾದ ಕೆಲಸಗಳೆಲ್ಲವೂ ಆಗಿದ್ದವು.

ಲಗ್ನಪತ್ರಿಕೆಯಾಗಬೇಕು.

ಆ ದಿನ ಮಧ್ಯಾನ್ಹ ಪ್ರಮಿಳೆಯು ಅವರಮ್ಮನೊಡನೆ "ನನಗೆ ಮದುವೆ ಬೇಡ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟಳು.

"ಹಾಗೆಂದರೇನೇ ? ಬಹಳ ಒಳ್ಳೆಯ ಜಾಗ. ನಮ್ಮಂತಹ ಬಡವರಿಗೆ ಇಂತಹ ಕಡೆ ಸಂಬಂಧ ಕೂಡಿ ಬರುವುದೇ ಕಷ್ಟ. ಎಣ್ಣೆ ಬರುವಾಗ ಕಣ್ಣು ಮುಚ್ಚಿಕೊಂಡರು–ಎಂಬಂತೆ ಯಾಕೇ ಹೀಗೆ ಮಾತನಾಡುತ್ತೀ ?"

"ನನಗೆ ಅದೊಂದೂ ಗೊತ್ತಿಲ್ಲ. ಬೇಡವೆಂದರೆ ಬೇಡ. ನಾನು ಈಗ ಮದುವೆ ಮಾಡಿಕೊಳ್ಳುವುದಿಲ್ಲ."

"ಈ ಮಾತು ಕೇಳಿದರೆ ನಿಮ್ಮಪ್ಪ ಸುಮ್ಮನಿರುತ್ತಾರೇನೇ ?"

"ಸುಮ್ಮನಿರದೇ ಏನು ಮಾಡುತ್ತಾನೆ ? ಮದುವೆ ಮಾಡಿಕೊಳ್ಳುವುದು ಅವನೋ, ನಾನೋ ?"

"ಏನೋಮ್ಮ. ನೀವು ಈಗಿನ ಕಾಲದ ಹುಡುಗರು. ನನಗೆ ಒಂದೂ ಗೊತ್ತಾಗುವುದಿಲ್ಲ"

ಪಾತಮ್ಮನವರು ಗಂಡನನ್ನು ಕರೆದು ಸೂಕ್ಷ್ಮವಾಗಿ ವಿಷಯ ತಿಳಿಸಿದರು.

ಗುಂಡಪ್ಪ ಮನೆಯ ಚಾವಣಿಗೆಯೇ ಹಾರಿಹೋಗುವಂತೆ ಆರ್ಭಟಿಸಮಾಡುತ್ತಾ "ಮದುವೆ ಮಾಡಿಕೋತೇನೇ, ಇಲ್ಲ ಎಂದು ಹೇಳುವುದಕ್ಕೆ ಅವಳಾರು. ಹೇಳಿದಂತೆ ಕೇಳಿಕೊಂಡು ಬಿದ್ದಿರುವುದಾದರೆ ಬಿದ್ದಿರಲಿ. ಇಲ್ಲದಿದ್ದರೆ ಎಲ್ಲಿಯಾದರೂ ಹೋಗುವುದಕ್ಕೆ ಹೇಳು" ಎಂದರು.

ಗಂಡ ಹೇಳಿದ ಮಾತನ್ನು ಮಗಳಿಗೆ ಹೇಳಿ ಮಗಳ ಉತ್ತರ ಗಂಡನಿಗೆ ತಲುಪಿಸಬೇಕಾದ ಪ್ರಯಾಸ ಪಾತಮ್ಮನವರಿಗೆ ಒದಗಿ ಬರಲಿಲ್ಲ. ಪ್ರಮಿಳೆಯೇ ನೇರವಾಗಿ ತಂದೆಯ ಮಾತಿಗೆ ಉತ್ತರ ಹೇಳಿದಳು.

"ಎಲ್ಲಿಯಾದರೂ ಹೋಗಬೇಕಾಗುವ ಸಂದರ್ಭ ಬಂದರೆ ಹೋಗುತ್ತೇನೆ. ನನಗೆ ಬೇಡದ ಮದುವೆಯನ್ನು ನಾನು ಮಾಡಿಕೊಳ್ಳುವುದಿಲ್ಲ"

ತಂದೆ ಮತ್ತಷ್ಟು ರೇಗುತ್ತಾ "ಗಟವಾಣಿಯ ಹಾಗೆ ಎದುರಿಗೆ ನಿಂತು ಜವಾಬು ಕೊಡುತ್ತಾಳೆ. ಅದಕ್ಕೇ ಹೆಣ್ಣುಮಕ್ಕಳನ್ನು ಸ್ಕೂಲಿಗೆ ಕಳಿಸಬಾರದು-ಎನ್ನುವುದು. ನಾನೇನು ಬಳೆ ತೊಟ್ಟುಕೊಂಡಿಲ್ಲ. ಅದು ಹೇಗೆ ನೀನು ಮದುವೆ ಮಾಡಿಕೊಳ್ಳುವುದಿಲ್ಲವೋ ನೋಡುತ್ತೇನೆ. ಬಲಾತ್ಕಾರದಿಂದ ಮಣೆಯ ಮೇಲೆ ಕೂರಿಸಿ ತಾಳಿ ಕಟ್ಟಿಸುತ್ತೇನೆ" ಎಂದರು.

ಆ ಮಾತು ಹೇಳಿ ತಂದೆ ಹೊರಟು ಹೋದರು. ಮಗಳು ತಾಯೊಂದಿಗೆ ಹೇಳಿದಳು.

"ಅಮ್ಮ, ನನಗೆ ಮದುವೆ ಬೇಡವೆಂದರೆ ಬೇಡ. ಅಣ್ಣ ಬಲಾತ್ಕಾರದಿಂದ ಮಣೆಯ ಮೇಲೆ ಕೂರಿಸಿ ತಾಳಿ ಕಟ್ಟಿಸುವುದಾಗಿ ಹೇಳುತ್ತಾನೆ. ಈಗಲೇ ಹೇಳಿದ್ದೇನೆ. ಈ ಮದುವೆಯಾಗುವುದಿಲ್ಲ. ಬಲಾತ್ಕಾರ ಮಾಡಿದರೆ ನಾನು ಭಾವಿಯಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳುತ್ತೇನೆ"

ತಾಯಿ ಮಗಳಿಗೆ ಎಷ್ಟೋ ವಿವೇಕವನ್ನು ಹೇಳಿ ನೋಡಿದರು. ಒಂದೂ ಪ್ರಯೋಜನವಾಗಲಿಲ್ಲ. ಕಡೆಗೆ ಗಂಡನ ಬಳಿ ಹೋಗಿ ಹೇಳಿದರು.

"ನನ್ನ ಮಾತು ಕೇಳೀಂದ್ರೆ. ಅವಳಿಗೆ ಇಷ್ಟವಿಲ್ಲವೆಂದು ಕಾಣುತ್ತದೆ. ಈ ಮದುವೆ ಬೇಡ"

"ಏನೇ. ನೀನು ಅವಳಿಗೆ ಸಾಮೀಲೇನೇ ?"

"ನಾನು ಸಾಮಿ ಲೂ ಅಲ್ಲ. ಏನೂ ಅಲ್ಲ. ಎಷ್ಟೋ ಹೇಳಿದೆ. ಕೇಳುವುದಿಲ್ಲ. ಭಾವಿಯಲ್ಲಿ ಬೀಳುವುದಾಗಿ ಹೇಳುತ್ತಾಳೆ"

ಆ ಮಾತು ಕೇಳಿ ತಂದೆಗೂ ತುಸ ಗಾಬರಿಯಾಯಿತು. ಗಂಡ ಹೆಂಡಿರಲ್ಲಿ ಪಿಸಪಿಸನೆ ಮಾತುಗಳು ನಡೆದುವು. ಯಾರೂ ಹೇಳದಿದ್ದರೂ ಗುಂಡಪ್ಪನವರ ತಂಗಿ ನಾಗರತ್ನಮ್ಮನವರಿಗೂ ವಿಷಯ ತಿಳಿಯಿತು.

ಆಕೆ "ಗುಂಡ. ಹುಡುಗಿಗೆ ಇಷ್ಟವಿಲ್ಲದಿದ್ದರೆ ಯಾಕೆ ಬಲಾತ್ಕಾರ ಮಾಡುತ್ತೀಯೆ ? ಬೇಡ ಬಿಡು" ಎಂದರು.

"ನೀನೂ ಹೀಗೆಯೇ ಮಾತನಾಡಿದರೆ ಹೇಗೆ ನಾಗು. ನಿನಗೇ ಗೊತ್ತಿರುವಂತೆ ಎಷ್ಟು ಕಡೆ ನೋಡಿದೆವು. ಒಂದೂ ಆಗಲಿಲ್ಲ. ದೇವರ ದಯದಿಂದ ಸಂಬಂಧ ಕೂಡಿ ಬಂದಿದೆ. ಇದನ್ನು ಕಳೆದುಕೊಂಡರೆ ಹೇಗೆ ?"

"ನೀನು ಹೇಳುವುದು ನಿಜ. ಆದರೆ ಹುಡುಗಿ ಭಾವಿಗೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತೀನೆ ಎಂದರೆ ನಾವು ಏನು ಮಾಡುವುದಕ್ಕಾಗುತ್ತದೆ"

ಗುಂಡಪ್ಪ ತಲೆಯ ಮೇಲೆ ಕೈಯಿಟ್ಟು ಪ್ರಪಂಚವೇ ಮುಳುಗಿಹೋಯಿತೆಂಬಂತೆ ಕುಳಿತುಕೊಂಡರು.

"ನಾನೊಂದು ಮಾತು ಹೇಳುತ್ತೇನೆ. ಕೇಳುತ್ತೀಯಾ ಗುಂಡಾ"

"ಹೇಳಮ್ಮ. ಏನು ಹೇಳುತ್ತೀಯೋ ನೋಡೋಣ"

"ಈಗ ಉಪಾಯವಾಗಿ ವಿಷಯ ಮುಂದೆ ಹಾಕಿಬಿಡೋಣ. ನಾಲ್ಕು ದಿನ ಬಿಟ್ಟು ಹುಡುಗಿಗೆ ಸರಿಯಾಗಿ ಬುದ್ಧಿ ಹೇಳಿ ಅನಂತರ ಮಾಡಿಸೋಣ"

"ಅಲ್ಲ ನಾಗು. ಲಗ್ನಪತ್ರಿಕೆ ಮಾಡಿಸಿಬಿಡುತ್ತೇನೆ-ಎಂದೆ. ಈಗ ಅವರನ್ನು ಬಿಟ್ಟರೆ ಕೈಗೆ ಬಂದದ್ದು ಬಾಯಿಗಿಲ್ಲ-ಎಂಬಂತೆ ಆಗುತ್ತದಲ್ಲ"

"ಏನು ಮಾಡುವುದಕ್ಕಾಗುತ್ತದೆ ? ಎಲ್ಲರೂ ಕುಳಿತಿರುವಾಗ ಪ್ರಮಿಳೆ

ಬಂದು ನಾನು ಮದುವೆಮಾಡಿಕೊಳ್ಳುವುದಿಲ್ಲವೆಂದು ಹೇಳಿದರೆ ನಮಗೆಲ್ಲಾ ಎಷ್ಟೊಂದು ಅಪಮಾನ. ಅದನ್ನು ಯೋಚನೆಮಾಡು. ಈಗಿನ ಕಾಲದ ಹುಡುಗಿಯರು ಯಾವುದಕ್ಕೂ ಹೇಸುವವರಲ್ಲ"

ಗುಂಡಪ್ಪ ಆ ವಿಷಯ ಯೋಚಿಸಿರಲಿಲ್ಲ. ಅದನ್ನು ಕೇಳಿ ಅವರ ಎದೆ ಕಂಪಿಸಿತು. ನಿಜ. ಎಂದೂ ಎದುರಿಗೆ ನಿಂತು ಮಾತನಾಡದ ಹುಡುಗಿ ಇಷ್ಟೊಂದು ಉದ್ಧಟತನದಿಂದ ಮಾತನಾಡುತ್ತಿದ್ದಾಳೆ. ನಾಗೂ ಹೇಳಿದ ಹಾಗೆ ಬೀಗರ ಎದುರಿಗೆ ಬಂದು "ನನಗೆ ಈ ಮದುವೆಯು ಬೇಡ" ಎಂದರೆ? ಹಾಗಾಗುವುದಿಲ್ಲ. ಸದ್ಯದಲ್ಲಿ ಲಗ್ನಪತ್ರಿಕೆಯನ್ನು ಮುಂದೆ ಹಾಕುವುದೇ ಉತ್ತಮ. ಅವರೂ ಕುದುರಿರುವ ಸಂಬಂಧ ಈ ಗಲಾಟೆಗಳಲ್ಲಿ ತಪ್ಪಿಹೋದರೆ?

"ಅದು ಸರಿ, ನಾಗೂ. ಈ ಸಂಬಂಧ ತಪ್ಪಿಹೋದರೆ ?"

"ಅದಕ್ಕೆ ಏನು ಮಾಡಬೇಕು ಎನ್ನುತ್ತೀಯೆ ? ಈಗ ಬಂದಿರುವ ಗಂಡಾಂತರದಿಂದ ಪಾರಾಗೋಣ. ಅನಂತರ ಮುಂದಿನ ಯೋಚನೆ"

ಆಕೆ ಆ ಮಾತು ಹೇಳುವುದಂತೂ ಹೇಳಿದಳು. ಆದರೆ ಅದು ಅಣ್ಣನಿಗಾಗಲೀ ಅತ್ತಿಗೆಗಾಗಲೀ ತೃಪ್ತಿಯನ್ನುಂಟು ಮಾಡುತ್ತದೆಂದು ಆಕೆಗೆನ್ನಿಸಲಿಲ್ಲ. ಹೇಳುವಾಕೆಗೇ ಸಮಾಧಾನಕರವಲ್ಲದ ವಿಷಯ ಕೇಳುವವರಿಗೆ ಸಮಾಧಾನವಾಗುವುದು ಹೇಗೆ ?

ಅದರಿಂದ ಹೇಳಿದ ವಿಷಯಕ್ಕೆ ಆಸೆಯನ್ನು ತುಂಬುತ್ತಾ "ನೀನು ಯೋಚನೆ ಮಾಡಬೇಡಣ್ಣಾ. ಈ ಸಂಬಂಧ ತಪ್ಪಿಹೋಗದಂತೆ ಏನಾದರೂ ಹೇಳಿ ನಾಲ್ಕುದಿನ ಮುಂದೆ ಹಾಕುತ್ತೇನೆ" ಎಂದು ಭರವಸೆಯ ಮಾತು ಹೇಳಿದರು.

ಮದುವೆಯ ಮೊದಲ ಹೆಣ್ಣಿನ ಮನೆಯಲ್ಲಿ ಊಟ ಮಾಡಬಾರದೆಂಬ ಕಾರಣದಿಂದ ಗಂಡಿನ ಕಡೆಯವರು ಗುಂಡಪ್ಪನವರಿಗೆ ಸ್ನೇಹಿತ ವಾಸುದೇವಯ್ಯನವರ ಮನೆಯಲ್ಲಿ ಬಿಡಾರಮಾಡಿ ಕೊಡಲಾಗಿತ್ತು. ನಾಗರತ್ನಮ್ಮ ಅಲ್ಲಿಗೆ ಹೋಗಿ ಗಂಡಿನ ತಾಯಿಯನ್ನು ಕಂಡು ಮಾತನಾಡಿದರು.

"ಶಾಂತಮ್ಮನವರೇ. ನಮ್ಮ ಅಣ್ಣನ ಮನೆಯಲ್ಲಿ ಎಲ್ಲರೂ ಒಪ್ಪಿಕೊಂಡಿದ್ದಾರೆ. ಅದಷ್ಟು ಬೇಗ ಮದುವೆಮಾಡಿ ಬಿಡಬೇಕೂ ಅಂತ ಇದ್ದಾನೆ.

ಇವಳೇ ಕಡೆಯ ಮಗಳು. ಇದ್ದುದರಲ್ಲಿ ಸ್ವಲ್ಪ ಲಕ್ಷಣವಾಗಿ ಮದುವೆ ಮಾಡ ಬೇಕು ಎಂದು ಇದೆ. ಸ್ವಲ್ಪ ದುಡ್ಡೂ ಕಾಸೂ ಏರ್ಪಾಟು ಮಾಡಿಕೊಂಡು ಬೆಂಗಳೂರಿಗೆ ಬರುತ್ತಾನೆ. ಲಗ್ನ ಕಟ್ಟಿಸಿಬಿಡೋಣ"

''ಹಾಗೇ ಆಗಬಹುದು. ಅವರೂ ಏರ್ಪಾಟುಗಳನ್ನು ಮಾಡಿಕೊಳ್ಳ ಬೇಕೋ ಇಲ್ಲವೋ? ಗಂಡು ಹೆಣ್ಣುಗಳು ಒಪ್ಪಿ ಮಾತುಕತೆಗಳೆಲ್ಲವೂ ಮುಗಿದ ಮೇಲೆ ಲಗ್ನಪತ್ರಿಕೆ ಮಾಡಿಸುವುದು ಎಷ್ಟು ಹೊತ್ತು? ಹಾಗೆ ಆಗಲಿ"

ಅದೇ ದಿನ ಸಾಯಂಕಾಲದ ಬಸ್ಸಿಗೆ ಪ್ರಯಾಣ ಮಾಡುತ್ತೇವೆಂದರು ಗಂಡಿನ ಕಡೆಯವರು. ನಾಗರತ್ನಮ್ಮ ಆಗುವುದಿಲ್ಲವೆಂದು ಬಲಾತ್ಕಾರ ದಿಂದ ಆ ದಿನ ಅಲ್ಲಿಯೇ ಉಳಿಸಿಕೊಂಡು ಮಾರನೆಯ ದಿನ ಅವರಿಗೆಲ್ಲಾ ಒಳ್ಳೆಯ ಔತಣಮಾಡಿಸಿ ಕಳುಹಿಸಿಕೊಟ್ಟರು.

ಗಂಡಿನ ಕಡೆಯವರು ಶಿವಸಮುದ್ರಕ್ಕೆ ಬಂದುದು ಶನಿವಾರ. ಆ ದಿನ ಹುಡುಗಿಯನ್ನು ಬಂದು ನೋಡಿದರು. ಮಾರನೆಯ ದಿನ ಭಾನುವಾರ ಅವರಿಗೆ ಔತಣಮಾಡಿಸಿ ಬೀಳ್ಕೊಟ್ಟದ್ದಾಯಿತು.

ಆ ಎರಡು ದಿನಗಳೂ ಗಲಾಟೆಯಲ್ಲಿ ಕಳೆದುಹೋದುವು.

ಸೋಮವಾರ ಹತ್ತುಗಂಟೆಯ ಹೊತ್ತಿಗಾಗಲೇ ಪ್ರಮೀಳೆ ಸ್ಕೂಲಿಗೆ ಹೋಗಲು ಸಿದ್ಧವಾದಳು. ತಂದೆಯ ಜೊತೆಯಲ್ಲಿ ಊಟಮಾಡಿಕೊಂಡು ಅವರ ಜೊತೆಯಲ್ಲಿಯೇ ಸ್ಕೂಲಿಗೆ ಹೋಗುವುದು ಪದ್ಧತಿ.

ಕೋಟು ಪೇಟಾಗಳನ್ನು ಇಟ್ಟುಕೊಂಡು ಸ್ಕೂಲಿಗೆ ಹೊರಡಲು ಸಿದ್ಧವಾಗಿದ್ದ ಗುಂಡಪ್ಪನವರು ಮಗಳೂ ಐದಾರು ಪುಸ್ತಕಗಳನ್ನೂ ಒಂದು ಸಣ್ಣ ಟಿಫಿನ್ ಡಬ್ಬಿಯನ್ನೂ ತೆಗೆದುಕೊಂಡು ನಿಂತುದನ್ನು ಗಮನಿಸಿ ''ನೀನು ಇನ್ನು ಮೇಲೆ ಸ್ಕೂಲಿಗೆ ಬರಬೇಡ" ಎಂದರು.

ಅವರ ಮಾತು ದುಗುಡವಾಗಿತ್ತು.

ಆದರೂ ಪ್ರಮೀಳೆಯು ''ಯಾಕಣ್ಣ" ಎಂದಳು.

"ಯಾಕೆ ಎಂದರೆ ನನ್ನ ಇಷ್ಟ. ಬರಬೇಡ ಎಂದರೆ ಬರಬೇಡ. ಮನೆಯಲ್ಲಿಯೇ ಬಿದ್ದಿರು"

ಪ್ರಮಿಳೆ ಅದಕ್ಕೆ ಎದುರು ಮಾತು ಹೇಳಲಿಲ್ಲ. ತೆಗೆದುಕೊಂಡಿದ್ದ ಪುಸ್ತಕಗಳನ್ನು ರಪ್ಪನೆ ಕಿಟಕಿ ಗೂಡಿನಲ್ಲಿ ಎಸೆದು ಹೋಗಿ, ಹಜಾರದ ಚಾಪೆಯ ಮೇಲೆ ಕುಳಿತುಕೊಂಡಳು.

ಗುಂಡಪ್ಪ ಮನೆಬಿಟ್ಟು ಹೋದ ಮೇಲೆ "ಅಮ್ಮ. ಏ ಅಮ್ಮ" ಎಂದು ಕೂಗಿಕೊಂಡಳು.

ಒಳಗೆ ಕೆಲಸಮಾಡುತ್ತಿದ್ದ ಪಾತಮ್ಮ ತಮ್ಮ ಮಗಳು ಅಷ್ಟುಹೊತ್ತಿಗಾಗಲೇ ಸ್ಕೂಲಿಗೆ ಹೊರಟು ಹೋಗಿದ್ದಾಳೆಂದುಕೊಂಡಿದ್ದರು. ಮಗಳು ಕರೆಯುತ್ತಲೇ ಇನ್ನೂ ಇವಳೇಕೆ ಇಲ್ಲಿಯೇ ಇದ್ದಾಳೆ—ಎಂಬುದೊಂದು ಕಡೆ, ಇವಳು ಯಾಕೆ ಕರೆಯುತ್ತಿದ್ದಾಳೆಂದು ಕುತೂಹಲವೊಂದು ಕಡೆ ಹೀಗಾಗಿ ಹೊರಗೆ ಬಂದರು.

"ಸ್ಕೂಲಿಗೆ ಹೋಗಲಿಲ್ಲವೇನೇ, ಯಾಕೆ"

"ಅಣ್ಣ ಹೇಳಿದ್ದು ಕೇಳಿದೆಯೋ ಇಲ್ಲವೋ, ನಾನು ಸ್ಕೂಲಿಗೆ ಹೋಗಕೂಡದಂತೆ. ಬೇಡ. ನನಗೇನು ಹೋಗುವುದೇ ಇಲ್ಲ"

"ಯಾಕೆ ಹೋಗಕೂಡದೆಂದರೇ ? ಪರೀಕ್ಷೆ ಸಮಯ. ಎಲ್ಲಿಯಾದರೂ ಉಂಟೇ ?"

"ನನಗೇನು ಗೊತ್ತು ಅವನನ್ನೇ ಕೇಳು. ಇನ್ನು ಮೇಲೆ ಸ್ಕೂಲಿಗೆ ಬರಬೇಡ ಎಂದು ಅವನು ಹೇಳುತ್ತಿದ್ದಾಗ ನೀನೇನು ಮಾಡುತ್ತಿದ್ದೆ ? ಆಗಲೇ ಬಂದು ಕೇಳಬೇಕಾಗಿತ್ತು. ನನಗೇನು, ನಾನು ಮನೆಯಲ್ಲಿಯೇ ಕುಳಿತುಕೊಂಡಿರುತ್ತೇನೆ. ಫೇಲಾಗುತ್ತದೆ. ಆಗಲಿ"

"ಏನೋ ಅಂದಿರಬೇಕು ಬಿಡು, ಮನೆಯಲ್ಲಿಯೇ ಓದಿಕೋ. ಒಂದು ದಿನ ಸ್ಕೂಲಿಗೆ ಹೋಗದಿದ್ದರೆ ಏನು ಮುಳುಗಿಹೋಯಿತು ?"

ಗುಂಡಪ್ಪ ಶೀಘ್ರಕೋಪಿಗಳು. ಕಾರಣವೇ ಇಲ್ಲದೆ ಕೆಲವು ಸಲ ಕೋಪ ಮಾಡಿಕೊಳ್ಳುತ್ತಿದ್ದರು. ಹಾಗೆಯೇ ಅವರ ಕೋಪ ಬಹಳ ಬೇಗ ಶಾಂತವಾಗಿ ಹೋಗುತ್ತಿತ್ತು. ಕೆಲವು ಸಲ ಯಾರಾದರೂ "ಏನಾಗಿದೆ ಅಂತ

ಕೋಪಮಾಡಿಕೋತೀರಿ ?" ಎಂದು ಸಮಾಧಾನದಿಂದ ಕೇಳಿದರೆ ಮರುಕ್ಷಣದಲ್ಲಿ ಅವರೇ "ಕಾರಣವೇ ಇಲ್ಲದೇ ಕೋಪಮಾಡಿಕೊಂಡೆನಲ್ಲಾ" ಎಂದುಕೊಳ್ಳುವರು ಕೋಪ ಹೋಗಿ ಮುಖದಲ್ಲಿ ನಗುವು ಕಾಣಿಸಿಕೊಳ್ಳುವುದು.

ಅದೇರೀತಿ ಈ ದಿನವೂ ಅವರಿಗೆ ಕೋಪ ಬಂದಿದೆ ಎಂದು ತಾಯಿ ಮಕ್ಕಳು ಅಂದುಕೊಂಡಿದ್ದರು. ಪ್ರಸಂಗ ಅಷ್ಟು ಸುಲಭವಾಗಿ ತೀರಿ ಹೋಗಲಿಲ್ಲ.

ಸಾಯಂಕಾಲ ಪ್ರಮಿಳೆಯ ಗೆಳತಿ ಚಂದ್ರಮಣಿ ಮನೆಗೆ ಬಂದಳು. ಆಗ ಪ್ರಮಿಳೆ ಕಾಫೀ ಕುಡಿಯುತ್ತಿದ್ದಳು. ಮುಗಿಸಿಕೊಂಡು ಹೊರಗಡೆ ಬಂದಾದ ಮೇಲೆ ಗೆಳತಿಯರಿಬ್ಬರೂ ಮಾತನಾಡತೊಡಗಿದರು.

"ಏನೇ, ಈ ದಿನ ಸ್ಕೂಲಿಗೇಕೆ ಬರಲಿಲ್ಲ"

"ಕೆಲಸವಿತ್ತಮ್ಮ"

"ಈಗಲೂ ಹಿಂದೀ ಪಾಠಕ್ಕೆ ಬರುತ್ತೀಯೋ ಇಲ್ಲವೋ, ಹಾಗೆಯೇ ಹೊರಟುಹೋಗೋಣ ಎಂದುಕೊಂಡಿದ್ದೆ. ಯಾವುದನ್ನೂ ನೋಡಿಕೊಂಡು ಹೋಗೋಣವೆಂದುಕೊಂಡವಳು ಹೀಗೆ ಬರಬೇಕಾಯಿತು. ಈಗ ನೀನೇನು ಬರುತ್ತೀಯೋ ಇಲ್ಲವೋ"

"ಬರುತ್ತೀನಿ ಕಣೇ. ಪಾಠಕ್ಕೆ ತಪ್ಪಿಸಿಕೊಂಡರಾಗುತ್ತದೆಯೇ ?"

ಪ್ರಮಿಳೆ ಮುಖ ತೊಳೆದು ತಲೆಹೆಕ್ಕಿ ಸರಿಮಾಡಿಕೊಂಡು ಬೇರೇ ವಾಯಿಲ್ ಸೀರೆ ಉಟ್ಟು, ಮುಖ ಕೊರಳುಗಳಿಗೆ ಪೌಡರ್ ಹಚ್ಚಿ, ಅದನ್ನು ಅಂಗೈ ಅಗಲದ ಕರ್‌ಛೀಫ್‌ನಿಂದ ಒರಸಿ, ಕಿರುಬೆರಳಿನ ಉಗುರು ಕೊನೆಯಿಂದ ಕುಂಕುಮ ಸರಿಮಾಡಿ ಹೊರಡಲನುವಾದಳು.

ಒಳಗಿನಿಂದ ಬಂದ ಗುಂಡಪ್ಪ "ಚಂದ್ರಮಣಿ ನೀನು, ಪಾಠಕ್ಕೆ ಹೋಗಮ್ಮ. ಈ ದಿನ ಪ್ರಮಿಳೆ ಬರುವುದಿಲ್ಲ. ಅವಳಿಗೆ ಕೆಲಸವಿದೆ'' ಎಂದರು.

ವಿಧಿಯಿಲ್ಲದೇ ಪ್ರಮಿಳೆ ನಿಂತುಬಿಟ್ಟಳು.

ಮಾರನೆಯ ದಿನವೂ ಹೀಗೇ ಆಯಿತು.

ಪಾತಮ್ಮನವರು ಗಂಡನೊಡನೆ "ಇದೇನೂರಿ. ಸ್ಕೂಲಿಗೆ ಹೋಗಬೇಡ ಎನ್ನುತ್ತೀರಿ. ಹಿಂದೀ ಪಾಠಕ್ಕೆ ಹೋಗಬೇಡ ಎನ್ನುತ್ತೀರಿ. ಮಗು,

ಅವಳಿಗೂ ಬೇಜಾರಾಗುವುದಿಲ್ಲವೇ? ಮನೆಯಲ್ಲಿಯೇ ಕುಳಿತಿದ್ದರೆ ಹೇಗೆ?"
ಎಂದರು.

"ಹೇಗೂ ಇಲ್ಲ. ಎಲ್ಲಾ ಸರಿಮಾಡಿಕೊಳ್ಳಬೇಕು. ಈಗ ನೀನು ಮನೆಯಲ್ಲಿಯೇ ಇರುವುದಿಲ್ಲವೇ? ನಿನಗೆ ಬೇಜಾರಾಗುತ್ತದೆಯೇ?

"ನನಗೂ ಅವಳಿಗೂ ಒಂದೇನೇ. ಮಗು ಸ್ಕೂಲಿಗೆ ಹೋಗದಿದ್ದರೆ ಹೇಗೆ?"

"ಅದನ್ನು ನಿರ್ಣಯಮಾಡಿ ಬಿಟ್ಟಿದ್ದೇನೆ. ಇನ್ನು ಮೇಲೆ ಅವಳು ಸ್ಕೂಲಿಗೆ ಹೋಗುವುದು ಬೇಡ"

"ಅಂದರೆ ಈಗಲೇ ಓದು ನಿಲ್ಲಿಸಿ ಬಿಡುವುದು ಅಂತೀರಾ?"

"ಅಷ್ಟೇ ಅಷ್ಟೇ. ಹೆಣ್ಣುಮಕ್ಕಳು ಓದಿ ಯಾರಿಗೂ ಸಂಪಾದನೆಮಾಡಿ ಹಾಕಬೇಕಾಗಿಲ್ಲ. ಇವರನ್ನೆಲ್ಲಾ ಓದಿಸಿಯೇ ಎದುರಿಗೆ ನಿಂತು ಮಾತಾಡುವ ಧೈರ್ಯ ಬಂದಿದೆ"

ಆಗ ತಾಯಿ ಮಕ್ಕಳಿಬ್ಬರಿಗೂ ಗೊತ್ತಾಯಿತು, ಗುಂಡಪ್ಪನವರಿಗೆ ಬಂದಿರುವುದು ಹಿಂದಿನಂತಹ ಕೋಪವಲ್ಲ–ಎಂದು.

ಚಂದ್ರಮಣಿಯೊಂದಿಗೆ ಹೊರಡಲು ಸಿದ್ಧವಾಗಿದ್ದಾಗ ತಂದೆ ಹಠಾತ್ತನೆ ಬಂದು ಹಾಗೆ ಹೇಳಿದುದು ಪ್ರಮಿಳೆಗೆ ತೇಜೋವಧೆ ಮಾಡಿದಂತಾಗಿತ್ತು. ಅದರ ಕಾರಣ ಕೇಳಿದ ಮೇಲಂತೂ ವಿಪರೀತ ಕೋಪಬಂದಿತು. ಆ ಕೋತೀ ಮುಸುಡಿಯ ಗಂಡನ್ನು ಮದುವೆ ಮಾಡಿಕೊಳ್ಳುದಿಲ್ಲವೆಂದು ಹೇಳಿದ್ದರಿಂದ ಅಲ್ಲವೇ ಅವನಿಗಷ್ಟು ಕೋಪ ಎಂದುಕೊಂಡಳು. ಸ್ಕೂಲಿಗೆ ಹೋಗಬೇಡವೆಂದು ಹೇಳಿದುದಕ್ಕಿಂತ ಲೂ ಹಿಂದೀ ಪಾಠಕ್ಕೆ ಹೋಗಬೇಡವೆಂದು ಹೇಳಿದುದು ಅವಳ ಮನಸ್ಸಿನ ಮೇಲೆ ವಿಪರೀತ ಪರಿಣಾಮವನ್ನು ಉಂಟುಮಾಡಿತು.

ಮಾರನೆಯ ದಿನವೂ ಹೀಗೆಯೇ ಆಯಿತು. ತಂದೆಯ ಶಾಸನದಿಂದ ಮಗಳು ತಪ್ಪಿಸಿಕೊಳ್ಳಲಾಗಲಿಲ್ಲ. ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಒದ್ದಾಡತೊಡಗಿದಳು.

ಇದೇ ಸಮಯದಲ್ಲಿ ಮಗಳು ಯಾರಿಗೋ ಏನೋ ಬರೆಯುತ್ತಿದ್ದು

ದನ್ನು ಪಾಠನ್ನು ಗಮನಿಸಿದರು. ಏನೋ ಪಾಠ ಬರೆಯುತ್ತಿದ್ದಾಳೆ-ಎಂದು ಕೊಂಡು ಸುಮ್ಮನಾದರು. ಆದರೆ ಪ್ರಮಿಳೆ ಅದನ್ನು ಕವರಿನಲ್ಲಿ ಹಾಕಿ ತೆಗೆದಿಟ್ಟುದನ್ನು ನೋಡಿ ಕಾಗದವೆಂದುಕೊಂಡರು. ತಮ್ಮ ಮಗಳು ಯಾರಿಗೆ ಕಾಗದ ಬರೆಯುತ್ತಾಳೆ. ಅಂತಹ ಪ್ರಮೇಯವೇನು-ಎಂದುಕೊಂಡರು.

ಪ್ರಮಿಳೆ ಸ್ನಾನಕ್ಕೆ ಹೋದಾಗ ಕೋಣೆಗೆ ಹೋಗಿ ಮೂರು ನಾಲ್ಕು ಪುಸ್ತಕಗಳನ್ನು ತಿರುಗಿಸಿ ಹಾಕಿ ಆ ಕಾಗದ ಹುಡುಕಿ ತೆಗೆದರು. ಧಾರಾಳವಾಗಿ ಪಾಠನ್ನುನವರಿಗೆ ಓದಲು ಬರುತ್ತಿರಲಿಲ್ಲವಾದರೂ ಅಕ್ಷರಕ್ಕೆ ಅಕ್ಷರ ಕೂಡಿಸಿಕೊಂಡು ಓದಬಲ್ಲವರಾಗಿದ್ದರು.

ಕವರಿನ ಮೇಲೆ ವಿಳಾಸವನ್ನು ಓದಿದರು. "ಶ್ರೀ ಮಾಧವರಾವ್ ಹಿಂದೀ ಮೇಷ್ಟರು" ಎಂದಿತ್ತು. ಏನು ಬರೆದಿದ್ದಾಳೆಯೋ ನೋಡೋಣವೆಂದು ಅದನ್ನು ತೆಗೆದಿಟ್ಟುಕೊಂಡಿದ್ದರು.

ಮಗಳು ಸ್ನಾನದ ಮನೆಯಲ್ಲಿದ್ದಾಗ ಅವಳ ಕಣ್ಣಿಗೆ ಬೀಳದೇ ಇರಲೆಂದು ಅವಸರವಸರವಾಗಿ ಕಾಗದವನ್ನು ತಂದಿಟ್ಟುಕೊಂಡರು. ತೆಗೆದಿಟ್ಟುಕೊಂಡರೇ ವಿನಾ ಅದು ಮುಖ್ಯವಾದ ಕಾಗದವೆಂದು ಅವರಿಗೆ ತೋರಲಿಲ್ಲ. ಏನೋ ನಾಲ್ಕು ದಿನದ ರಜಾಕ್ಕೆ ಬರೆದುಕೊಂಡಿರಬಹುದು-ಎಂದುಕೊಂಡರು. ಅವಳು ಬರೆದಿಟ್ಟದ್ದ ಕಾಗದವನ್ನು ಹುಡುಗಿಯಂತೆ ಯಾಕೆ ತಂದಿಟ್ಟುಕೊಂಡೆ ಎಂದು ನಾಚಿಕೆಪಟ್ಟರು. ಹೇಗೆ ಅವಳಿಗೆ ಗೊತ್ತಾಗದೇ ಅದನ್ನು ತೆಗೆದುಕೊಂಡರೋ ಹಾಗೆಯೋ ಅದನ್ನು ಅಲ್ಲಿಯೇ ಇಟ್ಟುಬಿಡಬೇಕೆಂದರು.

ತಮಗೆ ಕಾಗದ ಯಥಾಸ್ಥಾನದಲ್ಲಿ ಇಡಲು ಅವಕಾಶಸಿಕ್ಕಲಿಲ್ಲ. ಅಷ್ಟರಲ್ಲಿ ಏನು ಕಾರಣವೇರ್ಪಟ್ಟಿತೋ, ಏನಾಯಿತೋ ಪ್ರಮಿಳೆ ತಾನು ಬರೆದಿದ್ದ ಕಾಗದ ಗೈರುಹಾಜರಿಯಾದುದನ್ನು ಗಮನಿಸಿದಳು. ಪುಸ್ತಕದ ನಡುವೆ ತೆಗೆದಿಟ್ಟ ನೆನಪು ಚೆನ್ನಾಗಿದೆ. ಇಲ್ಲ. ಇನ್ನೆಲ್ಲಿಯೂ ಇಡಲಿಲ್ಲ. ಇಟ್ಟಿದ್ದು ಪುಸ್ತಕದಲ್ಲಿಯೇ. ಅದಲ್ಲಿ ಇರದೇ ಇದ್ದುದನ್ನು ಗಮನಿಸಿದ ಪ್ರಮಿಳೆಗೆ ತಾನು ಮರೆತು ನೆಲದ ಮೇಲೆಯೇ ಇಟ್ಟು ಹೋಟುಹೋದೆನೋ, ಗುಡಿಸಲು ಬಂದ ತಾಯಿ ಅದನ್ನು ಹೊರಗೆ ಹಾಕಿಬಿಟ್ಟಿದ್ದಾಳೆಯೋ ಎಂದು ಸಂದೇಹವಾಯಿತು.

"ಅಮ್ಮಾ. ಗುಡಿಸುತ್ತಿದ್ದಾಗ ಕೋಣೆಯಲ್ಲಿ ಯಾವುದಾದರೂ ಕಾಗದ ಸಿಕ್ಕಿತೇ ?"

ಮಗಳ ಮಾತಿನಲ್ಲಿ ಮೂಡಿದ್ದ ಗಾಬರಿ ತಾಯಿಯ ಮನಸ್ಸಿಗೆ ಬಂದಿತು.

ಆಗಲೇ ಆ ಕಾಗದದಲ್ಲಿ ಸೀತಮ್ಮನವರಿಗೆ ಆಸಕ್ತಿಯುಂಟಾದದ್ದು. ಸಿಕ್ಕಲಿಲ್ಲವೆಂದಕೂಡಲೇ ಪ್ರಮಿಳೆ ಭಯವಿಹ್ವಲೆಯಾದದ್ದು, ಅನಂತರ ಅದನ್ನು ಹುಡುಕಲು ಪರದಾಡಿದ್ದು ಇವುಗಳನ್ನು ನೋಡಿ ಆ ಕಾಗದದಲ್ಲಿ ಏನಿದೆಯೋ ತಿಳಿದುಕೊಳ್ಳಬೇಕೆಂಬ ಅವರ ಆಸಕ್ತಿಯನ್ನು ಕೆರಳಿತು.

ರಾತ್ರಿ ಮನೆಗೆಲಸಗಳನ್ನು ಮುಗಿಸಿಕೊಂಡು ಯಜಮಾನರಿಗೆ ಕಾಗದವನ್ನು ತೆಗೆದುಕೊಟ್ಟು "ಇದೇನೋ ಸ್ವಲ್ಪ ನೋಡಿ" ಎಂದರು.

ಕವರಿನ ಮೇಲಿದ್ದ ವಿಳಾಸವನ್ನು ನೋಡಿದೊಡನೆಯೇ "ಇವನಿಗೆ ಪ್ರಮಿಳೆ ಕಾಗದ ಬರೆಯುವಂತಹ ಪ್ರಮೇಯವಾದರೂ ಏನಿತ್ತು?"ಎಂದೆನಿಸಿತು ಗುಂಡಪ್ಪನವರಿಗೆ. ಆದರೂ ಆಸಕ್ತಿಯಿಂದ ಕವರು ಒಡೆದು ಕಾಗದ ತೆಗೆದು ಓದಿದ್ದರು. ಅದರಲ್ಲಿ ಈರೀತಿಯಾಗಿತ್ತು.

"ಪ್ರೀತಿಪಾತ್ರರಾದ ಚಿಕ್ಕ ಮೇಷ್ಟರಿಗೆ—

"ನಾನು ಈ ಎರಡು ದಿನಗಳಿಂದ ಪಾಠಕ್ಕೆ ಬರದಿರುವುದು ನಿಮಗೆ ಬಹಳ ಆಶ್ಚರ್ಯವಾಗಿರಬಹುದು. ಅದು ನಿಮಗೆ ಹೇಗಾಗಿದೆ ಎಂದು ಊಹಿಬಲ್ಲೆ. ನಿಮ್ಮನ್ನು ನೋಡದೇ ನನ್ನ ಮನಸ್ಸಿನಲ್ಲಿ ಉಂಟಾಗುತ್ತಿರುವ ಅಲ್ಲ ಕಲ್ಲೋಲವೇ ನಿಮಗೂ ಆಗುತ್ತಿರಬಹುದೆಂದು ನಂಬುತ್ತೇನೆ.

"ಹಿಂದಿ ಪಾಠಕ್ಕೆ ಬರಬೇಕೆಂದು ಪ್ರತಿಕ್ಷಣವೂ ನನ್ನ ಮನಸ್ಸು ಮಿಡಿಯುತ್ತಿದೆ. ಆದರೆ ನಾನು ಬರುವಂತಿಲ್ಲ. ಅದೊಂದು ಕೆಲಸವಾಗಿದೆ. ಅದನ್ನು ಹೇಳುವುದಕ್ಕಾಗಿಯೇ ಈ ಕಾಗದ ಬರೆಯುತ್ತಿದ್ದೇನೆ.

"ಮೂರು ನಾಲ್ಕು ದಿನಗಳ ಹಿಂದೆ ಬೆಂಗಳೂರಿನಿಂದ ಒಬ್ಬ ಗಂಡನ್ನು ಕರೆದುಕೊಂಡು ಬಂದಿದ್ದರು. ಮದುವೆಯೆಲ್ಲಾ ಬಹುಮಟ್ಟಿಗೆ ಗೊತ್ತೇ ಆಗಿದ್ದಿತೆಂದು ಹೇಳಬಹುದು. ಕಡೆಗೆ ನಾನು ಮದುವೆಯಾಗುವುದಿಲ್ಲವೆಂದು ಹಟ ಹಿಡಿದೆ. ಸದ್ಯದಲ್ಲಿ ಮದುವೆಯ ಮಾತು ಮುಂದೆ ಹೋಗಿದೆ. ಆದರೆ ಹೀಗೇ ಅದನ್ನು ಮುಂದೆ ಹಾಕುವುದಕ್ಕಾಗುತ್ತದೆಂಬ ನಂಬಿಕೆಯು ನನಗಿಲ್ಲ.

"ಇವರಿಂದ ನಮ್ಮ ತಂದೆಗೆ ನನ್ನ ಮೇಲೆ ಬಹಳ ಅಸಮಾಧಾನವಾಗಿದೆ. ಆದರಿಂದ ನನ್ನನ್ನು ಮನೆಬಿಟ್ಟು ಹೋಗಕೂಡದೆಂದು ನಿರ್ಬಂಧಿಸಿದ್ದಾರೆ. ಸ್ಕೂಲಿಗೂ ಕಳಿಸಿಲ್ಲ. ಹಿಂದೀ ಪಾಠಕ್ಕೆಕೂಡ ಹೋಗಕೂಡದೆಂದು ಕಟ್ಟು ಮಾಡಿದ್ದಾರೆ. ಆದರೆ ನಮ್ಮ ನಮ್ಮ ವಿಷಯ ಇವರಿಗೆ ತಿಳಿದಿಲ್ಲ. ಏನೋ ಕೋಪದಿಂದ ಇನ್ನು ಮುಂದೆ ಓದುವುದು ಬೇಡವೆಂದು ಹೇಳಿದ್ದಾರೆ, ಅಷ್ಟೇ.

"ಹೀಗೆ ಮನೆಯಿಂದ ಹೊರಗೆ ಬರದೇ, ನಿನ್ನನ್ನು ನೋಡದೇ ಇರುವುದು ನನ್ನಿಂದ ಸಾಧ್ಯವಿಲ್ಲ. ಇದಕ್ಕೆ ನಾವು ಏನಾದರೊಂದು ತೀರ್ಮಾನವನ್ನು ಬೇಗ ಮಾಡಬೇಕು. ಏನು ಮಾಡಬೇಕೆಂಬುದು ನನಗಿನ್ನೂ ತೋಚುತ್ತಿಲ್ಲ. ನೀವು ಹೇಗೆ ಯೋಚನೆಮಾಡಿ ನಿರ್ಧಾರ ಮಾಡಿದರೂ ನಾನು ಹಾಗೆ ನಡೆದು ಕೊಳ್ಳುವುದಕ್ಕೆ ತಯಾರಾಗಿದ್ದೇನೆ.

"ನಿಮ್ಮನ್ನು ನೋಡಲು ಸದಾ ಹಾತೊರೆಯುತ್ತಿರುವ

"ಪ್ರಮೀಳಾ"

ಕಾಗದವನ್ನು ಓದುತ್ತಿದ್ದಂತೆ ಗುಂಡಪ್ಪನವರಿಗೆ ಕೋಪವು ಉಕ್ಕಿ ಬರ ತೊಡಗಿತು. ಅವರ ಮುಖವು ಅನೇಕ ಬಣ್ಣಗಳನ್ನು ಹೊಂದಿ ಅನೇಕ ಬಗೆ ಯಾದ ಭಾವಗಳು ಕಂಡುವು. ಓದಿ ಮುಗಿಸಿದ ಮೇಲೆ ಕಟಕಟನೆ ಹಲ್ಲು ಕಡಿಯ ತೊಡಗಿದರು.

ಅದನ್ನೆಲ್ಲಾ ನೋಡಿ ಭಯಗ್ರಸ್ಥರಾದ ಪಾತಮ್ಮನವರು ''ಏನೂಂದ್ರೆ. ಕಾಗದದಲ್ಲಿ ಏನಿದೆ ?" ಎಂದರು.

''ನಿನ್ನ ಮಗಳು ಯಾವನೋ ತಲೆಹಾಡಿದವನನ್ನು ಕಟ್ಟಿಕೊಂಡಿ ದ್ದಾಳೆ. ಆ ಮಿಂಡನಿಗೆ ಬರೆದ ಕಾಗದವಿದು"

ಆ ಮಾತು ಕೇಳಿ ಪಾತಮ್ಮನವರಿಗೆ ಮೂರ್ಛೆ ಬಂದಂತಾಯಿತು.

ಆದರೂ ಚೇತರಿಸಿಕೊಂಡು ''ಸ್ವಲ್ಪ ವಿಸರವಾಗಿ ಹೇಳಿ" ಎಂದರು.

ಗುಂಡಪ್ಪ ಪಟಪಟನೆ ಹಣೆಯನ್ನು ಚಚ್ಚಿಕೊಳ್ಳುತ್ತಾ ''ಏನು ಹೇಳಲಿ, ಪಾತು. ಇಬ್ಬರು ಹಿಂದೀ ಮೇಸ್ಟರುಗಳು ಈ ಊರಿಗೆ ಬಂದಿದ್ದಾರೆ ನೋಡು. ಅವರಲ್ಲಿ ಸಣ್ಣವನು ಮಾಧವರಾಯ ಅಂತ. ಪ್ರಮಿಳೆಯೂ ಅವನೂ ಸೇರಿ ಒಳಸಂಚು ಮಾಡಿದ್ದಾರೆ. ಆದರಿಂದಲೇ ಇವಳು ಮದುವೆಗೆ ಮುರಾಡ

ಹಾಕಿಕುಳಿತಿರುವುದು. ನನಗೆ ಈ ವಿಷಯವೇ ತಿಳಿದಿರಲಿಲ್ಲ. ನೋಡು. ಈ ಕಾಗದ ನಿನಗೆ ಹೇಗೆ ಸಿಕ್ಕಿತು ?" ಎಂದರು.

ಪಾತಮ್ಮನವರು ತನಗೆ ಕಾಗದ ಸಿಕ್ಕಿದ ಬಗೆಯನ್ನೂ ಅನಂತರ ಪ್ರಮೀಳೆಯು ಬಂದು ಆ ವಿಷಯ ಕೇಳಿದುದನ್ನೂ ಹೇಳಿ "ಇದೆಲ್ಲಾ ಆಯಿತಲ್ಲ. ಈಗೇನು ಮಾಡುವುದು ಹೇಳಿ" ಎಂದರು.

''ಏನು ಮಾಡುವುದೇ. ಮಾಡುತ್ತೇನೆ, ನೋಡು" ಎಂದು ಹೇಳಿ ಆತ ಪ್ರಮೀಳೆಯನ್ನು ಕರೆದರು.

ಅವಳು ಹಜಾರದಲ್ಲಿ ಮಲಗಿದ್ದಳು. ತಂದೆಯು ಎರಡು ಬಾರಿ ಕೂಗಲು ಅವಳಿಗೆ ಎಚ್ಚರವಾಯಿತು. ಎಚ್ಚರಗೊಂಡವಳು ಆ ಧ್ವನಿಯನ್ನು ಕೇಳಿದಳು. ಯಾಕೆ ಕೋಪಗೊಂಡು ಕರೆಯುತ್ತಾರೆಯೋ ಅರ್ಥವಾಗಲಿಲ್ಲ. ಅವರೂ ಎದೆಯು ಕಂಪಿಸಿತು. ''ಇರಲಿ ಬೆಳಗಾಗ ನೋಡಿಕೊಳ್ಳೋಣ ವಂತೆ" ಎಂದುಕೊಂಡವಳು ನಿದ್ದೆ ಬಂದವಳಂತೆಯೇ ಮಲಗಿಕೊಂಡಿದ್ದಳು.

ನಿದ್ದೆ ಬಂದವರನ್ನು ಎಬ್ಬಿಸಬಹುದಂತೆ. ನಿದ್ದೆ ಬರದವರನ್ನು ಎಬ್ಬಿಸುವುದು ಸಾಧ್ಯವಿಲ್ಲವಂತೆ. ಹಾಗೆ ತಂದೆ ಎಷ್ಟು ಕೂಗಿದರೂ ಮಗಳು ಏಳಲಿಲ್ಲ.

ಗುಂಡಪ್ಪನವರಿಗೆ ಕೋಪ ಮರುಕಳಿಸಿ ಬಂದಿತು. ಅವರು ಎದ್ದು ಬಂದು ಹಾಸಿಗೆಯ ಪಕ್ಕದಲ್ಲಿ ಕುಳಿತುಕೊಂಡು, ಹೊದ್ದಿಕೆಯನ್ನು ತೆಗೆದು ಮಗಳನ್ನು ಅಲ್ಲಾಡಿಸಿ ಎಬ್ಬಿಸಿ ಕುಳ್ಳಿರಿಸಿದರು.

"ನಮ್ಮ ಕುಲಕ್ಕೇ ಕೆಟ್ಟ ಹೆಸರು ತರಬೇಕೆಂದು ಎಷ್ಟು ದಿನಗಳಿಂದ ಹೊಂಚು ಹಾಕಿಕೊಂಡಿದ್ದೀಯೇ ?" ಎಂದು ಆರ್ಭಟಿಸಿದರು.

"ನನಗೊಂದೂ ಅರ್ಥವಾಗುತ್ತಿಲ್ಲ"

"ಯಾಕೆ ಅರ್ಥವಾಗುವುದಿಲ್ಲ. ಎಲ್ಲಾ ಆಗುತ್ತದೆ. ನೀನು ಘಾತಕಿ, ಹೇಳು. ಎಷ್ಟು ದಿನಗಳಿಂದ ಆ ಹಿಂದೀ ಮೇಸ್ಟರನ್ನು ಕಟ್ಟಿಕೊಂಡಿದ್ದೀಯೆ ?"

"ನಾನು ಯಾರನ್ನೂ ಕಟ್ಟಿಕೊಂಡಿಲ್ಲ"

''ಸುಳ್ಳುಬೇರೇ ಬೊಗಳುತ್ತೀಯಾ ? ನೋಡು. ಈ ಕಾಗದವನ್ನು ನೋಡು. ಇದು ನೀನು ತಾನೇ ಬರೆದುದು."

ತಂದೆ ಎದುರಿಗೆ ಹಿಡಿದ ಕಾಗದವನ್ನು ಮಗಳು ನೋಡಿದಳು. ನಿಮಿಷಾರ್ಧದಲ್ಲಿ ವಿಷಯವೆಲ್ಲವೂ ಅರ್ಥವಾಯಿತು. ತಾನು ಬರೆದು ಪುಸ್ತಕದಲ್ಲಿಟ್ಟದ್ದ ಕಾಗದವನ್ನು ಹೇಗೋ ತಾಯಿಯು ಕಂಡುಕೊಂಡು ಅದನ್ನು ತೆಗೆದು ತಂದೆಯ ಕೈಗೆ ಕೊಟ್ಟಿದ್ದಾಳೆ. ಆತ ಆರ್ಭಟಿಸುತ್ತಿದ್ದಾನೆ.

ಪ್ರಮಿಳೆ ಒಂದು ಬಾರಿ ದುರದುರನೆ ತಾಯಿಯ ಕಡೆ ನೋಡಿದಳು. ಪಾತಮ್ಮನವರು ತಾವೇ ಹೆತ್ತ ಮಗಳ ಆ ನೋಟಕ್ಕೆ ಹೆದರಿದರು.

"ಹೇಳು. ಇದನ್ನು ಬರೆದವರಾರು ?"

ಇನ್ನು ಮುಚ್ಚಿಟ್ಟು ಪ್ರಯೋಜನವಿಲ್ಲ. ಎಂದಾದರೂ ಹೇಳಬೇಕಾದ್ದೇ. ಎಲ್ಲರಿಗೂ ಗೊತ್ತಾಗಬೇಕಾದದ್ದೇ. ಇಲ್ಲವೆಂದರೆ ತಾನೇ ಇನ್ನು ವಿಷಯವನ್ನು ಗುಟ್ಟು ಮಾಡುವುದಕ್ಕಾಗುವುದೇ ?

"ನಾನೇ ಬರದದ್ದು."

"ಅಬ್ಬಾ ! ನನ್ನೆದುರಿಗೇ ಹಾಗೆ ಹೇಳುವ ಧೈರ್ಯ ಬಂದಿತಲ್ಲವೇ ನಿನಗೆ."

ಪ್ರಮಿಳೆ ಸುಮ್ಮನಿದ್ದಳು.

"ಹೇಳು. ಹೇಳು. ಅವನನ್ನು ನೀನು ಕಟ್ಟಿಕೊಂಡಿರುವುದು ನಿಜ ತಾನೇ ? ಅದ್ದರಿಂದ ತಾನೇ ಮೊನ್ನೆ ಬಂದಿದ್ದ ಚಿನ್ನದಂತಹ ಸಂಬಂಧ ಬೇಡವೆಂದು ಹೇಳಿದ್ದು."

ಇಲ್ಲದ ಧೈರ್ಯ ತಂದುಕೊಂಡು ಪ್ರಮಿಳೆ ಹೇಳಿದಳು.

"ಅವರನ್ನು ನಾನು ಕಟ್ಟಿಕೊಂಡಿಲ್ಲ. ನಾವು ಒಬ್ಬರನ್ನೊಬ್ಬರು ಪ್ರೇಮಿಸಿದ್ದೇವೆ. ಮದುವೆ ಮಾಡಿಕೊಳ್ಳಬೇಕೆಂದಿದ್ದೇವೆ."

"ಹೂಂ. ಹೂಂ. ಮದುವೆ ಮಾಡಿಕೊಂಡೀರಿ. ಕೊರಳು ಮುರಿದು ಭಾವಿಯಲ್ಲಿ ಹಾಕುತ್ತೇನೆ. ನನ್ನೆದುರಿಗೆ ಅವನನ್ನು ಮದುವೆ ಮಾಡಿಕೊಳುತ್ತೇನೆ ಎಂದು ಹೇಳಲು ನಿನಗೆಷ್ಟು ಧೈರ್ಯ"

ಗುಂಡಪ್ಪ ಮಗಳ ತಲೆಯ ಮೇಲೆ ಹೊಡೆದರು. ಬಿಡಿಸಿಕೊಳ್ಳಲು ಬಂದ ಪಾತಮ್ಮನವರಿಗೂ ಎರಡು ಪೆಟ್ಟು ಬಿದ್ದಿತು. ಹೆಂಡತಿಯನ್ನು ಪಕ್ಕಕ್ಕೆ ತಳ್ಳಿ ಮನಃಪೂರ್ತಿಯಾಗಿ ಮಗಳನ್ನು ಹೊಡೆದರು.

ಪ್ರಮೀಳಾ ಶಿಲಾಮೂರ್ತಿಯಂತೆ ಕುಳಿತಿದ್ದಳು.

"ಹೇಳು. ಈಗಲಾದರೂ ಹೇಳು. ಇನ್ನು ಆ ಮುಂಡೇ ಮಗನ ಮುಖ ನೋಡುವುದಿಲ್ಲವೆಂದು ಹೇಳು."

"ನಾನು ಅವರನ್ನು ಪ್ರೀತಿಸಿದ್ದೇನೆ. ಅವರನ್ನೇ ಮದುವೆಯಾಗುವುದು. ಬೇರೆಯವರನ್ನು ಮದುವೆ ಮಾಡಿಕೊಳ್ಳುವುದಿಲ್ಲ."

ಪುನಃ ಮಗಳ ಮುಖದ ಮೇಲೆ ಹೊಡೆದು "ನೋಡುತ್ತೇನೆ. ಹೇಗೆ ಮದುವೆ ಮಾಡಿಕೊಳ್ಳುತ್ತೀಯೋ ?" ಎಂದು ಹೇಳಿ, ಎದ್ದು ತಮ್ಮ ಕೋಣೆಗೆ ಹೋದರು.

ಅದೆಲ್ಲವನ್ನೂ ನೋಡಿದ ಪಾತಮ್ಮನವರಿಗೆ "ನಾನು ಇವರಿಗೇಕೆ ಕಾಗದವನ್ನು ಕೊಟ್ಟೆ. ನಾನೇ ಸೂಕ್ಷ್ಮವಾಗಿ ಮಗಳಿಗೆ ಬುದ್ಧಿ ಹೇಳಿದ್ದರೆ ಚೆನ್ನಾಗಿದ್ದಿತಲ್ಲ"-ಎಂದೆನಿಸಿತು. ಆದರೂ ಕೈಮಿಂಚಿ ಹೋಗಿತ್ತು.

ಕೋಣೆಗೆ ಹೋದ ಮೇಲೆ ಗಂಡನನ್ನು ಕುರಿತು "ಮಗೂ ಭಾವಿಯಲ್ಲಿ ಹೋಗಿಬಿದ್ದರೆ ಗತಿಯೇನು ?" ಎಂದರು.

"ಹೋಗಿ ಬೀಳಲಿ, ಬಿಡು. ಇಂತಹ ಮಗಳು ಬದುಕಿದ್ದರೆಷ್ಟು, ಸತ್ತು ಹೋದರೆಷ್ಟು?"

ಗಳಿಗೆಯ ಹೊತ್ತು ಕಳೆಯಿತು. ಗುಂಡಪ್ಪನವರಿಗೂ ಹೆತ್ತ ಕರುಳು ಎಳೆಯಿತು.

"ಪಾತು. ಉಪಾಯವಾಗಿ ಅವಳನ್ನು ಕೋಣೆಯಲ್ಲಿ ಮಲಗಿಸು. ನಾವು ಬಾಗಿಲಲ್ಲಿ ಮಲಗಿಕೊಳ್ಳೋಣ. ಇಲ್ಲದಿದ್ದರೆ ಏನಾದರೂ ಪ್ರಮಾದವಾದೀತು."

ತಾಯಿಯೂ ಆ ವಿಷಯ ಹಾಗೆಯೇ ಯೋಚನೆ ಮಾಡಿದ್ದರು. ಹೊರಗೆ ಬಂದು ನೋಡಿದರು. ಮಗಳು ನಿಶ್ಚಿಂತಳಾಗಿ ಹಾಸಿಗೆಯ ಮೇಲೆ ಕುಳಿತುಕೊಂಡಿದ್ದಾಳೆ.

ಪಾತಮ್ಮ "ಏಳು, ಪ್ರಮೀಳಾ" ಎಂದರು.

ಅವಳು ಏಳಲಿಲ್ಲ. ತಾವೇ ಕೈ ಹಿಡಿದು ಅವಳನ್ನು ಎಬ್ಬಿಸಿ ಪಕ್ಕದಲ್ಲಿ ನಿಲ್ಲಿಸಿದರು ಹಾಸಿಗೆಯನ್ನು ಸುತ್ತಿಕೊಂಡು ಹೋಗಿ ಕೋಣೆಯಲ್ಲಿ ಹಾಕಿ ನಿಂತಲ್ಲಿಯೇ ನಿಂತಿದ್ದ ಮಗಳನ್ನು ಕರೆದುಕೊಂಡು ಹೋಗಿ ಮಲಗಿದರು.

ಅನಂತರ "ಪ್ರಮಿಳಾ ! ನೀನು ವಯಸ್ಸಾದವಳು. ಓದಿದವಳು. ತಿಳಿದವಳು. ಹೀಗೆಲ್ಲಾ ಮಾಡಬಾರದು. ಅವರೇನು ನಿನಗೆ ಕೆಟ್ಟದಾಗಲಿ ಎಂದು ಹೇಳುತ್ತಿದ್ದಾರೆಯೆ ? ನಿನ್ನ ಒಳ್ಳೆಯದಕ್ಕೇ ತಾನೇ ಹೇಳುತ್ತಾರೆ, ನೀನು ಯೋಚನೆ ಮಾಡಬೇಕಮ್ಮಾ" ಎಂದು ಹೇಳಿದರು.

ಮಗಳು ಏನೂ ಉತ್ತರಕೊಡಲಿಲ್ಲ. ತಾಯಿ ದೀಪವಾರಿಸಿ ಬಾಗಿಲು ಸೇರಿಸಿಕೊಂಡು ಹೊರಗೆ ಬಂದು ಮಲಗಿಕೊಂಡರು.

"ನಾವು ನಾವು ಪ್ರೀತಿಸುತ್ತಿದ್ದೇವೆ. ನಾನು ಹಿಂದೀ ಮೇಸ್ಟರನ್ನೇ ಮದುವೆಯಾಗುವುದು" ಎಂದು ಒಂದು ಬಾರಿ ಹೇಳುವವರೆವಿಗೆ ಮಾತ್ರ ಪ್ರಮಿಳೆಯಲ್ಲಿ ಸಂಕೋಚ ನಾಚಿಕೆಗಳಿದ್ದವು. ಅನಂತರ ಆವಳು ಉನ್ಮಾದಿನಿ ಯಂತಾದಳು. ತಾಯಿ ಬೈದರೂ, ತಂದೆ ಹೊಡೆದರೂ ಲಕ್ಷ್ಯ ಮಾಡದೇ ನಿರ್ದಾಕ್ಷಿಣ್ಯವಾಗಿ ನಿಸ್ಸಂಕೋಚವಾಗಿ ಆ ಮಾತು ಹೇಳುತ್ತಿದ್ದಳು. ತಂದೆ ಮನೆಯಲ್ಲಿಲ್ಲದಾಗ ತಾಯಿಯ ಕಣ್ಣು ತಪ್ಪಿಸಿ ಮನೆಯಿಂದ ಹೊರಟುಹೋಗು ತ್ತಿದ್ದಳು. ಹಾಗೆ ಹೋದ ದಿನ ತಂದೆಯಿಂದ ಹೊಡೆತಗಳು ಬೀಳುತ್ತವೆ ಎಂಬುದಂತೂ ನಿಶ್ಚಯ. ಆದರೂ ಪ್ರಮಿಳೆ ಅದನ್ನು ಲಕ್ಷ್ಯ ಮಾಡುತ್ತಿರಲಿಲ್ಲ.

ಮಗಳು ಉನ್ಮಾದಿನಿಯಾದುದು ತಮ್ಮಿಂದಲೇ ಎಂಬ ಯೋಚನೆ ಗುಂಡಪ್ಪನವರಿಗೆ ಬರಲೇ ಇಲ್ಲ. ಪ್ರಮಿಳೆಯಲ್ಲಿ ತಟ್ಟನೆ ಆದ ಬದಲಾವಣೆ ಯನ್ನು ನೋಡಿ ಅವರಿಗೂ ದಿಗಿಲಾಯಿತು. ಸರಿಮಾಡಲು ಏನು ಮಾಡು ವುದು ಎಂದು ಹಗಲು ರಾತ್ರಿ ಆಲೋಚಿಸ ತೊಡಗಿದರು.

ಗುಂಡಪ್ಪನವರು ಕಳೆದ ಮೂವತ್ತು ವರ್ಷಗಳಿಂದಲೂ ಸ್ಕೂಲು ಮೇಸ್ಟರು. ಹುಡುಗರನ್ನು ಹೇಗೆ ಭಯಭಕ್ತಿಗಳಲ್ಲಿಡಬೇಕೆಂಬುದು ಅವರಿಗೆ ತಿಳಿಯದ ವಿಷಯವಾಗಿ ಇರಲಿಲ್ಲ. ಮಗಳಿಗೆ ಛೀಮಾರಿ ಹಾಕಿದರು. ಹಿಡಿದು ಕೊಂಡು ಹೊಡೆದರು. ಕೋಣೆಯಲ್ಲಿ ಕೂಡಿದರು. ಉಪವಾಸ ಹಾಕಿದರು. ತಾವು ಕಲಿತಿದ್ದ ಬುದ್ಧಿಯನ್ನೆಲ್ಲಾ ಖರ್ಚುಮಾಡಿ ನೋಡಿದರು. ಯಾವು ದಕ್ಕೂ ಪ್ರಮಿಳೆಯು ಜಗ್ಗಲಿಲ್ಲ. ಹಿಂಸೆ ಮಾಡಿದಷ್ಟೂ ಅವಳ ದೃಢತೆಯು ಹೆಚ್ಚುತ್ತಾ ಬಂದಿತು. "ಈ ಹುಡುಗಿಗೆ ಬುದ್ಧಿ ಕೆಟ್ಟಿದೆ. ಇವಳನ್ನು ಗೋಳಾ ಡಿಸಿ ಫಲವಿಲ್ಲ. ಇನ್ನೊಂದು ಕಡೆ ಸ್ವಲ್ಪ ಭದ್ರಮಾಡೋಣ" ಎಂದುಕೊಂಡ ವರು ನೇರವಾಗಿ ಹಿಂದೀ ಮೇಸ್ಟರ ಮನೆಗೆ ಹೋದರು.

ಅವರು ಹೋದದ್ದು ಸಾಯಂಕಾಲದ ಹೊತ್ತು. ಸ್ಕೂಲುಗಳನ್ನು ಮುಗಿಸಿಕೊಂಡು ಗಂಡು ಹೆಣ್ಣು ಮಕ್ಕಳೆಲ್ಲಾ ಬಂದಿದ್ದರು. ವೆಂಕಟೇಶ ಕುಳಿತು ಪಾಠ ಹೇಳುತ್ತಿದ್ದ. ಪೂರ್ಥವೂ ಅಲ್ಲಿಯೇ ಕುಳಿತುಕೊಂಡಿದ್ದ.

ವಿದ್ಯಾರ್ಥಿ ವಿದ್ಯಾರ್ಥಿನಿಯರ ಸಮೂಹದಲ್ಲಿ ತಮ್ಮ ಮಗಳೂ ಕುಳಿತುಕೊಂಡಿರುವುದನ್ನು ಗುಂಡಪ್ಪನವರು ನೋಡಿದರು. "ಎಲಎಲಾ. ಏನು ಮಾಡಿದರೂ ಇವಳು ಇಲ್ಲಿಗೆ ಬರುವುದನ್ನು ಬಿಡುವುದೇ ಇಲ್ಲನಲ್ಲ. ಈ ಪಾಠದಲ್ಲಿ ಏನು ಆಕರ್ಷಣೆಯಿದೆ" ಎಂದುಕೊಂಡು ಗಮನಿಸಿದರು. ಆದರೆ ಪ್ರಮಿಳೆಯು ಇತರ ವಿದ್ಯಾರ್ಥಿನಿಯರಂತೆಯೇ ಒಂದು ಪಕ್ಕದಲ್ಲಿ ಸರಿದು ಕುಳಿತುಕೊಂಡು ಪಾಠದಲ್ಲಿಯೇ ಆಸಕ್ತಳಾಗಿದ್ದಳು.

ವೆಂಕಟೇಶನಿಗೆ ಗುಂಡಪ್ಪನವರ ಪರಿಚಯ ಚೆನ್ನಾಗಿತ್ತು. ಅವರು ಬರುತ್ತಲೇ ಎದ್ದು ಸ್ವಾಗತಿಸಿ ಕುಳ್ಳಿರಿಸಿ ಬಂದ ಕಾರಣವನ್ನು ಕುರಿತು ಸೂಕ್ಷ್ಮವಾಗಿ ಪ್ರಶ್ನೆ ಮಾಡಿದ.

"ನಿಮ್ಮೊಂದಿಗೆ ಸ್ವಲ್ಪ ಮಾತನಾಡಬೇಕಾಗಿತ್ತು, ಪಂಡಿತರೇ."

"ಹೇಳಿ ಮೇಸ್ಟರೇ ! ಏನು ಸಮಾಚಾರ ?"

"ಇಲ್ಲೆಲ್ಲಾ ಹೇಳುವುದಲ್ಲ. ರಹಸ್ಯವಾಗಿ ಒಂದು ಗಳಿಗೆಯ ಕಾಲ ಮಾತನಾಡಬೇಕು."

ಅವರನ್ನು ವೆಂಕಟೇಶ ಪಕ್ಕದಲ್ಲಿಯೇ ಇದ್ದ ಬೀದೀ ಕೋಣೆಗೆ ಕರೆದುಕೊಂಡು ಹೋದ. ಕೋಣೆಯನ್ನು ಶುಭ್ರವಾಗಿ ಗುಡಿಸಿ ಚಾಪೆ ಹಾಕಿತ್ತು. ಎರಡು ಹಾಸಿಗೆಗಳನ್ನು ಸುತ್ತಿ ಒಪ್ಪವಾಗಿ ಒಂದು ಕಡೆ ಒಂದರ ಮೇಲೊಂದು ಇಟ್ಟಿದ್ದರು. ಚಾಪೆಯ ಒಂದು ಕಡೆ ವ್ಯಾಸಪೀಠವನ್ನಿಟ್ಟು ಅದರ ಮೇಲೆ ರಾಮಚರಿತ ಮಾನಸವನ್ನಿಟ್ಟಿತ್ತು. ಮತ್ತೊಂದು ಕಡೆ ಸಣ್ಣ ಕಪಾಟಿನ ತುಂಬಾ ಪುಸ್ತಕಗಳಿದ್ದವು. ಬುದ್ಧ ವಿವೇಕಾನಂದರ ಭಾವಚಿತ್ರಗಳು ಒಂದಕ್ಕೊಂದು ಅಭಿಮುಖವಾಗಿ ಎದುರುಬದುರು ಗೋಡೆಗಳನ್ನು ಅಲಂಕರಿಸಿದ್ದವು.

"ಪಂಡಿತರೇ. ನಿಮ್ಮ ತಮ್ಮ ಎಂಥಾ ಕೆಲಸ ಮಾಡಿದ್ದಾನೆ ಗೊತ್ತೇ?"

"ಯಾಕೆ ಮೇಸ್ಟರೇ! ನಮ್ಮ ಹುಡುಗ ಅಂತಹ ಕೆಲಸವೇನು ಮಾಡಿದ?"

ಗುಂಡಪ್ಪನವರು ನಡೆದ ವಿಷಯವನ್ನೂ ಸೂಕ್ಷ್ಮವಾಗಿ ಹೇಳಿದರು.

ವೆಂಕಟೇಶ ನಗುತ್ತಾ "ಇದಕ್ಕೇಕೆ ಇಷ್ಟೊಂದು ಗಾಬರಿ ಪಡುತ್ತೀರಿ? ದೊಡ್ಡವರು ಕಷ್ಟಪಟ್ಟು ಗೊತ್ತು ಮಾಡುವ ಬದಲು ಹುಡುಗರೇ ಹುಡುಕಿಕೊಂಡಿದ್ದಾರೆ. ಅವರವರಿಗೆ ಮದುವೆ ಮಾಡಿಬಿಡಿ" ಎಂದ.

"ನೀವು ಹೀಗೆ ಹೇಳುತ್ತೀರೆಂದು ನಾನು ನೆನೆಸಿರಲಿಲ್ಲ."

"ಅದರಲ್ಲಿ ತಪ್ಪೇನಿದೆ, ಗುಂಡಪ್ಪನವರೇ! ಹೆಣ್ಣು ಗಂಡುಗಳು ಮದುವೆಯಾದ ಮೇಲೆ ಪ್ರೀತಿಸತೊಡಗುವುದೊಂದು ತರಹ. ಮದುವೆಯ ಮೊದಲೇ ಪ್ರೀತಿಸತೊಡಗುವುದು ಮತ್ತೊಂದು ತರಹ. ಅದಕ್ಕಿದಕ್ಕೆ ಹೆಚ್ಚು ವ್ಯತ್ಯಾಸವಿಲ್ಲ."

"ಚೆನ್ನಾಯಿತು, ಚೆನ್ನಾಯಿತು. ಹುಡುಗ ಹೀಗೆ ಮಾಡಿದನೆಂದು ಗೊತ್ತಾದ ಕೂಡಲೇ ಅವನನ್ನು ಕರೆದು ಛೀಮಾರಿ ಹಾಕುವ ಬದಲು ನೀವೇ ಅವರಿಗೆ ಪ್ರೋತ್ಸಾಹಕೊಟ್ಟರೆ ಹೇಗೆ? ನೀವು ಹೀಗೆಲ್ಲಾ ಮಾಡಿದರೆ ನಾವು ನಮ್ಮ ಅಕ್ಕತಂಗಿಯರನ್ನೂ ಹೆಣ್ಣು ಮಕ್ಕಳನ್ನೂ ನಿಮ್ಮಲ್ಲಿಗೆ ಪಾಠಕ್ಕೆ ಕಳುಹಿಸುವುದು ಹೇಗೆ? ಯಾರಾದರೂ ಕೇಳಿದರೆ ನಮ್ಮನ್ನು ಏನೆನ್ನುತ್ತಾರೆ?"

ವೆಂಕಟೇಶ ರೇಗಿಕೊಂಡು "ಏನೆನ್ನುತ್ತಾರೆ? ನನ್ನನ್ನೇನು ಹೆದುರಿಸುತ್ತೇನೆಂದುಕೊಂಡಿದ್ದೀರೋ. ನನ್ನಲ್ಲಿ ಇವೆಲ್ಲಾ ಖಂಡಿತವಾಗಿ ನಡೆಯುವುದಿಲ್ಲ. ತಿಳಿದುಕೊಳ್ಳಿ. ಇಲ್ಲಿ ಯಾರೂ ಮಾಡಬಾರದ್ದನ್ನು ಮಾಡಿಲ್ಲ. ಆ ಹುಡುಗಿ ಮಾಧುವನ್ನು ಮದುವೆ ಮಾಡಿಕೊಳ್ಳುತ್ತೇನೆ ಎನ್ನುವುದರಲ್ಲಿ ತಪ್ಪೇನಿದೆ? ನೀವೇ ಮಾಧುವನ್ನು ಹುಡುಕಿಕೊಂಡು ಬಂದು ಇವನನ್ನು ಮಾಡಿಕೋ ಎಂದರೆ ಮಾಡಿಕೊಳ್ಳಬೇಕಾಗಿತ್ತೊ? ಇಂತಹ ವಾದವನ್ನೆಲ್ಲಾ ಬಿಟ್ಟುಬಿಡಿ. ನಿಮ್ಮ ಇಷ್ಟದಂತೆ ಅವಳು ನಡೆದುಕೊಳ್ಳಲಿಲ್ಲ ಎಂದು ಅವಳನ್ನೂ ಮಾಧುವನ್ನೂ ಮತ್ತೂ ನನ್ನನ್ನೂ ದೂರುತ್ತಿದ್ದೀರಿ. ನಿಮ್ಮ ಇಷ್ಟದಂತೆಯೇ ಅವಳೇಕೆ ಮದುವೆ ಮಾಡಿಕೊಳ್ಳಬೇಕು? ಅವಳಿಗಿಷ್ಟ ಬಂದವನನ್ನು ಯಾಕೆ ಮದುವೆಯಾಗಬಾರದು? ಹೋಗಿ, ಹೋಗಿ. ಏನೋ ಹೇಳುವುದಕ್ಕೆ ಬಂದರು ಎಂದರೆ ಇದನ್ನು ಹೇಳುವುದಕ್ಕೆ ಬಂದಿರಾ?" ಎಂದು ಗದ್ದರಿಸಿದ.

ಅವರಿವರಿಗೆ ಹೇಳುತ್ತೇನೆ – ಎಂದರೆ ಹೆದರುತ್ತಾನೆ. ನಿಮ್ಮಲ್ಲಿಗೆ ಹೆಣ್ಣು ಮಕ್ಕಳನ್ನು ಹಿಂದೀ ಪಾಠಕ್ಕೆ ಕಳಿಸುವುದು ಹೇಗೆಂದು ದಬಾಯಿಸಿದ್ದರೆ ಕುರ್ರೋ ಮೊರ್ರೋ ಎಂದು ಕಾಲಿಗೆ ಬೀಳುತ್ತಾನೆ ಎಂದುಕೊಂಡು ಬಂದಿದ್ದರು ಗುಂಡಪ್ಪ. ವೆಂಕಟೇಶ್ ಅದೊಂದಕ್ಕೂ ಬೆದರುವಂತೆ ಕಂಡು ಬರುವುದಿಲ್ಲ. ತರಹ ನೋಡಿದರೆ ನಾಲ್ಕು ಜನರೆದುರಿಗೆ ಪಂಚಾಯಿತಿ ಮಾಡಿ ತನ್ನ ವಾದವೇ ಸರಿ ಎಂದು ಒಪ್ಪಿಸುವ ಜಗಮೊಂಡಿಯಂತೆ ಕಂಡು ಬರುತ್ತಾನೆ. ಅವನೊಡನೆ ಮಾತನಾಡಿ ಪ್ರಯೋಜನವಿಲ್ಲವೆಂದು ಗುಂಡಪ್ಪ ಪೆಚ್ಚು ಮೋರೆ ಹಾಕಿಕೊಂಡು ಹಿಂತಿರುಗಲು ಅನುವಾದರು.

ಆಗ ವೆಂಕಟೇಶ ಸಮಾಧಾನದಿಂದ ''ಮೇಷ್ಟರೇ! ನಾನು ಹೀಗೆ ಮಾತನಾಡಿದೆನೆಂದು ಕೋಪ ಮಾಡಬೇಡಿ. ಹುಡುಗ ಹುಡುಗಿಯರು ತಮ್ಮ ಜವಾಬ್ದಾರಿಯು ತಿಳಿದೇನೇ ತಾವು ಪ್ರೀತಿಸುತ್ತಿರುವುದಾಗಿ ಅಂದುಕೊಳ್ಳುತ್ತಾರೆ. ನೀವು ಈ ಗೋಜಿಗೇ ಹೋಗದೇ ಸುಮ್ಮನಿದ್ದು ಬಿಡಿ. ಕೆಲವು ಸಲ ಇಂತಹ ಹುಚ್ಚುಗಳು ನಾಲ್ಕಾರು ದಿನಗಳಲ್ಲಿಯೇ ಬಿಟ್ಟುಹೋಗುವುದುಂಟು. ನಾನು ಅವರಿಬ್ಬರನ್ನೂ ಕೂರಿಸಿಕೊಂಡು ಬುದ್ಧಿ ಹೇಳುತ್ತೇನೆ. ಆ ಪ್ರೇಮವು ಭ್ರಾಂತಿಯಾದರೆ ಬೇಗ ಸರಿಹೋಗುತ್ತದೆ. ಒಂದು ವೇಳೆ ಅವರದು ನಿಜವಾದ ಪ್ರೇಮವಾದರೆ ಆಗ ಏನೂ ಮಾಡುವುದಕ್ಕಾಗುವುದಿಲ್ಲ. ಅವರವರ ಹಣೆಯ ಬರಹವೆಂದು ಮದುವೆ ಮಾಡಿಬಿಡುವುದೊಂದೇ ಮಾರ್ಗ" ಎಂದು ಹೇಳಿದ.

ಅವನ ಮಾತಿನಿಂದ ಗುಂಡಪ್ಪನವರಿಗೆ ಸಮಾಧಾನವಾಗಲಿಲ್ಲ. ನಿರಾಶರಾಗಿ ಮನೆಗೆ ಹಿಂತಿರುಗಿದರು.

''ಆ ಹಿಂದೀ ಪಂಡಿತ ಎಂದರೆ ಏನೂ ಅಂತ ಇದ್ದೀಯಾ ಪಾತು. ಅವನು ಮಳ್ಳೀ. ಮಳ್ಳೀ. ನೀನು ಒಳ್ಳೆಯವನು ಎಂದು ಹೇಳಿ ಅವನಿಗೂ ಅವನ ಮನೆಯವರಿಗೂ ಔತಣಗಳನ್ನು ಮಾಡಿ ಮೋಸಹೋದೆ, ಅಷ್ಟೇ. ಅವನು ಜಗಭೇರಿ ಕರಾಟವಿದ್ದ ಹಾಗಿದ್ದಾನೆ. ನಾಲ್ಕು ಜನರ ಕಿವಿಗೆ ಬಿದ್ದರೆ ಏನುಗತಿ ಎಂದು ಹೆದರುಕೊಳ್ಳುವ ಜಾತಿಯಲ್ಲ. ನಾವು ಹೆದರಿಕೋ ಬೇಕು"

''ಅವನೇನು ಹೇಳಿದ ಅಂದ್ರೆ"

"ಹುಡುಗು ಮುಂಡೇದು. ಏನು ಹೇಳುತ್ತಾನೆ. ಅವರವರಿಗೆ ಮದುವೆ ಮಾಡಿಬಿಡಿ ಎನ್ನುತ್ತಾನೆ. ಆ ತಮ್ಮನಿಗೆ ತಕ್ಕ ಅಣ್ಣ."

ಪಾತಮ್ಮ ಸ್ವಲ್ಪಹೊತ್ತು ಯೋಚನೆ ಮಾಡಿ "ನನಗೊಂದು ಆಲೋಚನೆ ತೋರುತ್ತದೆ" ಎಂದರು.

"ಇಂತಹ ವಿಷಯಗಳಲ್ಲಿ ಹೆಂಗಸರ ಬುದ್ಧಿಯೇ ಚುರುಕು ಎಂದುಕೊಂಡಿದ್ದ ಗುಂಡಪ್ಪ ಆತುರದಿಂದ "ಏನದು ?" ಎಂದು ಕೇಳಿದರು.

"ಅವರು ಒಬ್ಬರನ್ನೊಬ್ಬರು ಅಷ್ಟೊಂದು ಪ್ರೀತಿಸುವುದಾದರೆ ಮದುವೆ ಮಾಡಿಬಿಡೋಣ"

"ಚನ್ನಾಯಿತು. ಮಲಗಿಕೊಳ್ಳುತ್ತೇನೆ ಎಂದವನಿಗೆ ಹಾಸಿಗೆ ಹಾಸಿಕೊಡುವಂತೆ ಮಾತನಾಡುತ್ತೀಯಲ್ಲಾ. ಹುಡುಗರು ಯಾರೋ ಶಂಕರನಾರಣಪ್ಪ ಎಂಬಾತನ ಮಕ್ಕಳಂತೆ. ಆ ಶಂಕರನಾರಣಪ್ಪ ತಾನು ಜೋಡಿದಾರ ಎಂದು ಕರೆದುಕೊಳ್ಳುತ್ತಾನೆ. ಎಲ್ಲಿ ಜೋಡಿಯೋ ಎಲ್ಲಿ ದಾರನೋ? ಅವನು ಜೋಡೀದಾರನಾಗಿದ್ದಿದ್ದರೆ ಅವನ ಮಕ್ಕಳೇಕೆ ಇಲ್ಲಿ ಬಂದು ದುಡಿಯಬೇಕು–ಹೇಳು. ನಾನು ಮೊದಲೇ ವಿಷಯ ವಿಚಾರಿಸಿ ತಿಳಿದುಕೊಂಡಿದ್ದೇನೆ. ಅವರಿಬ್ಬರಿಗೂ ವಿದ್ಯೆ ಹತ್ತಲಿಲ್ಲ. ವಯಸ್ಸಾದ ಮೇಲೆ ಈಗೀಗ ಎರಡು ಹಿಂದೀ ಪರೀಕ್ಷೆಗಳನ್ನು ಮಾಡಿಕೊಂಡಿವೆ. ಪಬ್ಲಿಕ್ ಸರ್ವಿಸ್ ಕಮಿಷನ್‌ಗೆ ಅರ್ಜಿ ಹಾಕಿಕೊಂಡಿದ್ದಾರಂತೆ. ಇನ್ನೂ ಕೆಲಸ ಸಿಕ್ಕಿಲ್ಲ. ಎಂದು ಸಿಕ್ಕುತ್ತದೆಯೋ ನೋಡಿಕೊಳ್ಳೋಣ. ಇಲ್ಲಿ ನೂರು ರೂಪಾಯಿ ಬರುತ್ತಿರುವುದು ನಿಜ. ನೂರು ರೂಪಾಯಿ ಎಂದರೆ ಎಷ್ಟೋ ಎಂದು ಬಾಯಿ ಬಿಡಬೇಡ. ಇಬ್ಬರಿಗೂ ಸೇರಿ ಅಷ್ಟಾದರೆ ಒಬ್ಬೊಬ್ಬರಿಗೆ ಐವತ್ತು ರೂಪಾಯಿ ಆಯಿತು. ಅದೂ ಕೂಲಿಯ ಕೆಲಸ ಹಾಕಿಸಿ ಕೊಡುತ್ತಿದ್ದಾರೆ."

"ನಾವೇನು ಮಾಡುವುದು. ಅವರವರ ಹಣೆಯಲ್ಲಿ ಬರೆದಿರುವಂತೆ ಆಗುತ್ತದೆ."

"ನೀನೂ ಅವಳ ರಾಗಕ್ಕೆ ಸುವ್ವೀ ಎನ್ನಬೇಡ. ಹೇಳಿದ್ದೇನೆ. ನಾನು ಪ್ರಮಿಳೆಯನ್ನು ಭಾವಿಗಾದರೂ ಎತ್ತಿ ಹಾಕುತ್ತೇನೆ. ಆ ಮುಂಡೇ ಮಗನ ಕೈಯಲ್ಲಿ ಇಡುವುದಿಲ್ಲ."

"ಇವಳು ಅವನನ್ನೇ ಮದುವೆಯಾಗುತ್ತೇನೆ - ಎನ್ನುತ್ತಾಳೆ. ನೀವು ಆಗುವುದಿಲ್ಲವೆನ್ನುತ್ತೀರಿ. ಈಗ ಗತಿಯೇನು ?"

"ಏನು ಗತಿಯೋ, ದೇವರೇ ಗತಿ"

ರಾತ್ರಿ ಊಟವಾಗಿ ಮಲಗಿಕೊಂಡು ನಿದ್ದೆ ಹತ್ತದೇ ಯೋಚನೆ ಮಾಡುತ್ತಿದ್ದಾಗ ಗುಂಡಪ್ಪನವರಿಗೆ ಒಂದು ಆಲೋಚನೆ ತೋರಿತು.

"ಲೇ ! ನಾಳೇ ಬೆಳಗಾಗ ಬೆಂಗಳೂರಿಗೆ ಹೋಗಬೇಕೆಂದಿದ್ದೇನೆ"

"ಯಾಕೆ. ಇದ್ದಕ್ಕಿದ್ದ ಹಾಗೆಯೇ ಬೆಂಗಳೂರಿಗೇಕೆ ?"

"ಅದೆಲ್ಲಾ ಕೇಳಬೇಡ. ನಾಳೇ ಸಾಯಂಕಾಲವೇ ವಾಪ್ಸು ಬರುತ್ತೇನೆ."

ಗುಂಡಪ್ಪನವರು ಪ್ರಾತಃಕಾಲದ ಬಸ್ಸಿಗೆ ಹೊರಟು ಬೆಂಗಳೂರು ಬಂದು ಸೇರಿದರು. ಮಾಧು ಆ ದಂಪತಿಗಳ ಮಗನಲ್ಲವೆಂದು ತಿಳಿದಕೂಡಲೇ ಜಂಘಾಬಲವೇ ಹೋದಂತೆ ಆಗಿತ್ತು. ಆದರೂ ಗ್ರಹಗತಿಗಳು ಚೆನ್ನಾಗಿದ್ದವು. ಒಂದಲ್ಲ ಒಂದು ಬಗೆಯಾಗಿ ಕಾರ್ಯಸಾಧನೆಯಾಯಿತು. ಸೀತಮ್ಮನವರು ಶಿವನ ಸಮುದ್ರಕ್ಕೆ ಬಂದರು. ಅವರು ಮಾಧುವನ್ನು ಮಾತ್ರ ಹೊರಡಿಸಿಕೊಂಡು ಹೋಗುತ್ತಾರೆಂದುಕೊಂಡಿದ್ದರು. ಅವರು ಆ ಹಿಂದೀ ಕೂಟವನ್ನೇ ಊರಿನಿಂದ ತೆಗೆದರು. ವೆಂಕಟೇಶನಾದರೂ ಊರಿನಲ್ಲಿದ್ದಿದ್ದರೆ ಹೋದೆಯಾ ಪಿಶಾಚಿಯೇ ಎಂದರೆ ಬಂದೇ ಗವಾಕ್ಷಿಯಲ್ಲಿ-ಎಂಬಂತೆ ಪುನಃ ಆ ಮಾಧು ಬರುತ್ತಾನೆಂಬ ಭಯವಾದರೂ ಇತ್ತು. ಈಗ ತಂಟೆಯೇ ಇಲ್ಲ.

ಗುಂಡಪ್ಪನವರೀಗ ನಿಶ್ಚಿಂತರಾಗಿದ್ದರು.

ಆದರೆ ಹಳೆಯ ನೆನವು ಆಗಾಗ ಕೆಟ್ಟ ಕನಸಿನಂತೆ ಅವರನ್ನು ಕಾಡುತ್ತಿದ್ದಿತು.

೬

ಶಿವನಸಮುದ್ರದಿಂದ ಮಾಧು ಹೊರಟು ಹೋದನಂತರ ಪ್ರಮಿಳೆಗೆ ಮಂಕುಬಡಿದ ಹಾಗಾಗಿತ್ತು. ಮಾತಿಲ್ಲ, ಕತೆಯಿಲ್ಲ. ಗೆಳತಿಯರು ಯಾರಾದರೂ ಬಂದು ಕರೆದರೆ ಅವರೊಂದಿಗೆ ಎಲ್ಲಿಗೂ ಹೋಗುವುದಿಲ್ಲ. ಬೆಳಗಾಗಿನಿಂದ ಸಾಯಂಕಾಲದವರೆವಿಗೆ ಪೆಚ್ಚುಮೋರೆ ಹಾಕಿಕೊಂಡು ಎಲ್ಲಿಯಾದರೂ ಕುಳಿತುಕೊಂಡಿರುತ್ತಾಳೆ. ತೋರಿದರೆ ಯಾವುದಾದರೊಂದು ಪುಸ್ತಕವನ್ನು ಓದುತ್ತಿರುತ್ತಾಳೆ. ಇಲ್ಲದಿದ್ದರೆ ಅದೂ ಇಲ್ಲ.

ಪ್ರಮಿಳೆಯಲ್ಲಿ ಚೈತನ್ಯಮಯವಾದ ಯಾವ ಕಾರ್ಯಕಲಾಪಗಳೂ ಕಂಡುಬರುವುದಿಲ್ಲ. ಬೆಳಗಾಗ ಎದ್ದು ಮುಖ ತೊಳೆದುಕ್ಕೊಂಡು ಬಂದು ಯಾವ ಚಾಪೆಯ ಮೇಲೆ ಹಾಸಿಗೆ ಹಾಸಿಕೊಂಡು ಮಲಗಿರುತ್ತಿದ್ದಳೋ ಅದೇ ಚಾಪೆಯ ಮೇಲೆ ಕುಳಿತುಕೊಳ್ಳುತ್ತಾಳೆ. ಪಾತಮ್ಮನವರು ಕರೆದು ಕಾಫೀ ಕೊಟ್ಟರೆ ಕುಡಿಯುತ್ತಾಳೆ. ಕರೆದು ಬಡಿಸಿದರೆ ಊಟ ಮಾಡುತ್ತಾಳೆ. ಪುನಃ ಆ ಚಾಪೆಯುಂಟು, ಅವಳುಂಟು.

ತಾಯಿ ತಂದೆಗಳಿಬ್ಬರೂ ಮಗಳಲ್ಲಾದ ಈ ಬದಲಾವಣೆಯನ್ನು ಗಮನಿಸಿದರು. ಆದರೆ ಮೊದಲಿನ ಉನ್ಮಾದಕ್ಕಿಂತಲೂ ಈಗಿನ ಮಂಕುತನವೇ ಅವರುಗಳಿಗೆ ಪ್ರಿಯವಾಗಿ ಕಂಡಿತು.

*೮

ಮಗಳ ಮಂಕುತನವನ್ನು ನಿವಾರಣೆಮಾಡಲು ಆ ತಂದೆಯು ಎಷ್ಟೋ ಪ್ರಯತ್ನಪಟ್ಟರು.

ನಾಲ್ಕು ದಿನ ಬಿಟ್ಟುಕೊಂಡು "ಪ್ರಮಿಳಾ. ಮನೆಯಲ್ಲಿ ಕುಳಿತುಕೊಂಡೇನು ಮಾಡುತ್ತೀಯೆ? ಪರೀಕ್ಷೆಯು ಹತ್ತಿರವಾಗುತ್ತ ಬಂದಿತು. ನಾಳೆಯಿಂದ ನೀನು ಸ್ಕೂಲಿಗೆ ಬಾ" ಎಂದರು.

ಪ್ರಮಿಳೆ ಅದಕ್ಕೆ ಏನೂ ಉತ್ತರ ಕೊಡಲಿಲ್ಲ. ಮಾರನೆಯ ದಿನ ತಂದೆಯು ಸ್ಕೂಲಿಗೆ ಹೋದಾಗ ಕರೆದರು. ಅವಳು ಹೋಗಲಿಲ್ಲ.

ಗುಂಡಪ್ಪನವರಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಮನೆಯಲ್ಲಿ ಕುಳಿತಿರುವವಳು ಓದಿಯಾದರೂ ಓದುತ್ತಾಳೆಯಲ್ಲ. ಇರಲಿ ಎಂದುಕೊಂಡು ದಿನವೂ ಸ್ಕೂಲಿನ ಲೈಬ್ರರಿಯಿಂದ ಓದಲು ಯಾವುದಾದರೂ ಒಂದು ಕಾದಂಬರಿಯನ್ನು ತಂದು ಕೊಡುವರು.

ಮಗಳ ಈ ವಿಚಿತ್ರ ರೀತಿಯನ್ನು ಕಂಡು ಸೀತಮ್ಮನವರು ಹೆದರಿ ಗಂಡನೊಡನೆ ಹೇಳಿದರು.

"ಪ್ರಮಿಳೆ ಮಂಕಾಗಿಬಿಟ್ಟಳಲ್ಲ. ನೋಡಿಕೊಂಡು ಸುಮ್ಮನೆ ಇದ್ದರೆ ಹೇಗೆ? ಮದುವೆಯಾಗಿ ಗಂಡನ ಮನೆಗೆ ಹೋಗಬೇಕಾದ ಹುಡುಗಿ."

"ನಾನು ಅಂದುಕೊಂಡಂತೆಯೇ ಆಯಿತು. ಆ ಮುಂಡೇಮಗ ಅರಗಿಳಿಯಂತಹ ಹುಡುಗಿಗೆ ಮಂಕುಬೂದಿ ಹಾಕಿದ್ದಾನೆ. ಇಲ್ಲದಿದ್ದರೆ ಹೀಗುಂಟೇ?"

ಸೀತಮ್ಮ ಭಯಚಕಿತರಾಗಿ ಗಂಡನ ಕಡೆಗೆ ನೋಡಿದರು.

"ನೀನೇನು ಹೆದರಿಕೊಳ್ಳಬೇಡ. ಈ ಕಲಿಗಾಲದಲ್ಲಿ ಮಂತ್ರತಂತ್ರಗಳೆಲ್ಲಾ ನಡೆಯುವುದಿಲ್ಲ. ಸರಿಹೋಗುತ್ತದೆ. ಒಂದು ಕೆಲಸ ಮಾಡೋಣ. ಈ ಊರಿನ ಹನುಮಂತರಾಯ ಬಹಳ ಸತ್ಯವಂತ. ಅರ್ಚಕನನ್ನು ಮಂತ್ರಿಸಿ ಕೊಡು ಎಂದು ಹೇಳಿ ಒಂದಿಷ್ಟು ವಿಭೂತಿಯನ್ನು ತೆಗೆದುಕೊಂಡು ಬರುತ್ತೇನೆ. ದಿನವೂ ಅದನ್ನು ಹಣೆಗೆ ಹಚ್ಚು. ನಾಲ್ಕು ದಿನಗಳಲ್ಲಿ ಸರಿಹೋಗುತ್ತದೆ."

ಹಾಗೂ ಆಯಿತು. ಎಂದೂ ಇಲ್ಲದೇ ಮಗಳ ಮುಖದಲ್ಲಿ ವಿಭೂತಿಯ ಬೊಟ್ಟನ್ನು ನೋಡಿದಾಗಲೆಲ್ಲಾ ಸೀತಮ್ಮನವರ ಎದೆ ಕಂಪಿಸುತಿತ್ತು.

ಗುಂಡಪ್ಪನವರು ಹೇಳಿದಂತೆ ಕಲಿಗಾಲದ ಮಂಕುಬೂದಿ ಸರಿಯಾಗಿ ಕೆಲಸ ಮಾಡಲಿಲ್ಲವೋ, ಅಥವಾ ಹನುಮಂತರಾಯನ ಸತ್ಯವೇ ಫಲಿಸಿತೋ, ದಿನಗಳು ಕಳೆದಂತೆಲ್ಲಾ ಪ್ರಮೀಳೆಯಲ್ಲಿ ಸ್ವಲ್ಪಸ್ವಲ್ಪ ಚೈತನ್ಯವು ಕಂಡುಬರ ತೊಡಗಿತು. ಬರುಬರುತ್ತ ಮುಖದಲ್ಲಿ ಗೆಲವು ಕಂಡಿತು. ಒಮ್ಮೊಮ್ಮೆ ನಗು ತ್ತಿದ್ದಳು. ಯಾವಾಗಲಾದರೂ ಒಂದೊಂದು ಮಾತು ಆಡುತ್ತಿದ್ದಳು. ಒಂದೊಂದು ದಿನ ಸಾಯಂಕಾಲ ಗೆಳತಿ ಚಂದ್ರಮಣಿಯೊಡನೆ ತಿರುಗಾಡಿ ಕೊಂಡು ಬರುವುದಕ್ಕೂ ಹೋಗುತ್ತಿದ್ದಳು.

ಮಗಳಲ್ಲಿ ಆದ ಈ ಬದಲಾವಣೆಯನ್ನು ಕಂಡು ತಾಯಿ ತಂದೆಗಳಿಗಾದ ಆನಂದಕ್ಕೆ ಪಾರವೇ ಇಲ್ಲ.

ಒಂದು ದಿನ ಪಾತಜ್ಜಿ ತಮ್ಮ ಯಜಮಾನರೊಡನೆ ಹೇಳಿದರು.

"ಪ್ರಮೀಳೆಯನ್ನು ನಾಲ್ಕು ದಿನ ಕುಮುದಳ ಮನೆಗೆ ಕಳುಹಿಸಿಕೊಟ್ಟರೆ ಒಳ್ಳೆಯದೆಂದು ತೋರುತ್ತದೆ. ಕೆಲವು ದಿನವಾದರೂ ಅವಳು ಈ ಊರು ಬಿಟ್ಟು ಹೊರಗಿದ್ದರೆ ಹಳೆಯದನ್ನೆಲ್ಲಾ ಮರೆಯಲು ಅನುಕೂಲವಾಗುತ್ತದೆ. ಅವಳೂ ಬರೆಯುತ್ತಿದ್ದಾಳೆ."

ಕುಮುದಳಿಗೂ ತವರುಮನೆಯ ವಿಷಯವೆಲ್ಲವೂ ಗೊತ್ತಾಗಿದ್ದಿತು. ತನ್ನ ತಂಗಿ ಯಾರೋ ಹಿಂದೀ ಮೇಸ್ಟರನ್ನು ಪ್ರೇಮ ಮಾಡುತ್ತಿದ್ದಾಳೆಂದೂ, ಆತನನ್ನೇ ಮದುವೆ ಮಾಡಿಕೊಳ್ಳುವುದಾಗಿ ಹುಚ್ಚುಹುಚ್ಚಾಗಿ ಹೇಳು ತ್ತಿದ್ದಾಳೆಂದೂ ಅವಳ ಬುದ್ಧಿ ಕೆಟ್ಟುಹೋಗಿದೆ ಎಂದೂ ಗೊತ್ತಾಗಿತ್ತು. ಸೂಕ್ಷ್ಮವಾಗಿ ಗುಂಡಪ್ಪ ಮಗಳಿಗೆ ವಿಷಯ ಬರೆದಿದ್ದರು. ಅವಳು "ಎಲ್ಲಿ ಯಾದರೂ ಉಂಟೆ? ಪ್ರಮೀಳೆ ಹುಡುಗತನದಿಂದ ಹಾಗೆ ಮಾತನಾಡುತ್ತಾ ಳೆಂದು ಕಾಣುತ್ತದೆ. ನಾಲ್ಕು ದಿನ ಅವಳನ್ನು ಶಿವಮೊಗ್ಗಾಗೆ ಕಳಿಸಿಕೊಡಿ. ನಾನು ಬುದ್ಧಿ ಹೇಳಿ ಸರಿಮಾಡಿ ಕಳುಹಿಸಿಕೊಡುತ್ತೇನೆ" ಎಂದು ಬರೆದಿದ್ದಳು.

ಅವಳಿಂದ ಎರಡು ಮೂರು ಕಾಗದಗಳು ಬಂದಿದ್ದವು.

ಮಗಳನ್ನು ಶಿವಮೊಗ್ಗಾಗೆ ಕಳಿಸುವುದು ಸರಿಯೆಂದು ಗುಂಡಪ್ಪನವರಿಗೂ ತೋರಿತು. ಅವಳ ಪ್ರಯಾಣದ ಏರ್ಪಾಟುಗಳು ನಡೆಯಲಾರಂಭವಾದುವು.

ಅವಳನ್ನು ಕಳಿಸುವುದು ಹೇಗೆ ಎಂಬ ವಿಷಯವಾಗಿಯೂ ಚರ್ಚೆ

ಗಳಾದುವು. ಕಡೆಗೆ ಗುಂಡಪ್ಪನವರು ಮಗಳನ್ನು ಕರೆದುಕೊಂಡು ಹೋಗಿ ಬೆಂಗಳೂರಿನಲ್ಲಿ ಬೆಳಗಾಗ ರೈಲು ಹತ್ತಿಸಿ ಬರುವುದೆಂದೂ, ಸಾಯಂಕಾಲ ಶಿವಮೊಗ್ಗೆಯಲ್ಲಿ ಕುಮುದಳೋ ಅವಳ ಗಂಡನೋ ಬಂದು ಕರೆದುಕೊಂಡು ಹೋಗುವುದೆಂದೂ ನಿರ್ಧರಿಸಿದರು. ಅದೇ ರೀತಿಯಾಗಿ ಶಿವಮೊಗ್ಗಾಗೆ ಕಾಗದವನ್ನು ಬರೆಯಲಾಯಿತು.

ಮೊದಲೇ ಪ್ರಮಿಳೆ ಶಿವನಸಮುದ್ರದಿಂದ ಪ್ರಯಾಣಮಾಡುವ ದಿನ ಸಹ ಗೊತ್ತಾಯಿತು. ಶಿವಮೊಗ್ಗೆಗೆ ಕಾಗದವನ್ನು ಬರೆದರು.

ಪ್ರಮಿಳೆ ಮಾಮೂಲಾಗಿ ಚಂದ್ರಮಣಿಯೊಂದಿಗೆ ವಾಕಿಂಗ್ ಹೋಗಿದ್ದ ವಳು ಅವಳಿಗೆ ತಾನು ಶಿವಮೊಗ್ಗೆಗೆ ಹೋಗಿ ನಾಲ್ಕು ದಿನ ಅಕ್ಕನ ಮನೆ ಯಲ್ಲಿದ್ದುಕೊಂಡು ಬರುವುದಾಗಿ ತಿಳಿಸಿದಳು.

ಪ್ರಯಾಣವು ಗೊತ್ತಾದ ಕೂಡಲೇ ಒಂದು ಕಾಗದವನ್ನು ಚಾಣ ಸಂದ್ರಕ್ಕೂ ಹೊರಡುವುದಕ್ಕೆ ಎರಡು ದಿನಗಳಿವೆ ಎಂಬುವಾಗ ಶಿವಮೊಗ್ಗಾಕ್ಕೆ ಮತ್ತೊಂದು ಕಾಗದವನ್ನೂ ಯಾರಿಗೂ ಗೊತ್ತಾಗದಂತೆ ಪೋಸ್ಟ್ ಮಾಡಿದಳು.

ಮೊದಲೇ ಗೊತ್ತಾಗಿದ್ದಂತೆ ಗುಂಡಪ್ಪನವರು ಮಗಳನ್ನು ಬೆಂಗಳೂರಿಗೆ ಕರೆದುಕೊಂಡು ಬಂದು ಶಿವಮೊಗ್ಗಾದ ಥ್ರೂ ಗಾಡಿಯಲ್ಲಿ ಕೂರಿಸಿ ಅಲ್ಲಿಗೇ ಪ್ರಯಾಣ ಮಾಡುತ್ತಿದ್ದ ವೃದ್ಧ ದಂಪತಿಗಳನ್ನು ಕುರಿತು ತಮ್ಮ ಮಗಳು ಒಬ್ಬಳೇ ಪ್ರಯಾಣ ಮಾಡುತ್ತಿದ್ದಾಳೆಂದೂ ಶಿವಮೊಗ್ಗಾದಲ್ಲಿ ಅವಳ ಭಾವ ನವರು ಬಂದು ಕರೆದುಕೊಂಡು ಹೋಗುವವರೆವಿಗೆ ಸ್ವಲ್ಪ ನೋಡಿಕೊಳ್ಳ ಬೇಕೆಂದೂ ಹೇಳಿ, ರೈಲು ಹೊರಡುವವರೆವಿಗೆ ನಿಂತಿದ್ದು ಬಂದರು.

ರೈಲು ಪ್ಲಾಟ್‌ಫಾರಂ ಬಿಟ್ಟು ಹೊರಟು ತಂದೆಯು ಕಣ್ಮರೆಯಾಗು ತ್ತಲೇ ಪ್ರಮಿಳೆಯ ಮನಸ್ಸಿನಲ್ಲಿ ನಾನಾಬಗೆಯಾದ ಆಲೋಚನೆಗಳು ಬಂದುವು.

ತಾನು ಊರುಬಿಟ್ಟು ಹೊರಡುವ ಮೊದಲು ಪೋಸ್ಟ್ ಮಾಡಿದ್ದ ಎರಡು ಕಾಗದಗಳ ವಿಷಯವು ಪುನಃ ಪುನಃ ಮನಸ್ಸಿಗೆ ಬಂದಿತು.

ಒಂದು ಕಾಗದದಲ್ಲಿ ಅಷ್ಟು ಯೋಚನೆ ಮಾಡುವುದೇನೂ ಇರಲಿಲ್ಲ. ಅದು ಅಕ್ಕನಿಗೆ ಬರೆದ ಕಾಗದ. ಪ್ರಮಿಳೆ ಬುಧವಾರದ ದಿನ ಹತ್ತೂಕಾಲು

ಗಂಟೆಗೆ ಹೊರಡುವ ಪೂನಾ ಮೆಯಿಲಿನಲ್ಲಿ ಹೊರಟು ಸಂಜೆಯ ವೇಳೆಗೆ ಶಿವಮೊಗ್ಗಾಗೆ ಬರುತ್ತಾಳೆಂದೂ, ಆ ದಿನ ಸಂಜೆ ಸ್ಟೇಷನ್ನಿಗೆ ಹೋಗಿ ಅವಳನ್ನು ಕರೆದುಕೊಂಡು ಬರಬೇಕೆಂದೂ ಗುಂಡಪ್ಪ ತಮ್ಮ ದೊಡ್ಡ ಅಳಿಯನಿಗೆ ಬರೆದಿದ್ದರು ಭಾವನಂತೂ ಸ್ಟೇಷನ್ನಿಗೆ ಬಂದೇ ಬರುತ್ತಾರೆ. ಅಕ್ಕನೂ ಬಂದರೂ ಬರಬಹುದು. ಒಂದುವೇಳೆ ತಾನು ಆ ಗಾಡಿಯಲ್ಲಿ ಹೋಗದೇ ಹೋದರೆ ಅವರು ಶಿವನಸಮುದ್ರಕ್ಕೆ ತಂತಿಕೊಟ್ಟು ಗಲಾಟೆಯಾಗಬಹುದು. ಆದರಿಂದ ಬುಧವಾರದ ದಿನ ಹೊರಡಲಾಗುವುದೋ ಇಲ್ಲವೋ, ಶುಕ್ರವಾರದ ದಿನ ಬೆಳಗಾಗಿನ ಗಾಡಿಯಲ್ಲಿ ಬರುವುದು ಖಂಡಿತವೆಂದೂ ಪ್ರಮಿಳಾ ಅಕ್ಕನಿಗೆ ಬರೆದಿದ್ದಳು.

ಶುಕ್ರವಾರ ಸಂಜೆಗೂ ತಾನು ಅಕ್ಕನ ಮನೆಗೆ ಹೋಗುತ್ತೇನೆಂಬ ನಂಬಿಕೆ ಪ್ರಮಿಳೆಗೆ ಇರಲಿಲ್ಲ. ಆದರೆ ಈ ಎರಡು ದಿನಗಳಲ್ಲಿ ಯಾರಿಗೂ ಸಿಕ್ಕದಷ್ಟು ದೂರ ಹೊರಟುಹೋಗಿರುತ್ತೇನೆಂದು ಮನಸ್ಸಿನಲ್ಲಿ ಧೈರ್ಯವಿತ್ತು.

ಮಾಧುವಿಗೆ ಬರೆದಿದ್ದ ಕಾಗದವೇ ಬಹಳ ಮುಖ್ಯವಾದುದು.

ಅವನು ಶಿವನಸಮುದ್ರದಿಂದ ಹೊರಟು ಹೋದನಂತರ ಪ್ರಮಿಳೆ ಬರೆದಿದ್ದ ಮೊದಲನೆಯ ಕಾಗದ ಅದು. ಪ್ರಮಿಳೆಗೂ ಅವನಿಗೂ ಪತ್ರವ್ಯವಹಾರಗಳು ನಡೆಯುತ್ತಲೇ ಇದ್ದುವು. ಪ್ರಮಿಳೆಗೆ ಮಾಧು ಬರೆಯುತ್ತಿದ್ದ ಕಾಗದಗಳು ಚಂದ್ರಮಣಿಯ ವಿಳಾಸಕ್ಕೆ ಬರುತ್ತಿದ್ದುವು. ಪ್ರಮಿಳೆಯೂ ಅಷ್ಟೇ. ತಾನು ಬರೆಯುವ ಕಾಗದಗಳನ್ನು ಗೆಳತಿಯ ಮನೆಯಲ್ಲಿ ಕುಳಿತು ಬರೆದು ಪೋಸ್ಟ್ ಮಾಡಿಬಿಡುತ್ತಿದ್ದಳು.

ಗುಂಡಪ್ಪ ತಾವು ತಂದುಕೊಟ್ಟ ಹನುಮಂತರಾಯನ ಗುಡಿಯ ವಿಭೂತಿಯಿಂದಲೇ ಮಗಳ ಮಂಕುತನ ಬಗೆಹರಿಯಿತೆಂದುಕೊಂಡಿದ್ದರೂ ಅದು ವಾಸ್ತವವಾಗಿ ಬಗೆಹರಿದುದು ಮಾಧುವಿನಿಂದ ಚಂದ್ರಮಣಿಯ ಮುಖಾಂತರವಾಗಿ ಅವಳಿಗೆ ಬಂದ ಕಾಗದಗಳಿಂದ.

ತನಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನೂ ಪ್ರಮಿಳೆ ಮಾಧುವಿಗೆ ಬರೆಯುತ್ತಿದ್ದಳು. ಅದೇ ರೀತಿಯಾಗಿ ತಾನು ಶಿವಮೊಗ್ಗಾದಲ್ಲಿದ್ದ ತನ್ನ ಅಕ್ಕನ ಮನೆಗೆ ಹೋಗುತ್ತೇನೆಂದು ಸಹ ಬರೆದಿದ್ದಳು. ಅದಕ್ಕೆ ಉತ್ತರವಾಗಿ ಮಾಧು

ತಾನು ಈಗ ಸದ್ಯದಲ್ಲಿ ಬಾಣಸಂದ್ರದಲ್ಲಿರುವುದಾಗಿಯೂ, ಪ್ರಮಿಳೆ ಯಾವ ಗಾಡಿಯಲ್ಲಿ ಶಿವಮೊಗ್ಗಾಗೆ ಹೋಗುತ್ತಾಳೆಂಬುದು ಗೊತ್ತಾದರೆ ತಾನು ಸ್ಟೇಷನ್ನಿಗೆ ಬಂದು ನೋಡುವುದಾಗಿಯೂ ಬರೆದಿದ್ದ.

ಅದಕ್ಕೆ ಪ್ರಮಿಳೆ "ನೀವು ಇಲ್ಲಿಂದ ಹೊರಟುಹೋದುದು ನನಗೆ ನೀರಿನಿಂದ ತೆಗೆದು ಹೊರಗೆ ಹಾಕಿದ ಮೀನಿನಂತೆ ಆಗಿದೆ. ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ಭಾಸವಾಗುತ್ತಿದೆ. ನೀವು ಹೊರಟುಹೋದ ಮೇಲೆ ನನಗೆ ಬುದ್ಧಿಯೇ ಕೆಟ್ಟುಹೋಗಿದ್ದಿತೆಂದೂ, ನಿಮ್ಮ ಕಾಗದ ಬಂದ ಮೇಲೆ ಸ್ವಲ್ಪ ಚೈತನ್ಯವು ಬಂದಂತಾಗಿದೆ ಎಂದೂ ಈ ಮೊದಲೇ ನಿಮಗೆ ಬರೆದಿದ್ದೇನೆ. ನಿಮ್ಮಿಂದ ಇದುವರೆವಿಗೆ ಐದಾರು ಪತ್ರಗಳು ಬಂದಿದ್ದರೂ ನೀವು ಬಾಣಸಂದ್ರದಲ್ಲಿ ಎಲ್ಲಿದ್ದೀರಿ, ಏನು ಮಾಡುತ್ತಿದ್ದೀರಿ – ಎಂಬುದೊಂದೂ ಬರೆದೇ ಇಲ್ಲ. ಸಾಧ್ಯವಾದರೆ ನಿಮ್ಮೊಂದಿಗೆ ಎರಡು ದಿನಗಳಿದ್ದು ಎಲ್ಲಾ ವಿಷಯಗಳನ್ನೂ ಮಾತನಾಡಿಕೊಂಡು ಆ ಮೇಲೆ ಶಿವಮೊಗ್ಗಾಗೆ ಪ್ರಯಾಣ ಮಾಡಬೇಕೆಂದಿದ್ದೇನೆ. ನೀವು ಈ ಕಾಗದಕ್ಕೆ ಜವಾಬು ಬರೆಯಬೇಡಿರಿ. ಬಾಣಸಂದ್ರ ಸ್ಟೇಷನ್ನಿನಲ್ಲಿ ಬಂದು ನೀವು ನನ್ನನ್ನು ನೋಡಿದರೆ ಬಹಳ ಸಂತೋಷ. ನಾನು ಬುಧವಾರ ಬೆಳಗಾಗ ಬೆಂಗಳೂರಿನಿಂದ ಹೊರಡುವ ಪೂನಾ ಗಾಡಿಯಲ್ಲಿ ಪ್ರಯಾಣ ಮಾಡುತ್ತೇನೆ" ಎಂದು ಬರೆದಿದ್ದಳು.

ಈ ಕಾಗದ ಮಾಧುವಿಗೆ ಸಿಕ್ಕಿದೆಯೋ ಇಲ್ಲವೋ ? ಅವನು ಸ್ಟೇಷನ್ನಿಗೆ ಬರುತ್ತಾನೆಯೋ ಇಲ್ಲವೋ ?

ಇಲ್ಲ. ಇಲ್ಲ. ಸಿಕ್ಕದೇ ಇರುವುದಕ್ಕೆ ಏನಾಗಿದೆ ? ಸಿಕ್ಕಿಯೇ ಸಿಕ್ಕಿರುತ್ತದೆ. ಅವನು ಬಂದೇ ಬರುತ್ತಾನೆ.

ಪ್ರಮಿಳೆ ಮುಂದಿನದೆಲ್ಲವನ್ನೂ ತನ್ನ ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳಲಾರಂಭಿಸಿದಳು. ತಾನು ಬಾಣಸಂದ್ರದಲ್ಲಿಳಿಯಬೇಕೆಂದು ಮಾಧು ಬಲಾತ್ಕಾರ ಮಾಡುತ್ತಾನೆ. ತಾನು ಇಳಿಯುತ್ತಾಳೆ. ಅದಂತೂ ಸರಿ. ಶಿವಮೊಗ್ಗೆಗೆ ಹೋಗುವುದೇ ಬೇಡವೇ ? ಬೇಡವೆಂದೇ ಅವಳಿಗೆ ತೋರಿತು. ಒಂದೆರಡು ಕಾಗದಗಳಲ್ಲಿ ಮಾಧು ತಾನು ಕಾಶಿಗೆ ಓದುವುದಕ್ಕೆ ಹೋಗು

ತ್ತೇನೆಂದು ಬರೆದುಕೊಂಡಿದ್ದ. ಅವನು ಹೊರಡುವುದರಲ್ಲಿರುತ್ತಾನೆ. ತಾನೂ ಹೊರಡುವುದು. ಕಾಶಿಯಲ್ಲಿಯೇ ಇದ್ದುಬಿಡುವುದು.

ಅದೆಲ್ಲಾ ಸರಿ. ಶುಕ್ರವಾರದ ದಿನ ಸಂಜೆ ಭಾವ ಸ್ಟೇಷನ್ನಿಗೆ ಬಂದು ನೋಡುತ್ತಾರೆ. ತಾನು ಬರದಿರುವುದನ್ನು ಕಂಡು ಗಾಬರಿಯಾಗಿ ಊರಿಗೆ ತಂತೀ ಕೊಡುತ್ತಾರೆ. ಅಪ್ಪ ಅಮ್ಮ ಸಹ ಗಾಬರಿಯಾಗುತ್ತಾರೆ. ಅವರಿಗೆ ವಿಷಯ ತಿಳಿದು ಹುಡುಕಲು ಆರಂಭಿಸುವ ವೇಳೆಗೆ ತಾನು ಎಲ್ಲಿರುತ್ತಾಳೆ? ಅದು ಖಚಿತವಾಗಿ ಅವಳಿಗೇ ಗೊತ್ತಾಗಿರಲಿಲ್ಲ. ದೂರ, ಬಹುದೂರ, ಅವರುಗಳಿಗೆ ಸಿಕ್ಕದಷ್ಟು ದೂರ ಇರುತ್ತೇನೆಂದುಕೊಂಡಳು.

ಅನಂತರ ಕಾಶಿಗೆ ಹೋದ ಮೇಲೆ ಅಡ್ರೆಸ್ಸು ಕೊಡದೇ ತಾನು ಮಾಧುವಿನೊಡನೆ ಕಾಶಿಗೆ ಬಂದಿರುವುದಾಗಿ ಕಾಗದ ಹಾಕಿಬಿಡುವುದು. ಕಾಶಿ ಮಹಾನಗರ. ದಿನಕ್ಕೆ ಸಹಸ್ರಾರು ಮಂದಿ ಯಾತ್ರಿಕರು ಬಂದು ಹೋಗುವ ಸ್ಥಳ. ಒಂದುವೇಳೆ ಅಪ್ಪ ಹುಡುಕಿಕೊಂಡು ಬಂದರೂ ಸಿಕ್ಕುವುದಿಲ್ಲ. ಸಿಕ್ಕಿದರೂ ಹೆದರಬೇಕಾಗಿಲ್ಲ. ಸ್ಪಷ್ಟವಾಗಿ ತಾನು ಅವರನ್ನು ಪ್ರೀತಿಸುವುದಾಗಿ ಹೇಳಿದ್ದಾಳೆ. ಇನ್ನು ಭಯಪಡಬೇಕಾದ ಅಂಶವಾದರೂ ಏನಿದೆ?

ಮಾಧುವಿನೊಡನೆ ಕಾಶಿಯಲ್ಲಿದ್ದುಬಿಡುವುದು ಎಂದಷ್ಟೇ ವಿಷಯ ಪ್ರಮಿಳೆಯ ಮನಸ್ಸಿಗೆ ಬಂದುದು. ತಾವಿಬ್ಬರೂ ಮದುವೆ ಮಾಡಿಕೊಳ್ಳುವುದೇ ಬೇಡವೇ, ಊಟಕ್ಕೇನು ಮಾಡುವುದು, ಯಾವ ನಗರವೇ ಆಗಲಿ, ಹೊಸದಾಗಿ ಹೀಗೆ ತರುಣ ತರುಣಿಯರು ಬಂದು ವಾಸಮಾಡತೊಡಗಿದರೆ ನೋಡಿದವರು ಏನೆಂದುಕೊಳ್ಳುತ್ತಾರೆ – ಈ ಯಾವೊಂದು ವಿಷಯಗಳೂ ಅವಳ ಮನಸ್ಸಿಗೆ ಬರಲೇ ಇಲ್ಲ.

ಇವೆಲ್ಲಾ ಸಾಧಾರಣವಾದ ವಿಷಯಗಳೆಂದು ಅವಳಿಗೆ ತೋರಿದವು.

ರೈಲು ಬೆಂಗಳೂರಿನಿಂದ ಅರಸೀಕೆರೆಯ ಕಡೆಗೆ ಹೋಗುತ್ತಿದ್ದರೂ ಅದರಲ್ಲಿಯೇ ಕುಳಿತುಕೊಂಡಿದ್ದರೂ ತಾನು ಮಹಾನಗರವಾದ ಕಾಶಿಯಲ್ಲಿಯೇ ಇರುವಂತೆ ಭಾವಿಸಿಕೊಂಡಿದ್ದಳು. ಎಂದೂ ಮನೆಬಿಟ್ಟು ಹೋಗದೇ ಇದ್ದ ಪ್ರಮಿಳೆಗೆ ಕಾಶೀನಗರವು ಹೇಗಿರಬಹುದು, ಅಲ್ಲಿಯ ಜೀವನ ಹೇಗಿರಬಹುದು ಎಂಬ ಊಹೆಯೂ ಸಹ ಇರಲಿಲ್ಲ. ಯಾತ್ರಿಕರ ಗುಜುಗುಂಪಲ್ಲು, ವಿಶ್ವೇಶ್ವರನ

ದೇವಾಲಯ, ಅವಳು ಯಾವಾಗಲೂ ಮನೆಯಲ್ಲಿ ನೋಡುತ್ತಿದ್ದ ಕಾಶಿಯ ಸ್ನಾನಘಟ್ಟ ಇವುಗಳು ಮನಸ್ಸಿನ ಮುಂದೆ ಬರುತ್ತಿದ್ದವು. ಅವುಗಳಿಂದಲೇ ಆ ನಗರವನ್ನೂ, ಅಲ್ಲಿನ ಜೀವನವನ್ನೂ ತೋಚಿದ ಹಾಗೆ ಚಿತ್ರಿಸಿಕೊಳ್ಳು ತ್ತಿದ್ದಳು.

ಸ್ವಲ್ಪ ಕಷ್ಟವಾಗಬಹುದಾದರೂ ಮಾಧುವಿನ ಜೊತೆಯಲ್ಲಿ ಜೀವನವು ಸುಖಮಯವಾಗಿಯೇ ಇರುತ್ತದೆಂದುಕೊಂಡಳು.

ಹೀಗೆ ಹಗಲಲ್ಲಿಯೇ ಸ್ವಪ್ನಗಳನ್ನು ಕಾಣುತ್ತಾ ಪ್ರಮಿಳೆಯು ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಳು.

ಮಧ್ಯಾಹ್ನ ಹನ್ನೆರಡು ಹನ್ನೆರಡೂಕಾಲರ ವೇಳೆಗೆ ಬಾಣಸಂದ್ರಕ್ಕೆ ಗಾಡಿಯು ಬಂದಿತು. ಪ್ಲಾಟ್‌ಫಾರಂನಲ್ಲಿ ಎಲ್ಲಿ ನೋಡಿದರೂ ಮಾಧು ಕಂಡುಬರಲಿಲ್ಲ. ಯಾವುದೋ ಗೂಡ್ಸ್ ಗಾಡಿಯ ಕ್ರಾಸಿಂಗೋ ಏನೋ ಇದ್ದಿತು. ಆದರಿಂದ ಗಾಡಿ ಹೊರಡುವುದು ತಡವಾಯಿತು. ಪ್ಲಾಟ್‌ಫಾರಂ ನಲ್ಲಿ ವಡೆ ಚಕ್ಕುಲಿ, ಕಾಫೀ ಟೀ, ಮಿಠಾಯಿ ಪೆಪ್ಪರ್‌ಮೆಂಟುಗಳನ್ನು ಮಾರ ತೊಡಗಿದರು.

ಆದಾವುದರಲ್ಲಿಯೂ ಪ್ರಮಿಳೆಯ ಆಸಕ್ತಿಯಿರಲಿಲ್ಲ. ಅವಳ ಕಣ್ಣುಗಳು ಮಾಧುವನ್ನು ಹುಡುಕುತ್ತಿದ್ದವು. ಮನಸ್ಸು ಅವನನ್ನು ನೋಡಲು ಕಾತುರ ವಾಗಿದ್ದಿತು.

ಈ ನಡುವೆ ಪ್ರಮಿಳೆಯ ದೃಷ್ಟಿಯನ್ನು ಸೆಳೆಯುವ ಪ್ರಸಂಗವೊಂದು ನಡೆಯಿತು. ಒಬ್ಬಾನೊಬ್ಬ ಕೈಗಾಡಿಯ ತುಂಬಾ ಸೊಪ್ಪಿನ ಕಡಲೇ ಹಾಕಿ ಕೊಂಡು ಬಂದ. ಒಂದೊಂದು ಕಂತೆಯನ್ನೂ ಮಧ್ಯೆ ಹುಲ್ಲು ಕಟ್ಟಲಾಗಿತ್ತು. ಆದರ ಉದ್ದ ತೋಳಿನಷ್ಟಿತ್ತು. ಪ್ರಮಿಳೆಯ ಜೊತೆಯಲ್ಲಿ ಬೆಂಗಳೂರಿನಿಂದ ಬಂದಿದ್ದ ವೃದ್ಧ ದಂಪತಿಗಳಲ್ಲಿ ಪತಿಯು ಒಂದು ಕಂತೆ ತೆಗೆದುಕೊಂಡು ದುಡ್ಡು ಕೊಟ್ಟ. ಅವನು ಒಂದಾಣೆಯನ್ನು ಮಾತ್ರ ತೆಗೆದುಕೊಟ್ಟಂತೆ ಪ್ರಮಿಳೆಗೆ ಕಂಡುಬಂದಿತು. ಹೊರೆಯಂತಿರುವ ಇಷ್ಟು ದೊಡ್ಡ ಕಂತೆಗೆ ಒಂದಾಣೆಯೇ ಎನ್ನಿಸಿತು. ಕೇಳಬೇಕೆಂದುಕೊಂಡಳು. ಏನು ಮಹಾ ವಿಷಯವೆಂದು ಕೇಳು ವುದೇ ಎಂದು ಸುಮ್ಮನಾದಳು.

ಆ ವೃದ್ಧ ಕಂತೆಯಲ್ಲಿ ಸ್ವಲ್ಪ ಕಿತ್ತು ಪ್ರಮೀಳೆಯ ಕೈಗೆ ಕೊಟ್ಟ. ಅವಳು ಬೇಡವೆಂದರೂ "ತಿನ್ನು ಮಗು. ಚೆನ್ನಾಗಿರುತ್ತದೆ. ನೀನು ಬೆಂಗಳೂರಿನವಳೆಂದು ಕಾಣುತ್ತದೆ. ಕಾಲೇಜಿಗೆ ಹೋಗುವ ನಿಮ್ಮಂತಹ ಹುಡುಗಿಯರಿಗೆ ಇವೆಲ್ಲವೂ ಗೊತ್ತಿಲ್ಲ. ತಿಂದುನೋಡು" ಎಂದ.

ವಿಧಿಯಿಲ್ಲದೇ ಅದನ್ನು ಕೈಗೆ ತೆಗೆದುಕೊಂಡಳು.

"ಇದಕ್ಕೆಷ್ಟು ಕೊಟ್ಟಿರಿ ? ಒಂದಾಣೆಯಲ್ಲವೇ ?"

"ಹೌದು. ಇತ್ತಕಡೆ ಸೊಪ್ಪಿನ ಕಡಲೇ ಬಹಳ ಅಗ್ಗ."

ಮುದುಕ ಉಳಿದುದರಲ್ಲಿ ತಾನೂ ಒಂದಿಷ್ಟು ಇಟ್ಟುಕೊಂಡು ತನ್ನ ಹೆಂಡತಿಗೂ ಸ್ವಲ್ಪ ಕೊಟ್ಟ.

ಸೊಪ್ಪಿನಕಳ್ಳಿ ನೋಡುವುದಕ್ಕೇನೋ ಬಹಳ ಚೆನ್ನಾಗಿತ್ತು. ಹುಡುಕಿದರೂ ಅದರಲ್ಲಿ ಕಡಲೇ ಸಿಗುವುದು ಕಷ್ಟವಾಗಿತ್ತು.

ಅದೇ ಡಬ್ಬಿಯಲ್ಲಿ ಇನ್ನೂ ಮೂರು ನಾಲ್ಕು ಜನ ಅದನ್ನು ಕೊಂಡುಕೊಂಡು ಕಾಳು ಸಿಕ್ಕದೇ ಪೇಚಾಡುತ್ತಿದ್ದರು.

ಅವರಲ್ಲಿ ಒಬ್ಬ "ಸೀಮೇಗೊಬ್ಬರ ಹಾಕಿ ಬೆಳೆದುಬಿಡುತ್ತಾರೆ. ನಮ್ಮ ದೇಶಕ್ಕೆ ಆ ಗೊಬ್ಬರ ಸರಿಹೋಗುವುದಿಲ್ಲ. ಗಿಡ ಚೆನ್ನಾಗಿ ಆಗುತ್ತದೆ. ಕಾಳು ಮಾತ್ರ ಇರುವುದಿಲ್ಲ" ಎಂದ.

ಮತ್ತೊಬ್ಬ "ನೀವು ಹೇಳುವುದು ನಿಜ. ಸೀಮೇಗೊಬ್ಬರ ಎಲ್ಲಾ ಕಡೆಯೂ ಹಾಕುತ್ತಾರೆ. ಆದರೆ ಎಷ್ಟು ಹಾಕಬೇಕೋ ಅಷ್ಟೇ ಹಾಕದೇ ಹೆಚ್ಚಾಗಿ ಹಾಕಿಬಿಟ್ಟಿದ್ದಾರೆ. ಯಾವಾಗಲೂ ಅಷ್ಟೇ. ನೋಡುವುದಕ್ಕೆ ಚೆನ್ನಾಗಿ ಕಾಣುವುದರಲ್ಲಿ ತಿರುಳಿರುವುದಿಲ್ಲ" ಎಂದು ಹೇಳಿದ.

ಅಲ್ಲಿಯೇ ಇನ್ನಿಬ್ಬರು ರೈತರು ಕುಳಿತುಕೊಂಡಿದ್ದರು. ಅವರು ಏನೂ ಗೊತ್ತಿಲ್ಲದೇ ಎಲ್ಲವೂ ಗೊತ್ತಿರುವಂತೆ ಮಾತನಾಡುವ ನಾಗರೀಕರ ಮಾತುಗಳನ್ನು ಕೇಳಿ ನಕ್ಕು ಹೇಳಿದರು.

"ಹಾಗಲ್ಲ, ಸ್ವಾಮಿ. ಅದು ಗದ್ದೆಯಲ್ಲಿ ಬೆಳೆದದ್ದು. ಅದು ಹಾಗೇ ಇರುವುದು."

ರೈತರು ಹೇಳಿದ ವಾಸ್ತವವಾದ ಸಂಗತಿಯು ಅವರ ಮನಸ್ಸಿಗೆ ಬರಲೇ ಇಲ್ಲ. ಏನೋ ವಾಗ್ವಾದಗಳನ್ನು ಮಾಡತೊಡಗಿದರು.

ಪ್ರಮೀಳೆ ಅದನ್ನೂ ಕೇಳಿಸಿಕೊಳ್ಳುತ್ತಿದ್ದಳೋ ಏನೋ? ಆದರೆ ಅಷ್ಟರಲ್ಲಿ ಹೊರಗಿನಿಂದ "ಪ್ರಮೀಳಾ ಪ್ರಮೀಳಾ" ಎಂದು ಕರೆದ ಹಾಗಾಯಿತು. ತಿರುಗಿ ನೋಡುತ್ತಾಳೆ. ಮಾಧು.

ಅವಳಿಗೆ ಅದೇ ಕಿಟಕಿಯಲ್ಲಿ ಹಾರಿ ಹೋಗಿ ಅವನ ಪಕ್ಕದಲ್ಲಿ ನಿಂತು ಕೊಳ್ಳಬೇಕೆನ್ನಿಸಿತು. ಆದರೆ ಹಾಗೆ ಹಾರುವಂತಿರಲಿಲ್ಲ. ಜನ ಮಧ್ಯದಲ್ಲಿ ಜಾಗ ಮಾಡಿಕೊಂಡು ಕೆಳಗೆ ಹೋದಳು.

"ನಿನ್ನನ್ನು ಎಷ್ಟೋ ಹುಡುಕಿದೆ. ನೀನು ಸಿಕ್ಕಲೇ ಇಲ್ಲ ಪ್ರಮೀಳಾ."

ಪ್ರಮೀಳೆಯು ನಸುನಗುವನ್ನು ನಗುತ್ತಾ 'ನಾನೂ ನಿಮಗಾಗಿ ಎಷ್ಟೋ ನೋಡಿದೆ. ಕಣ್ಣಿಗೆ ಬೀಳಲಿಲ್ಲ. ನನ್ನನ್ನು ಮರೆತುಬಿಟ್ಟಿರೇನೋ ಎಂದು ಕೊಂಡೆ" ಎಂದಳು.

"ಎಲ್ಲಿಯಾದರೂ ಉಂಟೇ, ಎಲ್ಲಿಯಾದರೂ ಉಂಟೇ? ಸರಿ. ತಡಿ. ಸಾಮಾನು ಇಳಿಸುತ್ತೇನೆ."

"ಇಲ್ಲ, ಎಲ್ಲಿದ್ದೀರಿ?"

"ಅವೆಲ್ಲಾ ಹೇಳುತ್ತೇನೆ. ಮೊದಲು ಸಾಮಾನು ಇಳಿಸೋಣ."

ಮಾಧು ಡಬ್ಬಿಯನ್ನು ಹತ್ತಿ ಪ್ರಮೀಳೆಯ ಸಾಮಾನು ಇಳಿಸತೊಡಗಿದ.

ಅದನ್ನು ನೋಡಿ ವೃದ್ಧನು "ಏನಮ್ಮಾ. ನೀನು ಶಿವಮೊಗ್ಗಾದಲ್ಲಿ ಇಳಿಯುವುದಾಗಿ ನಿಮ್ಮ ತಂದೆ ಹೇಳಿದರಲ್ಲ" ಎಂದ.

ಪ್ರಮೀಳೆ ಏನು ತಪ್ಪು ಮಾತನಾಡುತ್ತಾಳೆಯೋ ಎಂದು ಮಾಧುವೇ "ಹೌದು. ಇವಳು ನನ್ನ ಚಿಕ್ಕಮ್ಮನ ಮಗಳು. ಇವಳು ರೈಲಿನಲ್ಲಿ ಬರುತ್ತಾಳೆ. ಊಟ ತಂದುಕೊಡಬೇಕೆಂದು ಬರೆದಿದ್ದರು. ನಮ್ಮಮ್ಮ ಇವಳನ್ನು ಇಲ್ಲಿಯೇ ಇಳಿಸಿ ಕರೆದುಕೊಂಡು ಬರಬೇಕೆಂದು ಹೇಳಿದ್ದಾರೆ" ಎಂದು ಹೇಳಿ ಪ್ರಮೀಳೆಯ ಪೆಟ್ಟಿಗೆಯನ್ನು ತೆಗೆದು ಹೊರಗೆ ಕೊಟ್ಟ. ಅವಳು ಇಳಿಸಿಕೊಂಡಳು.

ವೃದ್ಧ ಅಲ್ಲಿಗೂ ಬಿಡಲಿಲ್ಲ.

"ಅದು ಸರಿಯಪ್ಪ. ಟಿಕೀಟು ಅನ್ಯಾಯವಾಗುತ್ತದಲ್ಲ."

"ಪರವಾಯಿಲ್ಲ. ನಾನು ಶಿವಮೊಗ್ಗಾಗೆ ಹೋಗುವ ಯಾರಿಗಾದರೂ ಕೊಟ್ಟು ದುಡ್ಡು ತೆಗೆದುಕೊಡುತ್ತೇನೆ. ಹಾಗೆ ಯಾರೂ ಸಿಕ್ಕದಿದ್ದರೆ ಬೇಡ. ಹಣ ಹೋದರೂ ಹೋಗಲಿ. ನಮ್ಮಮ್ಮ ಕರೆದುಕೊಂಡು ಬರುವಂತೆ ಹೇಳಿದ್ದಾರೆ."

ಎಲ್ಲಿಯಾದರೂ ಹೋಗಲಿ, ತನಗೇನು ಎಂದುಕೊಂಡ ಆ ಮುದುಕ. ಆದರೂ ಹೊರಡುವುದರಲ್ಲಿದ್ದ ಮಾಧುವನ್ನು ಕುರಿತು "ಸ್ವಲ್ಪ ಜೋಪಾನವಾಗಿ ಕರೆದುಕೊಂಡು ಹೋಗಪ್ಪ" ಎಂದ.

ಮುದುಕನಿಗೆ ಉತ್ತರ ಕೊಡದಿದ್ದರೂ ಆ ತರುಣ ತರುಣಿಯರು ಅವನ ಮಾತಿಗೆ ನಗುತ್ತಾ ಮುಂದುವರಿದರು.

ಅವರಿನ್ನೂ ಸ್ಟೇಷನ್ನಿನ ಬಾಗಿಲನ್ನು ತಲುಪಿರಲಿಲ್ಲ. ಅದಿನ್ನೂ ಅಷ್ಟು ದೂರವಿತ್ತು.

ಆಗ ಪ್ರಮೀಳೆಯು "ಆ ಮುದುಕನಿಗೆ ಒಳ್ಳೆಯ ಕತೆಯನ್ನು ಕಟ್ಟಿ ಹೇಳಿದಿರಿ. ಅವನು ಕೇಳಿದಾಗ ನನಗೇನು ಉತ್ತರ ಕೊಡಬೇಕೆಂಬುದೇ ತೋರಲಿಲ್ಲ" ಎಂದು ಹೇಳಿಕೊಂಡು ನಕ್ಕಳು.

"ಹುಂ, ಮತ್ತೆ. ಹೇಳದಿದ್ದರಾಗುತ್ತದೆಯೆ? ಅವನೇನು ನಮ್ಮನ್ನು ಹಿಡಿದು ನಿಲ್ಲಿಸುವುದಕ್ಕಾಗುವುದಿಲ್ಲ. ಆದರೂ ನಾಲ್ಕು ಜನದ ಎದುರಿಗೆ ಅವನು ಮಾತನಾಡತೊಡಗಿದರೆ ಮಾನ ಹೋಗುತ್ತದಲ್ಲ."

ಕೂಲಿಯವನ ಕೈಲಿ ಸಾಮಾನು ಹೊರಿಸಿಕೊಂಡು ಅವರಿಬ್ಬರೂ ನಡೆದುಕೊಂಡೇ ಹೊರಟರು.

ಅನಿರೀಕ್ಷಿತವಾಗಿ ಅಕ್ಕನ ಮನೆಗೆ ಹೋಗುವ ಪ್ರಮೇಯ ಬಂದುದು, ತಾನು ಯೋಜನೆಮಾಡಿ ಮಾಧುವನ್ನು ನೋಡಲು ಅವಕಾಶ ಹೊಂಚಿಕೊಂಡುದು ಎಲ್ಲವನ್ನೂ ವಿವರವಾಗಿ ಹೇಳತೊಡಗಿದಳು.

ಮಾತನಾಡುತ್ತಾ ಆಡುತ್ತಾ ನಡುವೆ "ನಾವೀಗ ಎಲ್ಲಿಗೆ ಹೋಗುತ್ತಿದ್ದೇವೆ ?" ಎಂದು ಕೇಳಿದಳು.

"ಇಲ್ಲಿ ನಮ್ಮ ದೂರದ ಬಂಧುಗಳೊಬ್ಬರ ಮನೆಗೆ ಹೋಗುತ್ತೇವೆ. ಆಕೆ ಒಂದು ವಿಧವಾಗಿ ನನಗೆ ಅಕ್ಕನಾಗಬೇಕು."

ಪ್ರಮೀಳೆ ತಟ್ಟನೆ ನಕ್ಕು "ಮುದುಕನಿಗೆ ಹೇಳಿದ ದೊಡ್ಡಮ್ಮನಂತೆ ಅಕ್ಕನೋ ?" ಎಂದಳು.

"ಇಲ್ಲ. ದೇವರಾಣೆಗೂ ಇಲ್ಲ. ನಿನಗೆ ಸುಳ್ಳು ಹೇಳಬೇಕಾದ ಅಗತ್ಯವಾದರೂ ಏನು ?"

ಮಾಧುವಿನ ಅಕ್ಕನ ಮನೆ ಸ್ಟೇಷನ್ನಿಗೆ ಮೂರು ಫರ್ಲಾಂಗುಗಳ ದೂರದಲ್ಲಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಅಲ್ಲಿಗೆ ಸೇರಿದರು. ಮನೆಯ ಬಾಗಿಲು ತೆಗೆದೇ ಇತ್ತು.

ಒಳಗೆ ಪ್ರವೇಶಿಸುತ್ತಲೇ ಮಾಧು 'ಅಕ್ಕಾ' ಎಂದು ಕೂಗಿದ.

ಮಧ್ಯಮ ವಯಸ್ಸಿನ ಹೆಂಗಸೊಬ್ಬಳು ಬಂದು ಎದುರುಗೊಂಡಳು. ಪರಿಚಯಸ್ಥಳಂತೆ ಪ್ರಮೀಳೆಯನ್ನು ಕುರಿತು 'ಬಾಮ್ಮ' ಎಂದು ಸ್ವಾಗತಿಸಿದಳು. ಮುಂದುಗಡೆ ಹಾಕಿದ್ದ ಚಾಪೆಯ ಮೇಲೆ ಕೂರಿಸಿದಳು. ಕೂಲಿಯವನು ಪೆಟ್ಟಿಗೆಯನ್ನಿಟ್ಟು ಮಾಧುವಿನಿಂದ ಕೂಲೀ ತೆಗೆದುಕೊಂಡು ಹೊರಟುಹೋದ.

ಮನೆಯ ಹತ್ತಿರ ಬರುತ್ತಿದ್ದ ಹಾಗೆಯೇ ಮಾಧು ಮಾತನಾಡುವುದನ್ನು ನಿಲ್ಲಿಸಿಬಿಟ್ಟಿದ್ದ. ಅಲ್ಲಿ ಮಾತನಾಡಬಹುದೋ ಕೂಡದೋ ಎಂದು ಅವನು ಪಕ್ಕದಲ್ಲಿಯೇ ಕುಳಿತಿದ್ದರೂ ಪ್ರಮೀಳೆ ಮಾತನಾಡಲಿಲ್ಲ. ಅದಕ್ಕೆ ಮತ್ತೊಂದು ಕಾರಣವೂ ಇದ್ದಿತು. ಮಾಧು ಒಬ್ಬನೇ ಇದ್ದರೆ ಬೇಕಾದ್ದು ಮಾತನಾಡಬಹುದು. ಯಾರೋ ಅಪರಿಚಯಸ್ಥಳಾದ ಹೆಂಗಸಿರುವಾಗ ಮಾತನಾಡುವುದು ಹೇಗೆ ? ಸುಮ್ಮನೆ ಕುಳಿತುಕೊಂಡಿದ್ದಳು.

ಸಣ್ಣ ಮನೆ. ಮುಂದೆ ಸಣ್ಣ ವರಾಂಡ. ಅದರ ಪಕ್ಕದಲ್ಲಿ ರೂಮು. ಅವೆರಡೂ ಸೇರಿದಷ್ಟೇ ಇರುವ ಹಜಾರ. ಹಜಾರದ ಒಂದು ಕಡೆ ಅಡಿಗೆ ಮನೆ. ಮತ್ತೊಂದು ಕಡೆ ಬಚ್ಚಲುಮನೆ.

ಹಜಾರ ವರಾಂಡಗಳ ಗೋಡೆಗಳಿಗೆ ಸುಣ್ಣ ಹಚ್ಚಿ ಯಾವ ಕಾಲವಾಗಿದೆಯೋ. ಅವೆಲ್ಲಾ ಬೂದುಬಣ್ಣ ಹಿಡಿದಿದೆ. ಅಷ್ಟೇ ಹಳೆಯದಾದ ನಾಲ್ಕಾರು ದೇವರ ಪಟಗಳಿವೆ. ಪ್ರಮೀಳೆಯು ಕುಳಿತಿದ್ದ ಚಾಪೆಯೂ ಅಷ್ಟೇ ಹಳೆಯದು. ಹರಕಲು. ಆ ಮನೆಯಲ್ಲಿದ್ದ ಒಂದೇ ಒಂದು ಬೆಲೆಬಾಳುವ ವಸ್ತುವೆಂದರೆ ಹಜಾರದಲ್ಲಿಟ್ಟಿದ್ದ ಟೈಲರಿಂಗ್ ಮಿಷಿನ್.

ಪ್ರಮಿಳೆ ಅಲ್ಲಿ ಹೋಗಿ ಕುಳಿತುಕೊಂಡ ಒಂದು ನಿಮಿಷದೊಳಗಾಗಿ ಎರಡು ಹೆಣ್ಣುಮಕ್ಕಳು ಹೊರಗೆ ಬಂದುವು. ಒಂದಕ್ಕೆ ಐದು ವರ್ಷವಿರ ಬಹುದು. ಮತ್ತೊಂದಕ್ಕೆ ಮೂರು ವರ್ಷಗಳು. ಇಬ್ಬರು ಮಕ್ಕಳೂ ದಷ್ಟಪುಷ್ಟವಾಗಿವೆ. ಆದರೆ ಮೈಯೆಲ್ಲಾ ಕೊಳಕಾಗಿದೆ. ಮಲಿನವಾದ ಹರಕು ಫ್ರಾಕುಗಳನ್ನು ಹಾಕಿಕೊಂಡಿವೆ.

ಅವರನ್ನು ನೋಡಿದೊಡನೆಯೇ ಪ್ರಮಿಳೆಗೆ "ಅಯ್ಯೋ! ಈ ಮಕ್ಕಳಿಗೆ ಸ್ವಲ್ಪ ಪಪ್ಪರ್‌ಮೆಂಟಾದರೂ ತರಲಿಲ್ಲವಲ್ಲ. ನನ್ನ ಬುದ್ಧಿಗೇನು ಹೇಳೋಣ. ಮನೆ ಎಂದರೆ ಯಾರಾದರೂ ಮಕ್ಕಳಿರುತ್ತವೆ – ಎಂದು ತೋರಬೇಡವೇ?" ಎಂದುಕೊಂಡಳು.

ತನ್ನ ಕೈಯಲ್ಲಿದ್ದ ಸೊಪ್ಪಿನ ಕಡಲೇ ಗಿಡವನ್ನೇ ಎರಡು ಭಾಗಮಾಡಿ ಅವರಿಗೆ ಕೊಟ್ಟಳು.

ಅವು ತೆಗೆದುಕೊಳ್ಳಲಿಲ್ಲ.

ಮಾಧುವು "ಅತ್ತೆ ಕೊಟ್ಟರೆ ಬೇಡವೆನ್ನಕೂಡದು. ತೆಗೆದುಕೊಳ ಬೇಕು" ಎಂದು ಹೇಳಿದ.

ಆಗ ಅವು ತೆಗೆದುಕೊಂಡು ಗಳಿಗೆ ನಿಂತಿದ್ದು ಹೊರಗೆ ಓಡಿಹೋದವು.

ಅದೇ ಸಮಯದಲ್ಲಿ ಗೃಹಸ್ವಾಮಿನಿಯಾದ ಹೆಂಗಸು ಬಂದು ಊಟಕ್ಕೆ ಕರೆದಳು.

ಪ್ರಮಿಳೆ ಮಾಧುವಿನ ಮುಖ ನೋಡಿದಳು.

ಅವನು "ಹುಂ. ಏಳು. ಬಚ್ಚಲುಮನೆಗೆ ಹೋಗಿ ಕೈಕಾಲು ತೊಳೆದು ಕೋ" ಎಂದ.

ಮರುಮಾತನಾಡದೇ ಕೈಕಾಲು ತೊಳೆದುಕೊಂಡು ಬಂದಳು. ಅಡಿಗೆ ಮನೆಯಲ್ಲಿ ಎರಡು ಮುತ್ತುಗದೆಲೆಗಳನ್ನು ಹಾಕಿ ಸಣ್ಣ ಚಾಪೆಗಳನ್ನು ಹಾಕಿತ್ತು. ಅದರಲ್ಲಿ ಒಂದರ ಮುಂದೆ ಕುಳಿತುಕೊಂಡಳು.

"ಯಾಕೆ. ನಿಮಗೂ ಇನ್ನೂ ಊಟವಿಲ್ಲವೇ?"

"ಇಲ್ಲ. ನೀನು ಬರಲಿ ಎಂದೇ ಕಾದಿದ್ದೆ."

ಮನೆಯಾಕೆ ಎರಡು ಎಲೆಗಳಿಗೂ ನೆಲ್ಲಿಕಾಯಿ ಉಪ್ಪಿನಕಾಯಿ ಬಡಿಸಿ ಅನ್ನವಿಟ್ಟರು. ಅನಂತರ ದಂಟಿನ ಹುಳಿಸಾರು ಬಡಿಸಿದರು.

ಮಾಧವನಿಗೆ ಆ ಮನೆಯ ಊಟವು ಅಭ್ಯಾಸವಾಗಿತ್ತು. ಅವನು ಧಾರಾಳದಿಂದ ಊಟಮಾಡತೊಡಗಿದ. ಪ್ರಮಿಳೆಗೆ ಹೊಸ ಜಾಗ. ಸಂಕೋಚವಾಗುತಿತ್ತು. ಊಟ ಮಾಡಲೋ ಬೇಡವೋ ಎಂಬಂತೆ ಸ್ವಲ್ಪ ಸ್ವಲ್ಪವೇ ತೆಗೆದು ಬಾಯಲ್ಲಿಟ್ಟುಕೊಳ್ಳತೊಡಗಿದಳು.

ಬಡಿಸಿದ ಹೆಂಗಸು "ಸಂಕೋಚ ಪಡಬೇಡವಮ್ಮ. ಊಟಮಾಡು. ಬಡವರ ಮನೆಯ ಅಡಿಗೆ" ಎಂದು ಉಪಚಾರ ಹೇಳಿದಳು.

ಮಾಡಿದ್ದ ಅಡಿಗೆ ಅನ್ನ ಸಾರು ಇವೆರಡೇ. ಆದರೂ ಅದನ್ನೇ ವಿಶ್ವಾಸದಿಂದ ಬಡಿಸುತ್ತಾ ಆಕೆಯು ಹೇಳಿದರು.

"ನಿನ್ನನ್ನು ನೋಡಿದುದು ಈಹೊತ್ತೇನಮ್ಮ. ಆದರೆ ನಿನ್ನ ವಿಷಯವನ್ನು ಎಷ್ಟೋ ಕೇಳಿದ್ದೇನೆ. ಮಾಧು ನಿನ್ನನ್ನು ನೆನೆಸಿಕೊಳ್ಳದ ದಿನವೇ ಇಲ್ಲ. ನೀನು ಈ ದಿನ ಬರುತ್ತೀ, ಏನಾದರೂ ವಿಶೇಷವಾದ ಅಡಿಗೆಯನ್ನು ಮಾಡೋಣ ಎಂದುಕೊಂಡಿದ್ದೆ. ಆದರೆ ಬರುವುದು ಸಂದೇಹವೆಂದ."

"ನನಗಾಗಿ ಹೆಚ್ಚಾಗಿ ಏನೂ ಬೇಡ. ಅಷ್ಟಕ್ಕೂ ಈ ಹುಳಿ ಏನಾಗಿದೆ. ಅಮೃತವಿದ್ದ ಹಾಗಿದೆ."

"ಎಂತಹ ಅಮೃತವೋ. ಸುಮ್ಮನಿರಮ್ಮ."

ಆ ಮೇಲೆ ಪುನಃ ಅನ್ನ ಹಾಕಿ ಮಜ್ಜಿಗೆ ಬಡಿಸಿದರು. ಇಬ್ಬರೂ ಊಟ ಮುಗಿಸಿಕೊಂಡು ಎದ್ದು ಹೊರಗೆ ಬಂದು ಕುಳಿತುಕೊಂಡರು.

ಮಾಧವನಿಗೆ ವರಾಂಡದಲ್ಲಿದ್ದ ಬೀದಿಯ ಕೋಣೆಯನ್ನು ಬಿಟ್ಟುಕೊಟ್ಟಿದ್ದರು. ಅಲ್ಲಿ ಕುಳಿತುಕೊಂಡು ಮಾತನಾಡುತ್ತಾ ಮಾಧು ಆ ಮನೆಯಾಕೆಯ ವಿಷಯವೆಲ್ಲವನ್ನೂ ಹೇಳಿದ.

ಮನೆಯಾಕೆಯ ಹೆಸರು ಗಂಗಮ್ಮ. ಯಾವುದೋ ಸಂಬಂಧದಲ್ಲಿ ಅವಳು ಮಾಧವನಿಗೆ ದೂರದ ಅಕ್ಕನಾಗಬೇಕು. ಒಂದು ಕಾಲದಲ್ಲಿ ಆಕೆಯ ಗಂಡ ಅದೇ ಊರಿನಲ್ಲಿ ಸಣ್ಣದೊಂದು ಹೋಟಲು ಇಟ್ಟುಕೊಂಡಿದ್ದ. ಅವನು ಹೋದ ಮೇಲೆಯೂ ಯಾರೋ ಅವಳ ಬಂಧುಗಳು ಹೋಟಲು ನಡೆಯಿಸು

ತ್ತಿದ್ದರು. ಅಲ್ಪಸ್ವಲ್ಪ ಹಣ ಬಂದು ಧಾರಾಳವಾಗಿ ಜೀವನ ಮಾಡುತ್ತಿದ್ದಳು ಗಂಗಮ್ಮನಿಗೆ ಶಾರದ ಅಂತ ಒಬ್ಬ ಮಗಳು. ಹೋಟೆಲು ಮಾರಿ ಮಗಳಿಗೆ ಮದುವೆ ಮಾಡಿದಳು. ಅನಂತರ ಗಂಗಮ್ಮನಿಗೆ ತಿನ್ನುವುದಕ್ಕೇ ಇರಲಿಲ್ಲ. ಹೋಟಲು ಕೊಂಡುಕೊಂಡವನು ಅವಳಿಗೆ ದಯೆ ಬಂದು ಅವಳು ಬದುಕಿರುವವರೆವಿಗೂ ತಿಂಗಳೊಂದಕ್ಕೆ ಹದಿನೈದು ರೂಪಾಯಿ ಕೊಡುವುದಾಗಿ ಹೇಳಿ ಕೊಟ್ಟುಕೊಂಡು ಬರುತ್ತಿದ್ದಾನೆ. ಐದು ರೂಪಾಯಿ ಈ ಮನೆಗೆ ಬಾಡಿಗೆ ಕೊಟ್ಟು ಹತ್ತು ರೂಪಾಯಿನಲ್ಲಿ ಜೀವನ ಮಾಡುತ್ತಿದ್ದಳು. ಇತ್ತೀಚೆಗೆ ಹಳ್ಳಿಪಳ್ಳಿಗಳಲ್ಲಿಯೂ ಮನೆಯ ಬಾಡಿಗೆಯು ಜಾಸ್ತಿಯಾಗಿದೆ. ಈಗ ಈ ಮನೆಗೆ ಹತ್ತು ರೂಪಾಯಿ ಕೊಡುವವರಿದ್ದಾರೆ. ಮನೆಯ ಮಾಲೀಕ ಬಾಡಿಗೆ ಹೆಚ್ಚು ಕೊಡಬೇಕೆಂದೂ ಇಲ್ಲದಿದ್ದರೆ ಮನೆಬಿಟ್ಟು ಹೋಗಬೇಕೆಂದೂ ಹೇಳಿದ. ಆದರಿಂದ ಎಂಟು ರೂಪಾಯಿ ಬಾಡಿಗೆ ಕೊಡುತ್ತಿದ್ದಾಳೆ. ಕಷ್ಟದಲ್ಲಿ ಮತ್ತೊಂದು ಕಷ್ಟವೂ ಕೂಡಿ ಬಂದಿದೆ. ಶಾರದೆಗೂ ಅವಳ ಗಂಡನಿಗೂ ಸರಿ ಹೋಗದೇ ಅವಳು ತವರುಮನೆಯಲ್ಲಿಯೇ ಬಂದಿದ್ದಾಳೆ. ಅಲ್ಲಿ [illegible] ಎರಡು ಮಕ್ಕಳು ಅವಳದೇ. ಶಾರದ ಹೆಂಗಸರು ಮಕ್ಕಳ ಬಟ್ಟೆಗಳನ್ನು ಹೊಲಿದು ಅಲ್ಪವೋ ಸ್ವಲ್ಪವೋ ಸಂಪಾದನೆ ಮಾಡುತ್ತಿದ್ದಾಳೆ. ತಾಯಿ ಮಕ್ಕಳು ಹೇಗೆಯೋ ಕಷ್ಟದಿಂದ ಜೀವನ ಮಾಡುತ್ತಿದ್ದಾರೆ.

ಮಾತನಾಡುತ್ತಾ ಮಾಧುವಿಗೆ ನಿದ್ದೆ ಬಂದುಬಿಟ್ಟಿತು. ಅವನು ಮಲಗಿ ಕೊಂಡುಬಿಟ್ಟ.

ಪ್ರಮಿಳೆಗೆ ಏನು ಮಾಡಬೇಕೆಂಬುದು ತೋರದೇ ಕುಳಿತುಕೊಂಡು ಯಾವುದೋ ಒಂದು ಪುಸ್ತಕ ನೋಡುತ್ತಿದ್ದಳು. ಅಷ್ಟರೊತ್ತಿಗೆ ಯಾರೋ ಹೆಂಗಸು ಮನೆಯೊಳಗೆ ಬಂದಂತಾಯಿತು. ಅವಳ ಹಿಂದೆಯೇ ಹೊರಗಡೆ ಆಡುತ್ತಿದ್ದ ಮಕ್ಕಳೂ ಬಂದುವು. ಅವಳೇ ಶಾರದೆ ಇರಬೇಕೆಂದು ಪ್ರಮಿಳೆಯ ಮನಸ್ಸಿಗೆ ಬಂದಿತು. ಮನೆಯ ಮಗಳು ಬಂದರೆ ಕಣ್ಣಾದ ತಾನು ಹೋಗಿ ಅವಳನ್ನು ಮಾತನಾಡಿಸಬೇಕೆಂದು ತೋರಿತು. ಆದರೆ ಪರಿಚಯವಿಲ್ಲದೇ ಹೇಗೆ ಮಾತನಾಡುವುದೆಂದು ಸಂಕೋಚವಾಗಿ ಸುಮ್ಮನಾದಳು.

ಆವರೆ ಒಳಗೆ ಹೋದ ಶಾರದೇ ಕೈಯಲ್ಲಿದ್ದ ಹ್ಯಾಂಡ್‌ಬ್ಯಾಗ್ ಒಳ ಗಿಟ್ಟು ಬಂದು "ನೀವೇ ಪ್ರಮಿಳೆಯವರಲ್ಲವೇ?" ಎಂದು ಮಾತನಾಡಿಸಿ ಕೊಂಡು ಬಂದಳು.

ಹೆಣ್ಣು ಹೆಣ್ಣನ್ನು ಮಾತನಾಡಿಸಿದ ಮೇಲೆ ಇನ್ನೇನಿದೆ?

ಪ್ರಮಿಳೆಯು ಎದ್ದು ಒಳಗೆ ಹೋದಳು. ಇಬ್ಬರೂ ಕುಳಿತು ಮಾತ ನಾಡತೊಡಗಿದರು. ಸ್ವಲ್ಪಹೊತ್ತಿನಲ್ಲಿಯೇ ಬಹಳ ದಿನಗಳ ಪರಿಚಯಸ್ಥರಂ ತಾದರು.

ಶಾರದೆಗೆ ಪ್ರಮಿಳೆಯ ವಿಷಯ ಕೇಳಿ ತಿಳಿದುಕೊಳ್ಳುವುದೇನೂ ಇರ ಲಿಲ್ಲ. ಎಲ್ಲವೂ ಅವಳಿಗೆ ಗೊತ್ತೇ ಇತ್ತು. ಆದರೂ ಒಂದೊಂದಾಗಿ ಪ್ರಶ್ನೆ ಗಳನ್ನು ಕೇಳಿ ಖಚಿತಮಾಡಿಕೊಂಡಳು. ಹಳೆಯ ವಿಷಯಗಳೆಲ್ಲವೂ ಮುಗಿದು ಮುಂದಿನ ಮಾತು ಬಂತು.

"ಅಂತೂ ಈ ನೆಪವಲ್ಲಿಯಾದರೂ ಬಂದುದು ಸಂತೋಷ. ನಿಮ್ಮಂತಹ ವರು ಬಡವರಾದ ನಮ್ಮ ಮನೆಗೆ ಬರುವುದು ಎಲ್ಲಿಯಾದರೂ ಉಂಟೆ?"

"ನಾವೂ ಬಡವರೇ! ನಮ್ಮ ಶ್ರೀಮಂತಿಕೆ ಏನು-ಕೊಳ್ಳೇ ಹೋಗು ತ್ತಿರುವುದು"

ಹಾಗೆಯೇ ಮಾತನಾಡುತ್ತ ಶಾರದೆಯು "ನಿಮ್ಮ ಮೇಷ್ಟರು ಓದುವು ದಕ್ಕೆ ಕಾಶಿಗೆ ಹೋಗಬೇಕೆಂದಿದ್ದಾರೆ. ದುಡ್ಡಿಗೆ ಕಾಗದ ಬರೆದಿದ್ದರಂತೆ. ಊರಿನಿಂದ ದುಡ್ಡು ಬರುವುದನ್ನೆ ಕಾಯುತ್ತಿದ್ದಾರೆ" ಎಂದು ಹೇಳಿದಳು.

ಮಾಧು ಕಾಶಿಗೆ ಹೋಗುತ್ತಾನೆಂಬ ವಿಷಯ ಪ್ರಮಿಳೆಗೆ ಗೊತ್ತಿತ್ತು, ಆದರೆ ಅವನು ಬಹಳ ಕ್ಷಿಪ್ರದಲ್ಲಿಯೇ ಹೋಗುತ್ತಾನೆಂದೂ ಅವನು ಹೋಗು ವುದಕ್ಕೆ ನಿದಾನವಾಗಿರುವುದು ಊರಿನಿಂದ ಹಣ ಬರದೇ ಇರುವುದೇ ಎಂದೂ ಅವಳಿಗೆ ಗೊತ್ತಿರಲಿಲ್ಲ.

"ಹೌದು. ಅದನ್ನು ಬರೆದಿದ್ದರು. ಆದ್ದರಿಂದಲೇ ಇಲ್ಲಿಳಿದು ಎರಡು ದಿನ ಇದ್ದುಕೊಂಡು ಹೋಗೋಣವೆಂದುಕೊಂಡು ಬಂದೆ"

ಪ್ರಮಿಳೆ ಆ ಮಾತು ಹೇಳುವುದಂತೂ ಹೇಳಿದಳು. ಆದರೆ ಮರುಕ್ಷಣ ದಲ್ಲಿಯೇ ಅವಳಿಗೆ ಮತ್ತೊಂದು ಯೋಚನೆ ಹೊಳೆಯಿತು. ತಾನು ತಿವಮೊ

ಗ್ಗಗೆ ಹೋಗುವ ಯೋಚನೆಯಿರಲಿಲ್ಲ. ಕಾಶಿಗೇ ಹೊರಟು ನಿಂತುಬಿಟ್ಟಿದ್ದಳು. ಮಾಧುವಿನ ಜೊತೆಯಲ್ಲಿ ತಾನು ಕಾಶಿಗೆ ಹೊರಡುನೆನೆಂದರೆ ಶಾರದೆಯು ಅನೇಕ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾಗುತ್ತದೆ. ಅದರಿಂದ ಸೂಕ್ಷ್ಮವಾಗಿ ಹೇಳಿದಳು.

"ಅವರು ಕಾಶಿಗೆ ಓದುವುದಕ್ಕೆ ಹೋಗುತ್ತೇನೆಂದು ಶಿವನಸಮುದ್ರದಲ್ಲಿದ್ದಾಗಲೇ ಹೇಳಿದ್ದರು. ನಾನೂ ಅವರ ಜೊತೆಯಲ್ಲಿ ಹೋಗಿ ಓದಿಕೊಂಡು ಬರಬೇಕೆಂದುಕೊಳ್ಳುತ್ತಿದ್ದೆ. ಈಗವರು ಹೊರಟು ನಿಂತಿದ್ದಾರೆಂದು ಹೇಳುತ್ತಿದ್ದೀರಿ. ಹೇಗಾಗುತ್ತದೆಯೋ ನೋಡಬೇಕು"

ಶಾರದೆಗೆ ನಗು ಬಂದಿತು. ಪ್ರಮಿಳೆ ಬಂದಿರುವುದು ಕೇವಲ ಮಾಧುವನ್ನು ನೋಡುವುದಕ್ಕಲ್ಲವೆಂದು ಅವಳು ಊಹಿಸಿದ್ದಳು. ಈಗ ಇವಳು ಕಾಶಿಗೆ ಹೊರಡಲು ತಯಾರಾಗುವುದನ್ನು ನೋಡಿ ಮೊದಲೇ ಇವರಿಬ್ಬರೂ ಈ ಯೋಚನೆ ಮಾಡಿದ್ದಾರೆಂದು ಭಾಸವಾಯಿತು. ಇವಳೂ ಓದುವುದಕ್ಕೆ ಹೋಗುವುದಿಲ್ಲ ಅವನೂ ಓದುವುದಕ್ಕೆ ಹೋಗುವುದಿಲ್ಲ. ಇಬ್ಬರೂ ಸೇರಿಕೊಂಡು ಓಡಿಹೋಗುವ ಹೊಂಚು ಹಾಕಿದ್ದಾರೆ ಎಂದುಕೊಂಡರು.

ಲೋಕ ವ್ಯವಹಾರವನ್ನೂ ತಾವು ಮಾಡುವುದರ ಮುಂದಿನ ಜವಾಬ್ದಾರಿಯನ್ನೂ ಒಂದನ್ನೂ ಅರಿಯದೇ ಮನೇ ಬಿಟ್ಟು ಓಡಿಹೋಗುವ ಈ ಹುಡುಗರನ್ನು ನೋಡಿ ಅವಳಿಗೆ ನಗುಬಂದಿತು.

ಎಷ್ಟೇ ತಡೆದುಕೊಂಡರೂ ಮುಖವಲ್ಲಿ ನಗು ಕಾಣಿಸಿಕೊಂಡಿತು.

"ಯಾಕೆ ಶಾರದಮ್ಮ. ನಗುತ್ತೀರಿ"

"ಏನೂ ಇಲ್ಲಮ್ಮ. ಸುಮ್ಮನೆ ನಗು ಬಂದಿತು. ಅಷ್ಟೆ"

"ಇಲ್ಲ. ಏನೋ ಕಾರಣದಿಂದಲೇ ನಗುತ್ತಿದ್ದೀರಿ. ನನಗೆ ಹೇಳದೇ ಮುಚ್ಚಿಡುತ್ತಿದ್ದೀರಿ"

ಪ್ರಮಿಳೆಯು ಬಲಾತ್ಕಾರದಿಂದ ಅವಳ ಬಾಯಿಮುಚ್ಚುವ ಮಾತೊಂದನ್ನು ಶಾರದೆ ಹೇಳಿದಳು.

"ನೀವು ಬಂದ ಮೇಲೆ ಕಾಶಿಗೆ ಹೊರಡುತ್ತೇವೆಂದು ಮಾಧು ಹೇಳಿ

ದ್ದರು. ಬಹುಶಃ ನೀವು ಬರುವುದಕ್ಕಾಗಿಯೇ ಅವರು ಕಾಯುತ್ತಿದ್ದಾರೆಯೋ ಏನೋ? ಹಾಗಿದ್ದರೂ ನೀವು ಕಾಶಿಗೆ ಹೋಗುತ್ತೀರೆಯೋ ಇಲ್ಲವೋ ಎಂದು ಸಂದೇಹಗ್ರಸ್ಥವಾಗಿ ಹೇಳಿದಿರಲ್ಲಾ. ಅದರಿಂದ ನನಗೆ ನಗು ಬಂದಿತು"

ಶಾರದೆ ಹೇಳಿದ ಮಾತು ಪ್ರಮಿಳಿಗೆ ನಿಜವಾಗಿಯೇ ಕಂಡಿತು. ಮಾಧು ಕಾಶಿಗೆ ಹೋಗಲು ತನ್ನ ಬರುವಿಕೆಯನ್ನೇ ಎದುರು ನೋಡುತ್ತಿದ್ದಾನೆಂಬ ವಿಷಯ ಅವಳ ಮನಸ್ಸಿಗೆ ಎಷ್ಟೋ ಆನಂದವನ್ನು ಉಂಟುಮಾಡಿತು.

ಹೀಗೇ ಶಾರದೆಯ ವಿಷಯವೂ ಬಂದಿತು. ಅವಳು ತನ್ನ ಕಷ್ಟಪರಂಪರೆಗಳೆಲ್ಲವನ್ನೂ ಹೇಳಿಕೊಂಡಳು.

ಶಾರದೆಯ ಗಂಡನ ಹೆಸರು ಮಂಜನಾಥ ಎಂದು. ಅವನು ಮಂಗಳೂರು ಕಡೆಯವನೇ. ಸಣ್ಣವಯಸ್ಸಿನಲ್ಲಿಯೇ ಅರಸೀಕೆರೆಯಲ್ಲಿ ತನ್ನ ಬಂಧುಗಳೊಬ್ಬರ ಹೋಟಲಿನಲ್ಲಿ ಹೋಗಿ ಕೆಲಸಕ್ಕೆ ಸೇರಿದ. ಚೆನ್ನಾಗಿ ಸಂಪಾದನೆಯನ್ನು ಮಾಡಿಟ್ಟುಕೊಂಡಿದ್ದ. ಗಂಗಮ್ಮ ಅನುರೂಪನಾದ ವರನೆಂದು ಅವನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದರು. ಅನಂತರ ಶಾರದೆ ಗಂಡನ ಮನೆಗೆ ಹೋದಳು. ಕೆಲವು ದಿನ ಅವರ ದಾಂಪತ್ಯ ಜೀವನ ಸುಖಕರವಾಗಿಯೇ ಸಾಗಿತು. ಮದುವೆಯಾದ ಮೇಲೆ ಕಂಡವರ ಹೋಟಲಿನಲ್ಲಿ ಊಳಿಗಮಾಡುವುದು ಅವನಿಗೆ ಸರಿಕಾಣಲಿಲ್ಲ. ಚಿಕ್ಕನಾಯಕನ ಹಳ್ಳಿಯಲ್ಲಿ ಸ್ವಂತ ಹೋಟಲೊಂದು ಆರಂಭಮಾಡಿದ. ಸುಮಾರಾಗಿ ನಡೆಯುತ್ತಲೂ ಇದ್ದಿತು. ಆಗಲೇ ದೊಡ್ಡಮಗಳು ಕಲ್ಯಾಣಿ ಹುಟ್ಟಿದ್ದು. ಹೋಟಲು ಸ್ವಲ್ಪ ಸುಮಾರಾಗಿ ನಡೆಯಲು ಆರಂಭವಾದ ಕೂಡಲೇ ಶಾರದೆಯ ಗಂಡನಿಗೆ ದುಡ್ಡು ಹಾಳಾಗುವ ಹವ್ಯಾಸಗಳೆಲ್ಲವೂ ಮೊದಲಾದುವು. ಊರಿನಲ್ಲಿ ವಿಪರೀತ ಸಾಲಸೋಲಗಳಾದವು. ಹೆಂಡತಿಯನ್ನು ತಂದು ತವರು ಮನೆಯಲ್ಲಿ ಬಿಟ್ಟು ಬೆಂಗಳೂರಿಗೆ ಓಡಿಹೋದ. ಕೆಲಸ ಸಂಪಾದಿಸುವುದು ಅವನಿಗೆ ಕಷ್ಟವಾಗಲಿಲ್ಲ. ಯಾರೋ ಬೊಂಬಾಯಿನವರ, ಹೋಟಲಿನಲ್ಲಿ ಸರ್ವರ್ ಆಗಿದ್ದು ಕೆಲಸಮಾಡುತ್ತಿದ್ದ. ಹೆಂಡತಿ ಮಕ್ಕಳನ್ನು ಪೂರ್ಣವಾಗಿ ಮರತೇಬಿಟ್ಟ. ಶಾರದೇ ಹೇಗೋ ರೈಲು ಖರ್ಚಿಗೆ ಸರಿಮಾಡಿಕೊಂಡು

ಬೆಂಗಳೂರಿಗೆ ಹೋಗಿ ಗಂಡನನ್ನು ಹಿಡಿದಳು. ಎಲ್ಲೋ ಒಂದು ಮನೆಮಾಡಿ ಹೆಂಡತಿ ಮಕ್ಕಳನ್ನು ಇಟ್ಟುಕೊಂಡು ಸಂಸಾರಮಾಡುತ್ತಿದ್ದ. ಆದರೆ ಅದು ಸಂಸಾರಮಾಡುವ ತರಹನಲ್ಲ. ಮಾಗಡೀ ರೋಡಿನಲ್ಲಿ ಒಂದು ರೂಂ ತೆಗೆದುಕೊಂಡಿದ್ದರು. ಅದೇ ಅವರ ಮನೆ. ಮಂಜುನಾಥ ಮನೆಗೆ ಬಂದರೆ ಬರುತ್ತಿದ್ದ. ಇಲ್ಲದಿದ್ದರೆ ಇಲ್ಲ. ಹೋಟಲಿನಲ್ಲಿ ಅವನ ಊಟ ತಿಂಡಿಗಳೆಲ್ಲವೂ ಆಗಿಹೋಗುತ್ತಿದ್ದವು. ಹೆಂಡತಿ ಮಕ್ಕಳ ಗತಿಯೇನು ಎಂದು ಅವನು ಯಾವೊತ್ತೂ ಆಲೋಚಿಸುತ್ತಿರಲಿಲ್ಲ. ಯಾವಾಗಲಾದರೊಮ್ಮೆ ಜ್ಞಾಪಕ ಬಂದರೆ ಮನೆಗೆ ಬರುತ್ತಿದ್ದ. ಮನಸ್ಸು ಸರಿಯಾಗಿದ್ದರೆ ಕೈಯಲ್ಲಿ ಕಾಸಿದ್ದರೆ ಏನಾದರೂ ಸ್ವಲ್ಪ ಕೊಡುತ್ತಿದ್ದ. ಇಲ್ಲದಿದ್ದರೆ ಇಲ್ಲವೇ ಇಲ್ಲ. ಅವಳಿಗೂ ಅವರಮ್ಮ ಐನೂರು ಆರುನೂರು ರೂಪಾಯಿಗಳಷ್ಟು ಒಡವೆಗಳನ್ನು ಇಟ್ಟಿದ್ದರು. ಅವೆಲ್ಲವೂ ಕರಗಿ ಬರಿಗೈಯಾಯಿತು.

ಯಾವುದೋ ಒಂದು ಸಮಯದಲ್ಲಿ ಮಂಜುನಾಥ ಆ ಹೋಟಲನ್ನು ಬಿಟ್ಟು ಎಲ್ಲಿಗೋ ಓಡಿಹೋದ. ಶಾರದೆ ಮನೆಯಲ್ಲಿದ್ದ ಪಾತ್ರೆ ಪಡಗಗಳನ್ನು ಮಾರಿ ರೈಲುಚಾರ್ಜು ಮಾಡಿಕೊಂಡು ಬಾಣಸಂದ್ರಕ್ಕೆ ಬಂದು ಸೇರಿದಳು.

ಇಲ್ಲಿ ಬಂದ ಮೇಲೆ ಏನು ಮಾಡುವುದು ? ಬಾಣಸಂದ್ರದಲ್ಲಿ ರುಕ್ಮಿಣೀ ಬಾಯಿ ಎಂಬ ಮುದುಕಿಯೊಬ್ಬಳಿದ್ದಾಳೆ. ಅವಳು ದರ್ಜಿಯವಳೇ. ಕಷ್ಟಪಟ್ಟು ಅವಳ ಬಳಿ ಟೈಲರಿಂಗ್ ಕಲಿತುಕೊಂಡಳು. ಕಡೆಯ ಜೀವನಾಧಾರವಾಗಿ ತಾಯಿಯ ಕೊರಳಲ್ಲಿ ಒಂದು ಸರ, ಕೈಯಲ್ಲಿ ಎರಡು ಜೊತೆ ಬಳೆಗಳಿದ್ದವು. ಅವನ್ನು ಮಾರಿ ಒಂದು ಮಿಷಿನ್ ತೆಗೆದುಕೊಂಡಿದ್ದಾರೆ. ಶಾರದೆ ಈಗ ಹೆಂಗಸರು ಮಕ್ಕಳ ಬಟ್ಟೆಗಳನ್ನು ಹೊಲಿದು ಅಲ್ಪವೋ ಸ್ವಲ್ಪವೋ ಸಂಪಾದನೆ ಮಾಡುತ್ತಿದ್ದಾಳೆ.

ಶಾರದೆಯ ಈ ಕತೆಯನ್ನು ಕೇಳಿ ಪ್ರಮಿಳೆಗೆ ದುಃಖವು ಮರುಕಳಿಸಿ ಬಂದಿತು.

"ಹೋಗಲಿ. ಕಡೆಗೂ ನಿಮ್ಮ ಯಜಮಾನರು ಎಲ್ಲಿದ್ದಾರೆಂಬುದು ಗೊತ್ತೇ ಆಗಲಿಲ್ಲವೋ ?"

"ಆಗಲಿಲ್ಲವಮ್ಮ. ಆಗಿದ್ದರೆ ನಮ್ಮಮ್ಮನಿಗೆ ಭಾರವಾಗಿ ಇಲ್ಲಿ ಕುಳಿತು ಕೊಳ್ಳುತ್ತಿದ್ದೆನೇ ? ಹೋಗಿ ಕಷ್ಟವೋ ಸುಖವೋ ಅವರೊಂದಿಗೆ ಸಂಸಾರ ಮಾಡುತ್ತಿದ್ದೆ"

"ಯಾವ ಸುಖಕ್ಕಾಗಿ ಅಂತಹವರೊಂದಿಗೆ ಹೋಗಿ ಸಂಸಾರ ಮಾಡ ಬೇಕು, ಹೇಳಿ"

"ಹಾಗಲ್ಲ. ಈ ಪ್ರಪಂಚದಲ್ಲಿ ಕೆಲವರು ಕಷ್ಟಪಡುವುದಕ್ಕಾಗಿಯೇ ಹುಟ್ಟಿದವರು. ಯಾವಾಗಲಾದರೊಮ್ಮೆ ಇನ್ನೇನು ಪರವಾಯಿಲ್ಲ ಸುಖವಾ ಗಿರುತ್ತೇವೆ-ಎಂದುಕೊಳ್ಳುತ್ತೇವೆ. ಅದು ಕೇವಲ ಕ್ಷಣಿಕ ಸ್ವಪ್ನ. ನಮ್ಮಂ ತಹವರು ಸುಖಪಡುವುದನ್ನು ಕೇಳಿಕೊಂಡು ಬಂದಿಲ್ಲ. ನಮ್ಮ ಜೀವನವೆ ಲ್ಲವೂ ಕಷ್ಟವೇ. ಅದಕ್ಕೆ ಹಿಂದೆಮುಂದೆ ನೋಡಿದರೆ ಆಗುತ್ತದೆಯೇ ?"

ಆ ಮಾತಿಗೆ ಏನು ಉತ್ತರ ಹೇಳಬೇಕೋ ಪ್ರಮಿಳೆಗೆ ಗೊತ್ತಾಗಲಿಲ್ಲ.

"ಯಾಕಮ್ಮ. ನಾನು ಹೇಳುವುದು ನಿಮಗೆ ನ್ಯಾಯವಾಗಿ ಕಂಡುಬರು ವುದಿಲ್ಲವೆ ?"

"ಇಲ್ಲ. ನಿಮ್ಮ ಮಾತನ್ನು ನಾನು ಒಪ್ಪುವುದಿಲ್ಲ. ನನಗೇನಾದರೂ ಗಂಡನಿದ್ದು ಅವನು ನಿಮ್ಮ ಗಂಡನಂತಾಗಿದ್ದರೆ ನಾನು ಅವನ ಮುಖ ಸಹ ನೋಡುತ್ತಿರಲಿಲ್ಲ"

ಶಾರದೆಯು ನಕ್ಕು "ಪ್ರಮಿಳೆ. ನಿಮಗೆ ಅನುಭವವಿಲ್ಲ. ನೀವು ಹೀಗೆ ಮಾತನಾಡುತ್ತೀರಿ. ನಿಮಗೆ ಖಂಡಿತವಾಗಿ ನನಗೆ ಬಂದ ಗತಿ ಬರದಿರಲಿ. ಬಾಳಿಯ ಎಳೆಸುಳಿಯಂತೆ ನಿಮ್ಮ ಜೀವನ ಸುಖಮಯವಾಗಿರಲಿ. ಆದರೆ ನಾನು ಹೇಳುತ್ತೇನೆ, ಕೇಳಿರಿ. ಮದುವೆಯಾಗುವ ಹೆಂಗಸಿನ ಮನಸ್ಸು ಬೇರೇ. ಮದುವೆಯಾದ ಹೆಂಗಸಿನ ಮನಸ್ಸು ಬೇರೆ. ಮದುವೆಯಾಗದ ಹೆಣ್ಣು ತನ್ನ ಗಂಡ ಹೀಗೆ ಹೀಗೆಯೇ ಇರಬೇಕು-ಎಂದುಕೊಳ್ಳುತ್ತಾಳೆ. ಹಾಗೆಯೇ ಅವನನ್ನು ಇಡುತ್ತೇನೆ ಎಂದುಕೊಳ್ಳುತ್ತಾಳೆ. ಆದರೆ ಮದುವೆಯಾದ ಹೆಂಗಸು ಹಾಗಲ್ಲ. ತನ್ನ ಗಂಡ ಹೇಗಿದ್ದರೂ ಅವನನ್ನು ಅನುಸರಿಸಿಕೊಂಡೇ ಹೋಗುತ್ತಾಳೆ. ಅವಳಿಗೆ ಅವಳ ಗಂಡ ಅವನ ಸಾನ್ನಿಧ್ಯಗಳು ಮುಖ್ಯ. ನಿಕ್ಕುವೆಲ್ಲವೂ ಆಮೇಲೆ" ಎಂದಳು.

"ನೀವು ಹೇಳುವುದು ಯಾವುದೋ ಪೂರ್ವಕಾಲದ ಹೆಂಗಸರ ಮಾತು. ಆದರೆ ಈ ಯುಗದಲ್ಲಿ ಹೆಂಗಸು ಎಚ್ಚೆತ್ತುಕೊಂಡಿದ್ದಾಳೆ. ತಾನೂ ಮನುಷ್ಯಳು, ತಾನೂ ಸುಖವಾಗಿರಬೇಕು ಎಂಬುದು ಅವಳ ಮನಸ್ಸಿಗೆ ಬಂದಿದ್ದಾಗಿದೆ. ಗಂಡಸಿನ ದಾಸಿಯಾಗಿರಲು ಈಗಿನ ಕಾಲದ ಹೆಂಗಸು ಒಪ್ಪುವುದಿಲ್ಲ"

"ಅದೆಲ್ಲಾ ಭ್ರಾಂತಿ, ಪ್ರಮಿಳಾ. ಹೆಂಗಸು ಯಾವ ಕಾಲದವಳಾದರೂ ಒಂದೇ"

ಗಂಗಮ್ಮ ಒಳಗಡೇ ಟೀ ಕಾಯಿಸುತ್ತಿದ್ದರು. ಒಲೆಯನು ಬೀಸುತ್ತಾ ಹೊರಗೆ ತಮ್ಮ ಮಗಳಿಗೂ ಪ್ರಮಿಳೆಗೂ ನಡೆಯುತ್ತಿದ್ದ ಸಂಭಾಷಣೆ ಕೇಳುತ್ತಿದ್ದರು. ಕಾದ ನೀರನ್ನು ಪಾತ್ರೆಯಲ್ಲಿದ್ದ ಟೀ ಸೊಪ್ಪಿನ ಮೇಲೆ ಹಾಕಿ ಹೊರಗೆ ಬಂದು ಹೇಳಿದರು.

"ಏ. ಶಾರದ. ಏನೂ ಅರಿಯದ ಆ ಮಗುವಿನ ತಲೆಯಲ್ಲಿ ನಿನ್ನ ವೇದಾಂತವೆಲ್ಲಾ ಯಾಕೆ ತುಂಬುತ್ತೀ. ಅದೆಲ್ಲಾ ನಿನಗೇ ಇರಲಿ. ಸುಮ್ಮನಿರು"

"ನಾನೇನು ಹೇಳುತ್ತಿದ್ದೇನಮ್ಮ. ಮಾತಿಗೆ ಮಾತು ಬಂದು ಏನೋ ಹೇಳಿದೆ. ನಾನೇನೂ ತಲೆಯಲ್ಲಿ ತುಂಬುತ್ತಿಲ್ಲ"

"ನಿನ್ನ ಮಾತು ಕೇಳಿ ಕೇಳಿ ನನ್ನ ತಲೆಯೇ ಚಿಟ್ಟುಹಿಡಿದು ಹೋಗಿದೆ. ಇನ್ನು ಆ ಹುಡುಗಿಯ ಗತಿಯೇನು? ಹೋಗು. ಟೀ ಆಗಿದೆ ಎಂದು ಮಾಧುವನ್ನು ಎಬ್ಬಿಸು. ಆರಿಹೋಗುತ್ತದೆ"

ಶಾರದೇ ಹೋಗಿ ಮಾಧುವನ್ನು ಎಬ್ಬಿಸಿಕೊಂಡು ಬಂದಳು. ಎಲ್ಲರೂ ಕುಳಿತು ಟೀ ಕುಡಿದರು. ಶಾರದೇ ಮಧ್ಯಾನ್ಹ ಮನೆಗೆ ತಂದ ಬಟ್ಟೆಗಳನ್ನು ಕತ್ತರಿಸುತ್ತಾ ಪ್ರಮಿಳೆಯೊಂದಿಗೆ ಮಾತನಾಡುತ್ತಿದ್ದಳು. ಟೀ ಕುಡಿದನಂತರ ಟಕಟಕನೆ ಮಿಷಿ‌ನ್ ತಿರುಗಿಸುತ್ತಾ ಹೊಲೆಯಲು ಕುಳಿತುಕೊಂಡಳು. ಪ್ರಮಿಳೆ ಬೀದೀರೂಮಿಗೆ ಹೋಗಿ ಮಾಧುವಿನೊಡನೆ ಮಾತನಾಡುತ್ತಾ ಕುಳಿತುಕೊಂಡಳು.

ಸಂಜೆ ಸೂರ್ಯಾಸ್ತಮಾನವಾಗಿ ತಂಪಾದ ಮೇಲೆ ಪ್ರಮಿಳೆ ಹೇಳಿದಳು.

"ಮೇಸ್ಟರೇ ! ಹೀಗೇ ಹೋಗಿ ಸುತ್ತಾಡಿಕೊಂಡು ಬರೋಣ ಬನ್ನಿ ನಾನು ನಿಮ್ಮೊಂದಿಗೆ ಎಷ್ಟೋ ಮಾತನಾಡಬೇಕಾಗಿದೆ"

ಮಾಧುವಿಗೂ ಮಧ್ಯಾನ್ಹದಿಂದ ಮನೆಯಲ್ಲಿ ಕುಳಿತು ಕುಳಿತು ಬೇಜಾರಾಗಿತ್ತು. ಅವನು ಒಪ್ಪಿಕೊಂಡ. ಹೋಗಿ ಮುಖಗಳನ್ನು ತೊಳೆದುಕೊಂಡರು. ಮಾಧು ಗಳಿಗೆಯಲ್ಲಿಯೇ ಒಗೆದ ಷರಾಯಿ ಜುಬ್ಬಾಗಳನ್ನು ಹಾಕಿಕೊಂಡು ಸಿದ್ಧವಾಗಿ ಬಿಟ್ಟ. ಪ್ರಮಿಳೆಯ ಶೃಂಗಾರವು ಮುಗಿದು ಅವಳು ಹೊರಗೆ ಬರಬೇಕಾದರೆ ಕಾಲುಗಂಟೆಯ ಹೊತ್ತು ಕಾಯಬೇಕಾಯಿತು.

ಇಬ್ಬರೂ ಒಬ್ಬರ ಮುಖಗಳನ್ನು ಒಬ್ಬರು ನೋಡಿ ನಗುತ್ತಾ ಜಿಂಕೆಯ ಮರಿಗಳಂತೆ ನೆಗೆಯುತ್ತಾ ಆ ಮನೆಯನ್ನು ಬಿಟ್ಟು ಹೊರಟರು.

ಬಾಣಸಂದ್ರದ ಊರು ಬಹಳ ಸಣ್ಣದು. ಅಷ್ಟುದೂರ ನಡೆದು ಹೋಗುತ್ತಲೇ ಊರು ಮುಗಿದು ಹೋಗುತ್ತದೆ. ಅನಂತರ ವಿಶಾಲವಾದ ಬಯಲು. ಬಟಾಬಯಲು.

ಆ ಬಯಲನ್ನು ಸೇರುತ್ತಲೇ ಮಸಕು ಮಸಕಾದ ಸಂಜೆಗತ್ತಲಿನಲ್ಲಿ ಅವರ ಒಬ್ಬರ ಕೈಗಳನ್ನು ಒಬ್ಬರು ಹಿಡಿದುಕೊಂಡು ಪಂಜರದಿಂದ ತಪ್ಪಿಸಿಕೊಂಡು ಬಂದ ಜೊತೆ ಹಕ್ಕಿಗಳಂತೆ ಅಲೆದಾಡಿದರು.

ಬಯಲಿನಲ್ಲಿ ಒಣಗಿನ ಗರಿಕೆ ಹುಲ್ಲಿನ ಮೇಲೆ ಕುಳಿತು ಮಾತನಾಡತೊಡಗಿದರು. ಮಾತಿನ ಮಂಜುಳನಾದಕ್ಕೆ ತಾಳಹಾಕಿದಂತೆ ಆಗಾಗ ಕಿಲಕಿಲನೆ ನಗುತ್ತಿದ್ದರು.

"ನನಗಂತೂ ಶಿವಮೊಗ್ಗೆಗೆ ಹೋಗುವುದೂ ಬೇಡ, ಶಿವನಸಮುದ್ರಕ್ಕೂ ಹೋಗುವುದು ಬೇಡ. ಈ ಬಾಣಸಂದ್ರದಲ್ಲಿಯೇ ಇದ್ದುಬಿಡಬೇಕು—ಎಂದು ಮನಸ್ಸಾಗುತ್ತದೆ" ಎಂದಳು ಪ್ರಮಿಳೆ.

"ನನಗೂ ಹಾಗೆಯೇ, ಪ್ರಮಿಳಾ. ಶಿವನಸಮುದ್ರದಿಂದ ಬಂದ ಮೇಲೆ ನಾನು ನಕ್ಕಿದ್ದು ಈ ದಿನವೇ ? ಬೇಕಾದರೆ ವೆಂಕಟೇಶನ ಮನೆಯವರನ್ನಾದರೂ ಕೇಳು. ಗಂಗಮ್ಮನ ಮನೆಯಲ್ಲಾದರೂ ಕೇಳು"

"ಅಂದ ಹಾಗೆ ಮರತೇ ಹೋಯಿತು. ದೊಡ್ಡ ಮೇಸ್ಟರು ಎಲ್ಲಿದ್ದಾರೆ ? ಏನು ಮಾಡುತ್ತಿದ್ದಾರೆ ?"

"ಏನು ಮಾಡುವುದೇನು, ಬೆಂಗಳೂರಿನಲ್ಲಿಯೇ ಇದ್ದಾರೆ. ಪ್ರಮಿಳಾ, ಜೀವನ ಸುಖ ದುಃಖಗಳ ಸಮ್ಮಿಶ್ರವೆಂದು ಪುಸ್ತಕಗಳಲ್ಲಿ ಬರೆಯುತ್ತಾರೆ. ಅವರು ಬರೆದಿರುವುದು ಒಂದಲ್ಲ, ಇರುವುದು ಬೇರೊಂದಲ್ಲ. ನೂರುಬಾರಿ ಯೋಚನೆ ಮಾಡಿದರೂ ಅದು ನಿಜ"

"ನೀವು ಆ ಶಾರದೆಯಂತೆ ವೇದಾಂತಕ್ಕೆ ಇಳಿದ ಹಾಗೆ ಕಂಡುಬರುತ್ತದೆ"

ಮಾಧುವು ನಿರಾಶೆಯ ನಗುವನ್ನು ನಕ್ಕು "ಅವಳ ಮಾತು ಬಿಡು. ಅವಳೊಬ್ಬ ನಿರಾಶಳಾದ ಹೆಣ್ಣು. ನಾನು ಹೇಳುವುದಕ್ಕೂ ಅದಕ್ಕೂ ಸ್ವಲ್ಪವೂ ಸಂಬಂಧವಿಲ್ಲ. ಈಗ ನೋಡು. ನಮ್ಮಿಬ್ಬರಿಗೂ ಪರಿಚಯವಾಯಿತು. ಹಾಲು ಸಕ್ಕರೆಗಳಂತೆ ನಮ್ಮ ಸ್ನೇಹ ಸುಖಮಯವಾದುದು. ಆದರೆ ಅಲ್ಲಿಯೂ ಹುಳಿಹುಟ್ಟದೇ ಇರಲಿಲ್ಲ. ಅದರ ಪರಿಣಾಮವಾಗಿ ವೆಂಕಣ್ಣ ಕೆಲಸ ಬಿಟ್ಟು ಬಿಡಬೇಕಾಯಿತು" ಎಂದ.

ಆ ವೆಂಕಟೇಶ್ ಕೆಲಸ ಬಿಟ್ಟ ವಿಷಯವೆಲ್ಲಾ ಪ್ರಮಿಳೆಗೆ ಗೊತ್ತಿತ್ತು. ಆದರೂ ಅದನ್ನು ಸಮರಿಸುತ್ತಾ ಹೇಳಿದಳು.

"ಅವರೇನು ಗಂಡಸರಲ್ಲವೇ? ಒಂದುಕಡೆ ಕೆಲಸ ಬಿಟ್ಟರೆ ಮತ್ತೊಂದು ಕಡೆ ಸಿಗುತ್ತದೆ. ಅದೇನು ಮಹಾ"

"ಅದೂ ನಿಜ ಅನ್ನು. ಇನ್ನೂ ಕೆಲಸ ಸಿಕ್ಕಿಲ್ಲ ಬೆಂಗಳೂರಿನಲ್ಲಿಯೇ ಇದ್ದಾರೆ. ತಂದೆಯ ಮನೆಯಲ್ಲಿ ಊಟಮಾಡಿ ಕೊಂಡಿರುವುದು ಅವರಿಗೆ ಸರಿ ಬೀಳುವುದಿಲ್ಲ"

ಕತ್ತಲಾಗುತ್ತ ಬಂದಿತು. ರೈಲ್ವೆಸ್ಟೇಷನ್ನಿನಲ್ಲಿ ಪ್ರಕಾಶಮಾನವಾದ ವಿದ್ಯುತ್ ದೀಪಗಳು ಬೆಳಗತೊಡಗಿದವು. ಹಾಗೆಯೇ ಊರಿನ ದೀಪಗಳು ಹತ್ತಿಕೊಂಡವು. ಶ್ರೀಮಂತನ ಜೊತೆಯಲ್ಲಿರುವ ದರಿದ್ರ ಸ್ನೇಹಿತನಂತೆ ಮನೆಗಳಲ್ಲಿ ದೀಪಗಳಿದ್ದರೂ ಪ್ರಕಾಶರಹಿತವಾಗಿ ಉರಿಯುತ್ತಿದ್ದವು.

"ನೀವು ಕಾಶಿಗೆ ಹೋಗುವ ವಿಷಯ ಏನುಮಾಡುತ್ತೀರಿ ?"

"ಹೋಗಬೇಕು, ಪ್ರಮಿಳೆ. ಈ ಹಳ್ಳಿ ಕೊಂಪೆಯಲ್ಲಿ ಕುಳಿತುಕೊಂಡೇನು ಮಾಡಲಿ ? ನಮ್ಮಮ್ಮನಿಗೆ ಕಾಗದ ಬರೆದಿದ್ದೇನೆ. ಅವರಿಂದ ಹಣ ಬರುವುದನ್ನೇ ಕಾಯುತ್ತಿದ್ದೇನೆ. ಹಣ ಬರುವುದು ಸಿದಾನವಾದುದು

ಒಂದು ವಿಷಯದಲ್ಲಿ ಸಂತೋಷ. ನಿನ್ನನ್ನು ನೋಡಿ, ನಿನ್ನೊಂದಿಗೆ ಎರಡು ದಿನಗಳು ಇದ್ದುಕೊಂಡು ಹೋಗಲು ಅವಕಾಶವಾಯಿತಲ್ಲಾ"

ಪ್ರಮಿಳೆ ಮಾತನಾಡದೇ ಸುಮ್ಮನೆ ಕುಳಿತುಕೊಂಡಳು.

"ಯಾಕೆ ಪ್ರಮಿಳಾ. ನೀನೇನೂ ಮಾತನಾಡುವುದಿಲ್ಲ"

"ನಾನೇನು ಹೇಳಲಿ. ನೀವು ನಿಮ್ಮ ವಿಷಯವನ್ನೇ ಮಾತನಾಡುತ್ತಿದ್ದೀರಿ ?"

ಮಾಧು ನಕ್ಕು ಹೇಳಿದ.

"ಪ್ರಮಿಳಾ. ನೀನು ಹೇಳುವುದು ನಿಜ. ನಾನು ನನ್ನೊಬ್ಬನ ವಿಷಯ ಮಾತ್ರ ಹೇಳಿದೆ. ನಿನ್ನ ವಿಷಯವನ್ನು ಕುರಿತು ಆಲೋಚನೆ ಮಾಡಬೇಕು. ನಾನೊಬ್ಬನು ಮಾತ್ರವೇ ಅಲ್ಲ. ನಾವುಗಳಿಬ್ಬರೂ ಸೇರಿ ಮಾತನಾಡಿ ನಿರ್ಧರ ಮಾಡಬೇಕಾಗಿದೆ"

ಪ್ರಮಿಳೆಯು ವಿಸ್ಮಿತಳಾಗಿ ನೋಡುತ್ತಾ "ನೀವು ಹೇಳುವುದೊಂದೂ ನನಗೆ ಅರ್ಥವಾಗುತ್ತಿಲ್ಲ. ಇನ್ನು ನಿರ್ಧರಮಾಡಬೇಕಾದುದೇನಿದೆ? ಎಲ್ಲಾ ನಿರ್ಧಾರವಾಗಿಯೇ ಹೋಗಿದೆಯಲ್ಲಾ" ಎಂದಳು.

"ನಿರ್ಧರವಾಗಿದೆ ಪ್ರಮಿಳಾ. ಆದರೆ ಈ ವಿಷಯವಾಗಿ ಸ್ಪಷ್ಟವಾಗಿ ಹೇಳುವಂತಹ ಎರಡು ವಿಷಯಗಳಿವೆ. ಅದನ್ನು ಹೇಳುತ್ತೇನೆ. ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡ. ಯಾವಾಗಲೂ ಸ್ಪಷ್ಟವಾಗಿ ಮಾತನಾಡಿ ಬಿಡುವುದು ಒಳ್ಳೆಯದು"

ಏನು ಹೇಳುತ್ತಾನೆಯೋ ಎಂದು ಪ್ರಮಿಳೆಯು ಆಸಕ್ತಿಯಿಂದ ನೋಡಿದಳು.

"ನಾವು ಶಿವನಸಮುದ್ರದಲ್ಲಿದ್ದಾಗಿನ ಮಾತು ಬೇರೆ. ಅಲ್ಲಿ ನಮಗಿಬ್ಬರಿಗೂ ಪರಿಚಯವಾಯಿತು. ಸ್ನೇಹವಾಯಿತು. ಆ ಸ್ನೇಹ ಪ್ರೇಮದಲ್ಲಿ ಪರ್ಯಾವಸಾನವಾಯಿತು. ಅಂದಿಗೇ ಅದು ಸರಿಯಾಗಿತ್ತು. ಹಾಗೆಯೇ ಇದ್ದಿದ್ದರೆ ಸರಿಯಾಗಿರುತ್ತಿತ್ತೋ ಏನೋ. ಈಗ ಹಾಗಲ್ಲ. ನಿಮ್ಮ ತಾಯಿ ತಂದೆಗಳು ನಮ್ಮ ಮದುವೆಯನ್ನು ಒಪ್ಪಿಕೊಳ್ಳುವುದಿಲ್ಲ. ನೀನು ಅಕ್ಕನ ಮನೆಗೆ ಹೊರಟಿದ್ದವಳು. ದಾರಿಯಲ್ಲಿ ಇಳಿದುಬಿಟ್ಟಿದ್ದೀ. ಇದರಿಂದ ಪರಿ

ಸ್ಥಿತಿಗಳೆಲ್ಲವೂ ಬದಲಾವಣೆಯಾಗುತ್ತವೆ. ಈಗ ಯಾವುದೊಂದನ್ನೂ ಖಚಿತವಾಗಿ ತೀರ್ಮಾನಮಾಡಿಬಿಡಬೇಕು.

"ಏನು ತೀರ್ಮಾನ ಮಾಡಬೇಕೆನ್ನುತ್ತೀರಿ ?"

"ಅದು ಬಹಳ ಕಷ್ಟವಾದ ತೀರ್ಮಾನ, ಪ್ರಮೀಳಾ. ನಿಮ್ಮ ತಾಯಿ ತಂದೆಗಳು ನಮ್ಮ ಮದುವೆಗೆ ಒಪ್ಪುತ್ತಿಲ್ಲ. ನೀನು ಅವರೊಡನೆ ಇರಬೇಕಾದರೆ ನನ್ನನ್ನು ಪರಿತ್ಯಾಗ ಮಾಡಬೇಕಾಗುತ್ತದೆ. ನನ್ನೊಂದಿಗೆ ಇರಬೇಕಾದರೆ ಅವರನ್ನು ಬಿಡಬೇಕಾಗುತ್ತದೆ"

"ಒಪ್ಪದಿದ್ದರೆ ಅವರನ್ನು ಬಿಡಬೇಕಾಗುತ್ತದೆ. ನಿಮ್ಮೊಡನೆ ಇರುವುದಂತೂ ನಿರ್ಧರ ಮಾಡಿಬಿಟ್ಟಿದ್ದೇನೆ. ಯಾವ ಕಾರಣದಿಂದಲೇ ಆಗಲಿ ನಮ್ಮ ಪ್ರೇಮವು ಭಗ್ನವಾಗುವುದಿಲ್ಲ. ಅದು ಶಾಶ್ವತ."

"ನೀನು ಹಾಗೆ ಹೇಳುತ್ತೀ ಎಂದು ನನಗೆ ಗೊತ್ತಿತ್ತು. ಆ ನಿರ್ಧಾರವಾಗಿದೆ ಎಂಬುದನ್ನೂ ಬಲ್ಲೆ. ಇದರಿಂದ ಎಷ್ಟೇ ಕಷ್ಟ ನಿಷ್ಠುರಗಳು ಬಂದರೂ ಎದುರಿಸಲು ಸಿದ್ಧವಾಗಿದ್ದೀಯಾ – ಎಂದು."

"ಏನು ಕಷ್ಟ ನಿಷ್ಠೂರಗಳು ಬರುತ್ತವೆ – ಎನ್ನುತ್ತೀರಿ ?"

"ಈಗ ನೀನು ಶಿವಮೊಗ್ಗಾಗೆ ಹೋಗಬೇಕಾಗಿದ್ದವಳು ರೈಲಿಳಿದು ಬಂದು ಬಿಟ್ಟೆ. ಇಷ್ಟು ಹೊತ್ತಿಗಾಗಲೇ ಇದು ನಿಮ್ಮ ತಾಯಿ ತಂದೆಗಳಿಗೆ ತಿಳಿದಿರಬಹುದು. ಈಗಲೇ ತಿಳಿಯದಿದ್ದರೆ ಮುಂದಾದರೂ ತಿಳಿಯಬಹುದು. ಎರಡು ದಿನ ಎಲ್ಲಿದ್ದೆ ಎಂದು ಕೇಳುತ್ತಾರೆ ? ಆಗ ಅವರಿಗೇನು ಉತ್ತರ ಹೇಳುತ್ತೀ. ಒಂದು ವೇಳೆ ನೀನು ಅಲ್ಲಿಗೂ ಹೋಗುವುದಿಲ್ಲ. ಶಿವನ ಸಮುದ್ರಕ್ಕೂ ಹೋಗುವುದಿಲ್ಲ – ಎಂದುಕೋ. ಇಷ್ಟು ದಿನ ಸಾಕಿ ಸಲಹಿದ ಮಗಳನ್ನು ಅವರು ಹಾಗೆಯೇ ಬಿಡುವುದಿಲ್ಲ. ನೀನೆಲ್ಲಿದ್ದೀ ಎಂದು ಅವರುಗಳು ಹುಡುಕಿಕೊಂಡು ಬರಬಹುದು. ಅವರು ನಾವಿರುವ ಜಾಗಕ್ಕೆ ಬಂದು ಗಲಾಟೆ ಹಚ್ಚಬಹುದು. ಅಥವಾ ಪೋಲೀಸಿಗೆ ಕಂಪ್ಲೇಂಟು ಕೊಟ್ಟು ನಮ್ಮಿಬ್ಬರನ್ನೂ ಹಿಡಿಸಬಹುದು. ನಮ್ಮ ಮೇಲೆ ಕೇಸಾಗಬಹುದು."

ಪೋಲೀಸಿನವರಿಂದ ಹಿಡಿಸಬಹುದು. ಕೇಸಾಗಬಹುದು ಎಂಬ ಮಾತು ಕೇಳಿ ಪ್ರಮೀಳೆಯ ಎದೆ ಹೊಡೆದುಕೊಂಡಿತು.

ಅದನ್ನು ಸರಿ ಮಾಡಿಕೊಳ್ಳುತ್ತಾ ಅವಳು "ಕೋರ್ಟಿನಲ್ಲಿ ಕೇಸಾದರೆ ನಾವಿಬ್ಬರೂ ಪ್ರೇಮ ಮಾಡುತ್ತಿದ್ದೇವೆಂದು ಹೇಳೋಣ" ಎಂದಳು.

"ಕೋರ್ಟಿನವರು ಅದನ್ನೊಪ್ಪಿಕೊಳ್ಳುವುದಿಲ್ಲ, ಪ್ರಮಿಳಾ" ಎಂದು ನಗುತ್ತಾ ಹೇಳಿದ ಮಾಧು.

"ಯಾಕೆ ಒಪ್ಪಿಕೊಳ್ಳುವುದಿಲ್ಲ"

"ನಿನಗೆ ಅವೆಲ್ಲಾ ಗೊತ್ತಾಗುವುದಿಲ್ಲ. ಹೆಣ್ಣು ಗಂಡುಗಳು ಸರಿ ಸರಿಮಾನಸ್ಕಂದರಂತೆ ಪ್ರೇಮಿಸಿ ಮದುವೆಯಾಗುವುದನ್ನು ಈ ಸಮಾಜವು ಒಪ್ಪುವುದಿಲ್ಲ. ಹಾಕಿಕೊಳ್ಳುವ ಒಟ್ಟೆಯಂತೆ, ಜೇಬಿನಲ್ಲಿರುವ ದುಡ್ಡಿನಂತೆ, ವಾಸ ಮಾಡುವ ಮನೆಯಂತೆ, ಗಂಡಸರು ಹೆಂಗಸರು ತಮ್ಮ ಅಧೀನ ಎಂದು ಕೊಂಡಿದ್ದಾರೆ. ಪರಸ್ಪರ ಪ್ರೀತಿಸಿ ಮದುವೆಯಾಗುವುದರಿಂದ ಹೆಂಗಸಿನ ದಾಸ್ಯಕ್ಕೆ ಧಕ್ಕೆ ಬರುತ್ತದೆ. ಅದರಿಂದ ಸಮಾಜ ಈ ಪದ್ಧತಿಯನ್ನು ಒಪ್ಪುವುದಿಲ್ಲ."

ಪ್ರಮಿಳೆಯು ಇದುವರೆವಿಗೆ ತನಗೆ ಅಗೋಚರವಾಗಿದ್ದ ಹೊಸ ಸತ್ಯವನ್ನು ಕಂಡುಕೊಳ್ಳುತ್ತಿರುವಂತೆ ಅವಾಕ್ಕಾಗಿ ಕುಳಿತುಕೊಂಡಿದ್ದಳು. ಮಾಧು ತನ್ನ ಮಾತನ್ನು ಮುಂದುವರಿಸಿದ.

"ನಿನಗಿಂದು ನಂಬಿಕೆಯಾಗದಿರಬಹುದು, ಪ್ರಮಿಳಾ. ಆದರೆ ನಾನು ಹೇಳುತ್ತಿರುವುದು ಅಕ್ಷರಶಃ ನಿಜ. ಎಂದು ಹೆಂಗಸು ತನಗಾಗಿಯೂ ತನ್ನ ಮಕ್ಕಳಿಗಾಗಿಯೂ ಗಂಡಸನ್ನು ಅವಲಂಬಿಸಿದಳೋ ಅಂದೇ ಅವಳು ಗಂಡಸಿನ ದಾಸಿಯಾದಳು. ಮೊದಲಿನಿಂದಲೂ ವಿವೇಕಿಗಳಾದ ಸ್ತ್ರೀ ಪುರುಷರು ಈ ದಾಸ್ಯ ಪದ್ಧತಿಯನ್ನು ಎದುರಿಸುತ್ತ ಬಂದು ಸಮಾಜದ ಬಡಬಾಗ್ನಿಗೆ ಸಿಕ್ಕಿ ಬಾಡಿಹೋಗಿದ್ದಾರೆ. ನಾವೂ ಅಂತಹ ಬಲಿದಾನವನ್ನು ಮಾಡುವುದಕ್ಕೆ ಸಿದ್ಧರಾಗಿರುವುದಾದರೆ ಇದರಲ್ಲಿ ಪ್ರವೃತ್ತರಾಗಬೇಕು."

"ಹಾಗಾದರೆ ಪ್ರೇಮಿಗಳು ಸುಖವಾಗಿ ಬದುಕುವುದು ಈ ಪ್ರಪಂಚದಲ್ಲಿ ಅಸಾಧ್ಯವೆನ್ನುತ್ತೀರಾ ?"

"ಇಲ್ಲ, ನಾನು ಹಾಗೆ ಹೇಳುವುದಿಲ್ಲ. ಸಮಾಜವನ್ನು ಎದುರಿಸಬೇಕು. ಅದರ ಕಾವಿನಿಂದ ಬೆಂದರೂ ಬೆದರದೇ ಉಳಿದುಕೊಳ್ಳಬೇಕು. ಆಗ ಪ್ರೇಮದ ಅಮೃತ ವರ್ಷದಿಂದ ಜೀವನ ನಂದನವಾಗುತ್ತದೆ."

ತಾನು ಅಂತಹ ಆನಂದವನದಲ್ಲಿ ವಿಹರಿಸಬಲ್ಲೆನೇ ಎಂದು ಯೋಚನೆ ಮಾಡುತ್ತಾ ಪ್ರಮಿಳೆ ಕುಳಿತುಕೊಂಡಳು.

''ಈಗ ಹೇಳು. ನಿನ್ನ ನಿರ್ಧರವೇನು. ನೀನೇನು ಮಾಡುತ್ತೀಯೆ ?"

ಇನ್ನೂ ಅವಳು ಯೋಚನೆ ಮಾಡುತ್ತಿದ್ದಳು. ಕೂಡಲೇ ಯಾವೊಂದು ಮಾತನ್ನೂ ಹೇಳಲಾರದವಳಾಗಿದ್ದಳು. ಮಾಧುವಿನ ಪ್ರಶ್ನೆಗೆ ಕೂಡಲೇ ಉತ್ತರ ಹೇಳಬೇಕಾಗಿ ಬಂದು ಜಾಗೃತಳಾದಳು.

''ನೀವೇನು ಮಾಡುತ್ತೀರಿ ?"

''ನಾನೇನು ಮಾಡುತ್ತೇನೆಂಬುದು ನಿನ್ನ ನಿರ್ಧಾರದ ಮೇಲೆ ಅವಲಂಬಿಸುತ್ತದೆ."

''ಹಾಗಾದರೆ ನಿಮ್ಮ ವೈಯುಕ್ತಿಕವಾದ ಅಭಿಪ್ರಾಯವೇ ಇಲ್ಲವೆನ್ನುತ್ತೀರೇನು ?"

''ಇದೆ. ಪ್ರಮಿಳಾ. ನನಗೆ ವೈಯುಕ್ತಿಕವಾದ ಖಚಿತಾಭಿಪ್ರಾಯವಿದೆ. ನಾನು ನಿನ್ನನ್ನು ಪ್ರೇಮ ಮಾಡಿದ್ದೇನೆ. ಅದರ ಜವಾಬ್ದಾರಿಯನ್ನು ಅರಿತಿದ್ದೇನೆ. ಈ ಪ್ರೇಮದಿಂದ ಎಂತಹ ಕಷ್ಟಗಳು ಬಂದರೂ ಅನುಭವಿಸುವುದಕ್ಕೆ ಸಿದ್ಧವಾಗಿದ್ದೇನೆ. ನಾಳೆ ನಿನ್ನನ್ನು ಅಪಹರಿಸಿದೆನೆಂದು ನನ್ನ ಮೇಲೆ ಕೇಸು ಮಾಡಿ ಜೈಲಿಗೆ ಕಳುಹಿಸಿದರೂ ನಾನು ದುಃಖಿಸುವುದಿಲ್ಲ. ಅದು ನನ್ನ ಪ್ರೇಮದ ಪರೀಕ್ಷೆಯೆಂದುಕೊಂಡು ಜೈಲಿನಲ್ಲಿ ಸುಖವಾಗಿ ಶಿಕ್ಷೆಯನ್ನು ಅನುಭವಿಸುತ್ತೇನೆ."

ಪ್ರಮಿಳೆಯೂ ಉತ್ತೇಜಿತಳಾಗಿ ಹೇಳಿದಳು.

''ಅಂತಹ ಸ್ಥಿತಿಯು ಬರುವುದೇ ಇಲ್ಲವೆಂದು ನನ್ನ ಮನಸ್ಸಿಗೆ ತೋರುತ್ತದೆ. ಬಂದರೂ ನಾನು ಹೆದರುವುದಿಲ್ಲ. ಎಷ್ಟೇ ಕಷ್ಟಗಳು ಬಂದರೂ ನಿಮ್ಮೊಡನೆ ಸಮಾಜವನ್ನು ಎದುರಿಸುತ್ತೇನೆ."

ಮಾಧವರಾಯನು ಎರಡು ಗಳಿಗೆ ಯೋಚನೆ ಮಾಡಿ "ಸರಿ. ಪ್ರಮಿಳಾ. ಈ ವಿಷಯ ನಿರ್ಧರವಾದಂತಾಯಿ. ಇನ್ನು ನೀವು ಶಿವಮೊಗ್ಗೆಗಾಗಲೀ, ಶಿವನಸಮುದ್ರಕ್ಕಾಗಲೀ ಹೋಗಬೇಕಾಗಿಲ್ಲ" ಎಂದ.

''ಅಂದರೆ ಇದೇ ಊರಿನಲ್ಲಿಯೇ ಇರೋಣ ಎನ್ನುತ್ತೀರಾ ?"

"ಉಹುಂ. ಈ ಊರಿನಲ್ಲಿನ್ನು ಸಾಧುವುದೇನು ? ನಾಳೆಯೋ ನಾಡಿದ್ದೋ ನಮಗೆ ಊರಿನಿಂದ ದುಡ್ಡು ಬರುತ್ತದೆ. ನಾವಿಬ್ಬರೂ ಕಾಶಿಗೆ ಹೊರಟುಹೋಗೋಣ. ಅಲ್ಲಿ ಓದಿ ಪಾಸು ಮಾಡಿಕೊಂಡು ನಾನು ವಾಪ್ಸು ಬರುತ್ತೇನೆ. ನೀನೂ ಏನಾದರೂ ಓದು. ನಾವು ವಾಪ್ಸು ಬರುವುದು ಒಂದೋ ಎರಡೋ ವರ್ಷಗಳಾಗಬಹುದು. ಅಷ್ಟು ಹೊತ್ತಿಗೆ ಇಲ್ಲಿನ ಪರಿಸ್ಥಿತಿಗಳು ಸ್ವಲ್ಪ ಬದಲಾಯಿಸಿದ್ದರೂ ಬದಲಾಯಿಸಿಬಹುದು."

ಪ್ರಮಿಳೆಯು ಹಾಗೆಯೇ ಆಗಲೆಂದಳು.

"ನಡಿ. ಹೊತ್ತಾಯಿತು. ಮನೆಯ ಕಡೆ ಹೊರಡೋಣ"

ಇಬ್ಬರೂ ಮನೆಯ ಕಡೆಗೆ ಬಂದರು.

ಅವರು ಮನೆ ಸೇರುವ ವೇಳೆಗೆ ಎಂಟು ಗಂಟೆಯಾಗಿ ಹೋಗಿತ್ತು. ಗಂಗಮ್ಮ ಅಡಿಗೆ ಮಾಡಿ ಕಾದುಕೊಂಡಿದ್ದರು.

ಅವರನ್ನು ನೋಡುತ್ತಲೇ ಶಾರದೆಯು "ಮಧ್ಯಾನ್ಹ ತಿಂಡೀ ಸಹ ಇಲ್ಲವಲ್ಲ ಎಂದು ಅಮ್ಮ ಬೇಗನೆ ಅಡಿಗೆ ಮಾಡಿಟ್ಟಿದ್ದಾಳೆ. ನೀವುಗಳು ಎಲ್ಲಿ ಹೋದಿರಿ ?" ಎಂದು ಕೇಳಿದಳು.

"ನಾವೆಲ್ಲಿ ಹೋಗುತ್ತೇವೆ. ಸ್ಟೇಷರ್ನ ಮಗ್ಗಲಿನ ದೊಡ್ಡ ಬಯಲಿನಲ್ಲಿ ಕುಳಿತು ಮಾತನಾಡುತ್ತಿದ್ದೆವು. ಹೊತ್ತೇ ಗೊತ್ತಾಗಲಿಲ್ಲ"

"ಸರಿ. ಈಗಲಾದರೂ ಬೇಗ ಊಟಕ್ಕೇಳಿ" ಎಂದು ಹೇಳುತ್ತಾ ಗಂಗಮ್ಮ ಆತುರ ಮಾಡಿದರು.

ಎಲ್ಲರೂ ಊಟಕ್ಕೆ ಕುಳಿತರು.

ಆ ದಿನ ರಾತ್ರಿ ಗಂಗಮ್ಮ ಸಾಧಾರಣವಾಗಿ ಒಳ್ಳೆಯ ಅಡಿಗೆಯನ್ನೇ ಮಾಡಿದ್ದರು. ಈರುಳ್ಳಿ ಆಲೂಗಡ್ಡೆ ಹುಳಿ, ಮೊಸರು ಬಜ್ಜಿ ಮಾಡಿದ್ದರು. ಸೌಲ್ಕು ಸಂಡಿಗೆ ಹುರಿದಿದ್ದರು.

ಮಾಧುವು "ಗಂಗಕ್ಕ. ಜೋರು ಅಡಿಗೆಯನ್ನು ಮಾಡಿದ್ದೀ. ಇದನ್ನು ನೋಡಿದರೆ ದಿನವೂ ಪ್ರಮಿಳೆಯು ಮನೆಗೆ ಬರಲಿ ಎನ್ನಿಸುತ್ತದೆ" ಎಂದ.

"ಬರಲಪ್ಪ. ದಿನವೂ ಬರಲಿ. ಯಾರು ಬೇಡವೆಂದರು ? ಅವಳ

ರುವ ಎರಡು ದಿನಗಳ ಮಟ್ಟಿಗಾದರೂ ಉಪವಾಸವಿಡದೇ ಅನ್ನಾ ನೀರು ಕಾಣಿಸೆದರೆ ಜೋರು ಅಡಿಗೆ ಅಟ್ಟ ಹಾಗೆಯೇ ಆಯಿತು"

"ಸಾಕು ಸುಮ್ಮನಿರು. ಹೊಸದಾಗಿ ಬಂದಿರುವವಳ ಎದುರಿಗೆ ಗೋಳು ಕರೆಯಬೇಡ. ಹೆದರಿಕೊಂಡು ಓಡಿ ಬಿಟ್ಟಾಳು"

"ಎಲ್ಲಾ ಮುಗಿದು ಹೋಗಿದೆಯಪ್ಪ. ಮಧ್ಯಾಹ್ನವೆಲ್ಲಾ ಶಾರದೆಯು ಕೊರೆದು ಕಿವಿ ತೂತಾಗುವ ಹಾಗೆ ಮಾಡಿದ್ದಾಳೆ.ಪ್ರಮಿಳಮ್ಮ ಓಡಿಹೋಗುವ ಹಾಗಿದ್ದರೆ ಇಷ್ಟು ಹೊತ್ತಿಗೆ ಓಡಿ ಹೋಗುತ್ತಿದ್ದಳು"

ತಮಾಷೆಯಾಗಿ ಮಾತನಾಡುತ್ತಲೂ ಒಬ್ಬರನ್ನು ಮತ್ತೊಬ್ಬರು ಎತ್ತಿ ಹಾಕುತ್ತಲೂ ಊಟ ಮಾಡಿ ಮುಗಿಸಿದರು.

ಆದಾದ ಮೇಲೆ ಮಾಧು, ಪ್ರಮಿಳೆ, ಶಾರದೆ ಎಲ್ಲರೂ ಮಾತನಾಡುತ್ತ ಕುಳಿತುಕೊಂಡರು. ಕೆಲಸಗಳೆಲ್ಲಾ ಮಾಡಿ ಮುಗಿಸಿಕೊಂಡು ಗಂಗಮ್ಮನೂ ಬಂದು ಮಾತಿಗೆ ಸೇರಿಕೊಂಡರು. ಕಣ್ಣಿಗೆ ನಿದ್ದೆ ಹತ್ತುವವರೆವಿಗೆ ಮಾತನಾಡುತ್ತಾ ಕುಳಿತಿದ್ದರು.

ಮಾರನೆಯ ದಿನ ಮಧ್ಯಾಹ್ನ ಟೀ ಕುಡಿದನಂತರ ಕೋಣೆಗೆ ಬಂದು ಮಾಧು ಸಿಗರೇಟು ಹಚ್ಚಿಕೊಂಡ.

ಶಿವನಸಮುದ್ರದಲ್ಲಿದ್ದಾಗ ಮಾಧೂ ಸಿಗರೇಟು ಸೇದುವುದನ್ನು ಪ್ರಮಿಳೆ ನೋಡಿರಲಿಲ್ಲ. ನಿನ್ನೆಯ ದಿನವೂ ಈ ದಿನವೂ ಸಿಗರೇಟು ಸೇದುವುದನ್ನು ನೋಡಿದ್ದಳು.

''ಮೇಸ್ಟರು ಹೊಸದಾಗಿ ಸಿಗರೇಟು ರೂಢಿ ಮಾಡಿಕೊಂಡಹಾಗಿದೆ" ಎಂದಳು.

''ಇಲ್ಲ. ಪ್ರಮಿಳಾ. ನಿಮ್ಮ ಮೇಸ್ಟರು ಬಹಳ ದಿನಗಳ ಮೊದಲೇ ಈ ದುರಭ್ಯಾಸವನ್ನು ಮೊದಲು ಮಾಡಿದ್ದರು. ಆದರೆ ಶಿವನಸಮುದ್ರದಲ್ಲಿದ್ದಾಗ ಯಾರ ಕಣ್ಣಿಗೂ ಬೀಳದಂತೆ ಕದ್ದು ಸೇದುತ್ತಿದ್ದರು. ಇಲ್ಲಿ ರಾಜಾರೋಷಾಗಿ ಮಾಡುತ್ತಿದ್ದಾರೆ, ಅಷ್ಟೇ"

ಯಾರ ವಿಷಯವನ್ನೋ ಹೇಳುವಂತೆ ಮಾಧು ತನ್ನ ವಿಷಯ ಬಡ ಬಡನೆ ಹೇಳಿಕೊಂಡುದನ್ನು ಕೇಳಿ ಪ್ರಮಿಳೆ ಅಂದಳು.

"ನೀವು ಬಹಳ ದಿನಗಳಿಂದ ಸಿಗರೇಟು ಸೇದುತ್ತಿರಬಹುದು. ಆದರೆ ನೀವು ಸಿಗರೇಟು ಸೇದುವುದನ್ನು ನೋಡಿದರೆ ಏನೋ ಒಂದು ತರಹ ಆಗುತ್ತದೆ–"

"ನೀನು ಹೇಳುವುದು ಹದಿನಾರಾಣೆಯು ನಿಜ, ಪ್ರಮಿಳಾ. ಮೊದಲಿನಿಂದಲೂ ಕದ್ದು ಕದ್ದು ಸಿಗರೇಟು ಸೇದುತ್ತಿದ್ದವನಿಗೆ ಈಗ ಯಾರೆದುರಿಗಾದರೂ ಸೇದಿದರೆ ಏನೋ ತಪ್ಪು ಮಾಡಿದಂತೆ ಭಾಸವಾಗುತ್ತದೆ. ಅಷ್ಟೇ ಅಲ್ಲ. ಸಿಗರೇಟು ಸೇದಿದ ಸುಖವೇ ಆಗುವುದಿಲ್ಲ. ಕದ್ದು ಸೇದಿದರೇ ಸುಖವಾಗುವುದು"

ಪ್ರಮಿಳೆ ಏನೋ ಹೇಳುವುದಕ್ಕೆ ಹೋದಳು.

ಅಷ್ಟರಲ್ಲಿ ಮಾಧುವು ! "ಸ್ವಲ್ಪ ತಡಿ. ನೋಡು. ಅಲ್ಲಿ ಪೋಸ್ಟ್‌ಮ್ಯಾನ್ ಬರುತ್ತಿರುವಂತಿದೆ" ಎಂದ.

ಆ ಹೊತ್ತಿನಲ್ಲಿ ಯಾಕೋ ವರಾಂಡಕ್ಕೆ ಬಂದಿದ್ದ ಶಾರದೆಯೂ ಪೋಸ್ಟ್‌ಮ್ಯಾನ್ ಬರುತ್ತಿದ್ದುದನ್ನು ನೋಡಿದಳು. ತನ್ನ ಗಂಡ ಏನಾದರೂ ಕಾಗದ ಬರೆದಿದ್ದಾನೆಯೋ ಎಂದು ಅವಳ ಮನಸ್ಸಿನಲ್ಲಿ ಆಸೆಯುಂಟಾಯಿತು. ಮರುಕ್ಷಣವೇ "ನನಗೆಲ್ಲಿದೆ ಅಂತಹ ಪುಣ್ಯ" ಎಂದು ಮನಸ್ಸು ಚಿಕ್ಕದು ಮಾಡಿಕೊಂಡಳು.

ಆ ಮನೆಯ ಕಡೆ ಪೋಸ್ಟ್‌ಮ್ಯಾನ್ ಬರುತ್ತಿದ್ದ. ಅದು ಮಾಧುವಿಗಾಗಿಯೋ ಎಂಬುದರಲ್ಲಿ ಸಂದೇಹವೇ ಇರಲಿಲ್ಲ. ಮಾಧು ಪ್ರಮಿಳೆಯರನ್ನು ಬಿಟ್ಟರೆ ಆ ಮನೆಯಲ್ಲಿರುವ ಉಳಿದವರ ವಿಷಯದಲ್ಲಿ ಆಸಕ್ತರಾದವರಾರೂ ಪ್ರಪಂಚದಲ್ಲಿರಲಿಲ್ಲ. ಹಾಗಿರುವಾಗ ಪೋಸ್ಟ್‌ಮ್ಯಾನ್ ಯಾಕೆ ಬರುತ್ತಾನೆ ?

ಆ ಮನೆಯಲ್ಲಿ ಎಲ್ಲರೂ ಯಾವ ವ್ಯಕ್ತಿಯ ಬರುವಿಕೆಗಾಗಿ ಕುತೂಹಲದಿಂದ ನಿರೀಕ್ಷಿಸುತ್ತಿದ್ದರೋ ಆ ವ್ಯಕ್ತಿ ಸಮೀಪಸ್ಥನಾದನಂತರ ಅವನು ಕಾಗದ ತಂದಿಲ್ಲವೆಂದು ಗೊತ್ತಾಯಿತು.

ಬಂದವನೇ "ತಂತೀ ಮನಿಯಾರ್ಡರು ಬಂದಿದೆ" ಎಂದ.

ಕೂಡಲೇ ಮಾಧುವು ಅತ್ಯುತ್ಸಾಹದಿಂದ ನಮ್ಮಮ್ಮನಿಗೆ ಮಗನ ಮೇಲೆ ಇದ್ದಕ್ಕಿದ್ದಂತೆಯೇ ವಿಶ್ವಾಸ ಬಂದು ಬಿಟ್ಟಿರುವಂತೆ. ತಂತೀ ಮನಿಯಾರ್ಡರು ಕಳಿಸಿ ಬಿಟ್ಟಿದ್ದಾಳೆ" ಎಂದ.

ಬಂದಿದ್ದುದಂತೂ ತಂತೀ ಮನಿಯಾರ್ಡರೇ. ಕೇವಲ ನೂರು ರೂಪಾಯಿಗಳು ಮಾತ್ರ ಕಡೇ ಪಕ್ಷ ಐನೂರು ರೂಪಾಯಿಗಳಾದರೂ ಬರುತ್ತದೆ ಎಂದು ನಿರೀಕ್ಷಣೆ ಮಾಡುತ್ತಿದ್ದ ಮಾಧುವಿಗೆ ನೂರು ರೂಪಾಯಿಗಳು ಬಂದುದನ್ನು ನೋಡಿ ನಿರಾಶೆಯಾಯಿತು. ಆದರೆ ಮನಿಯಾರ್ಡರ್ ಕೂಪನ್ನಿನಲ್ಲಿ ಬರೆದಿದ್ದುದನ್ನು ನೋಡಿ ವಿಷಯ ಅರ್ಥವಾಯಿತ್ತು.

"ನಿಮ್ಮ ತಂದೆ ಮರಣಶಯ್ಯೆಯಲ್ಲಿದ್ದಾರೆ. ನಾನೂ ಮೈ ಚೆನ್ನಾಗಿಲ್ಲದೇ ಹಾಸಿಗೆ ಹಿಡಿದಿದ್ದೇನೆ. ಏನು ಕೆಲಸವಿದ್ದರೂ ಬಿಟ್ಟು ಹೊರಟು ಬಾ. ಜಯಲಕ್ಷಮ್ಮ" ಎಂದು ಆ ಕೂಪನ್ನಿನಲ್ಲಿ ಬರೆದಿತ್ತು. ಅದನ್ನು ಓದಿದ ನಂತರ ನೂರೇ ರೂಪಾಯಿ ಬಂದುದರ ಕಾರಣ ಮಾಧುವಿಗೆ ವಿಶದವಾಯಿತು.

ಕಾಶಿಗೆ ಹೋಗಬೇಕು ಎಂದುಕೊಂಡಿದ್ದವನು ಚಿತ್ರಪಾಡಿಗೆ ಹೋಗಬೇಕಲ್ಲ ಎಂದು ಮಾಧುವಿಗೆ ಮನಸ್ಸು ಸಣ್ಣದಾಯಿತು. ಆದರೂ ಹೆತ್ತವರಿಗೆ ಮೈ ಚೆನ್ನಾಗಿಲ್ಲ ಎಂದರೆ ಹೋಗಬೇಡವೇ – ಎಂದು ಸಮಾಧಾನ ಮಾಡಿಕೊಂಡ.

ರುಜು ಮಾಡಿ ಹಣ ತೆಗೆದುಕೊಂಡನಂತರ ವಿಷಯ ಏನೆಂದು ವಿಚಾರಿಸುತ್ತ ಗಂಗಮ್ಮ ಹೊರಗೆ ಬಂದರು.

ಎಲ್ಲವನ್ನೂ ಕೇಳಿ "ಏನಪ್ಪಾ. ಈಗೇನು ಮಾಡುತ್ತೀಯೆ ?" ಎಂದು ಪ್ರಶ್ನೆ ಮಾಡಿದರು.

"ಏನು ಮಾಡುವುದಕ್ಕಾಗುತ್ತದೆ ? ಚಿತ್ರಪಾಡಿಗೆ ಹೋಗಬೇಕು, ಅಷ್ಟೇ"

"ಹಾಗೇ ಮಾಡಪ್ಪ. ಬಾಯಲ್ಲಿ ಏನು ಬೇಕಾದರೂ ನಿಷ್ಠೂರದ ಮಾತುಗಳನ್ನಾಡಬಹುದು. ಆದರೆ ಹೆತ್ತವರ ಕರುಳು ಎಷ್ಟು ಕಡಿಯುತ್ತದೆಂಬುದು ಹುಡುಗರು ನಿಮಗೆ ಗೊತ್ತಾಗುವುದಿಲ್ಲ."

ಆ ದಿನ ಸಾಯಂಕಾಲ ಮಾಧು ಪ್ರಮಿಳೆಯರು ಹಿಂದಿನ ದಿನದಂತೆಯೇ ಸ್ಟೇಷನ್ ಮಗ್ಗುಲಲ್ಲಿದ್ದ ಬಯಲಿಗೆ ಹೋದರು.

ಮನೆಯಲ್ಲಿ ಗಂಗಮ್ಮ ಹೇಳಿದ ಮಾತಿನಿಂದ ಮಾಧು ಮನೆಯಲ್ಲಿ ಜಗಳ ಮಾಡಿಕೊಂಡು ಬಂದಿದ್ದಾನೆಂಬ ಅರ್ಥ ಪ್ರಮಿಳೆಗೆ ಕಂಡುಬಂದಿತು. ಮಾಧುವಿನ ತಾಯಿ ತಂದೆ, ಅವರ ಆಸ್ತಿ ಪಾಸ್ತಿಗಳ ವಿಷಯವನ್ನು ಕೇಳಿದರೆ ಚೆನ್ನಾಗಿರುವುದಿಲ್ಲನೆಂದು ವಿಚಾರಿಸಿರಲಿಲ್ಲ. ಮಾಧುವಿನ ಗೃಹಕೃತ್ಯದ ವಿಷಯ ಅವಳಿಗೆ ಗೊತ್ತಿರಲಿಲ್ಲ. ಬಲುದಿನಗಳು ಎಲ್ಲರಂತೆಯೇ ಅವಳೂ ದೊಡ್ಡ ಮೇಸ್ಟರೂ ಚಿಕ್ಕಮೇಸ್ಟರೂ ಅಣ್ಣ ತಮ್ಮಂದಿರೆಂದುಕೊಂಡಿದ್ದಳು. ಅಲ್ಲವೆಂದೂ ಅವನಾರೋ ಮಂಗಳೂರು ಕಡೆಯ ತರುಣನೆಂದೂ ಆ ಮೇಲೆ ಕಿವಿಯ ಮೇಲೆ ಬಿದ್ದಿತ್ತು. ಆದರೆ ಆಗ ಇನ್ನೆಷ್ಟೋ ಹೊಸ ಹೊಸ ಪರಿಸ್ಥಿತಿಗಳು ಬಂದುಬಿಟ್ಟಿದ್ದವು. ಆ ವಿಷಯ ಕೇಳಿ ತಿಳಿದುಕೊಳ್ಳುವುದಕ್ಕಿಂತಲೂ ಪರಿಸ್ಥಿತಿಗಳು ವಿಷಮವಾಗಿದ್ದವು.

ಈಗ ಮಾಧುವಿನ ವಿಷಯವೇನೋ ಕೇಳಿ ತಿಳಿದುಕೊಳ್ಳಬೇಕೆಂದೆನಿಸಿತು. ಬಯಲಿನಲ್ಲಿ ಹೋಗಿ ಕುಳಿತುಕೊಂಡ ಮೇಲೆ ಕೇಳಿದಳು.

"ನೀವು ತಪ್ಪು ತಿಳಿದುಕೊಳ್ಳದಿದ್ದರೆ ಒಂದು ಮಾತು ಕೇಳಬೇಕೆಂದಿದ್ದೇನೆ."

"ಏನು ಬೇಕಾದರೂ ಹೇಳು, ಪ್ರಮಿಳಾ."

"ಗಂಗಮ್ಮನವರು ಮಾತನಾಡಿದ್ದರಲ್ಲಿ — — —"

"ಓಹೋ! ಅದೇ. ನನಗೂ ನಮ್ಮ ತಂದೆಗೂ ಸರಿಹೋಗುವುದಿಲ್ಲವೆಂಬುದಲ್ಲವೇ? ಅದೊಂದು ದೊಡ್ಡ ಕತೆ."

"ನಾನು ತಿಳಿದುಕೊಳ್ಳಬಹುದಾದರೆ — —"

"ತಿಳಿದುಕೊಳ್ಳಲೇಬೇಕು. ನಿನಗದು ಗೊತ್ತಿರುವುದು ಒಳ್ಳೆಯದು. ನಮ್ಮ ತಂದೆಯವರ ಹೆಸರು ಅನಂತಯ್ಯನವರೆಂದು. ಕುಂದಾಪುರದ ಬಳಿ ಚಿತ್ರಪಾಡಿಯಲ್ಲಿ ನಮಗೆ ಆಸ್ತೀ ಮನೆಗಳಿದ್ದವು. ಅದೇನು ಹೆಚ್ಚಲ್ಲ. ಆದರೆ ಊಟಮಾಡಿಕೊಂಡು ಗೌರವವಾಗಿ ಬದುಕಲು ಸಾಕು. ಸಾಧಾರಣವಾದುದೊಂದು ಮನೆ. ಸ್ವಲ್ಪ ಗದ್ದೆ. ಸಣ್ಣ ತೋಟ. ಆದರೆ ನಮ್ಮಪ್ಪನಿಗೆ ಅಷ್ಟು

ಕಾಲವೆಂದು ತೋರಿತು. ನಾನು ಹೇಳುವುದು ನಲವತ್ತು ಐವತ್ತು ವರ್ಷಗಳ ಹಿಂದಿನ ಮಾತು. ಆ ಕಾಲದಲ್ಲಿ ನಮ್ಮ ಕಡೆೀಜನ ಘಟ್ಟಹತ್ತಿ ಬಂದು ಹೋಟೆಲುಗಳನ್ನಿಟ್ಟು ಬೇಕಾದ ಹಾಗೆ ಸಂಪಾದನೆ ಮಾಡುತ್ತಿದ್ದರು. ಹಾಗೆಯೇ ನಮ್ಮಪ್ಪನಿಗೂ ಸಂಪಾದನೆ ಮಾಡಬೇಕೆಂದು ತೋರಿತು. ಅವರೂ ಬೆಂಗಳೂರಿಗೆ ಬಂದರು. ಬಳೇಪೇಟೆಯಲ್ಲಿ ಹೋಟೆಲಿಟ್ಟರು. ಕೈತುಂಬಾ ಸಂಪಾದನೆ ಮಾಡಿದರು. ಈಗಲೂ ಅವರು ನಡೆಸುತ್ತಿದ್ದ ಹೋಟೆಲು ಇದೆ. ಆದರೆ ಮೊದಲಿದ್ದಷ್ಟು ಚೆನ್ನಾಗಿಲ್ಲ."

"ಇವೆಲ್ಲಾ ನನಗೆ ಗೊತ್ತಿರಲಿಲ್ಲ. ಅಂತೂ ಬೆಂಗಳೂರಿನಲ್ಲಿ ನಿಮ್ಮದೊಂದು ಹೋಟೆಲಿದೆಯೆಂದು ಕೇಳಿದ್ದೆ."

"ಸರಿ. ಮುಂದೆ ಕೇಳು. ನಮ್ಮ ತಂದೆಗೆ ಬಹಳ ದಿನಗಳ ಮೊದಲೇ ನಮ್ಮಣ್ಣ ಹುಟ್ಟಿದ. ಗೋಪಾಲಕೃಷ್ಣನೆಂದು ಅವನ ಹೆಸರು. ಅವನಾದ ಮೇಲೆ ನಾಲ್ಕೈದು ಮಕ್ಕಳಾಗಿ ಅನಂತರ ನಾನು ಹುಟ್ಟಿದೆ. ನಮ್ಮಪ್ಪ ಆ ಹೋಟೆಲಿನಲ್ಲಿ ವಿಪರೀತ ಸಂಪಾದನೆ ಮಾಡಿದರು. ಅದು ಅಷ್ಟೂ ಇಷ್ಟೂ ಅಲ್ಲ. ವಿಪರೀತ. ಹೇಳಿದರೆ ನೀನು ಸುಳ್ಳು ಎಂದುಕೊಳ್ಳುತ್ತೀಯೇನೋ? ಚಿತ್ರಪಾಡಿಯ ಸುತ್ತಮುತ್ತಲಲ್ಲಿ ನಮ್ಮ ಮನೆಯಂತಹ ಮನೆಯೇ ಇಲ್ಲ. ದೊಡ್ಡ ಮಹಡಿ ಮನೆ. ಕೋಣೆಗಳಿಗೆಲ್ಲಾ ಅಟ್ಯಾಚ್ಡ್ ಬಾತುರೂಂಗಳು. ಫ್ಯಾನುಗಳು. ಎಲೆಕ್ಟ್ರಿಕ್ ಲೈಟುಗಳು. ಆಗ ನಮ್ಮೂರಿನಲ್ಲಿ ವಿದ್ಯುದ್ದೀಪಗಳಿರಲಿಲ್ಲ. ಅದಕ್ಕೆ ನಮ್ಮ ಮನೆಗೆ ವಿದ್ಯುತ್ ಒದಗಿಸಲು ಪ್ರತ್ಯೇಕವಾದ ಡೈನಮೋ ಸಹ ಇಟ್ಟಿದ್ದರು. ಬೇಕಾದಷ್ಟು ಗದ್ದೆ ತೋಟಗಳನ್ನು ಮಾಡಿದರು. ಅಂತೂ ಆ ಪ್ರಾಂತದಲ್ಲಿ ಅವರು ಒಳ್ಳೆಯ ಶ್ರೀಮಂತರೆಂದೆನಿಸಿಕೊಂಡರು."

ಪ್ರಮಿಳೆ ಮಾಧುವಿನ ಮಾತುಗಳನ್ನು ರೆಪ್ಪೆ ಹೊಡೆಯದೇ ಕೇಳುತ್ತಿದ್ದಳು.

"ಅವರದೊಂದು ಹೋಟೆಲು ಬಳೇಪೇಟೆಯಲ್ಲಿ ನಡೆಯುತ್ತಿದೆಯೆಂದು ಹೇಳಿದೆನಷ್ಟೆ. ಅದನ್ನು ನಮ್ಮ ಅಣ್ಣ ಗೋಪಾಲಕೃಷ್ಣನಿಗೆ ಕೊಟ್ಟರು. ನನಗಾಗಿ ಸುಮಾರು ಹತ್ತು ವರ್ಷಗಳ ಹಿಂದೆಯೇ ಚಿಕ್ಕಪೇಟೆಯಲ್ಲಿ ಒಂದು

ಹೋಟೆಲು ಮೊದಲು ಮಾಡಿದ್ದರು. ಆಗ ನಮ್ಮ ತಂದೆ ಅಲ್ಲಿಯೇ ಇದ್ದರು. ನನಗೆ ಮೊದಲಿನಿಂದಲೂ ಈ ಹೋಟೆಲು ವ್ಯಾಪಾರ ಸರಿಬೀಳುತ್ತಿರಲಿಲ್ಲ. ಸ್ಕೂಲಿನಲ್ಲಿ ಸಹ ಜೊತೆಯ ಹುಡುಗರು, ಮೇಸ್ಟರುಗಳೂ ನನ್ನನ್ನು ಹೋಟಲಿನವನ ಮಗ ಎಂದು ಕರೆದರೆ ಅಪಮಾನವಾದಂತಾಗಿ ತಲೆ ತಗ್ಗಿಸುತ್ತಿದ್ದೆ. ಈಗ್ಗೆ ಮೂರು ನಾಲ್ಕು ವರ್ಷಗಳ ಹಿಂದೆ ಚಿಕ್ಕಪೇಟೆಯಲ್ಲಿರುವ ಹೋಟಲನ್ನು ನಾನು ವಹಿಸಿಕೊಳ್ಳಬೇಕೆಂದು ಹೇಳಿ ನಮ್ಮ ತಂದೆ ನನಗೆ ಸ್ಕೂಲು ಬಿಡಿಸಿದರು. ಅದರ ಪರಿಣಾಮವಾಗಿ ಸ್ಕೂಲು ಬಿಟ್ಟುದಂತೂ ಆಯಿತು. ನಾನು ಹೋಟಲು ನಡೆಸಲು ಒಪ್ಪಲಿಲ್ಲ. ನಾನು "ಓದಿ ಪ್ಯಾಸುಮಾಡಿ ಎಲ್ಲಿಯಾದರೂ ಕೆಲಸಕ್ಕೆ ಸೇರುತ್ತೇನೆ" ಎಂದೆ. ನಮ್ಮ ತಂದೆ ಅದನ್ನು ಒಪ್ಪಲಿಲ್ಲ. "ಹೋಟಲಿನಲ್ಲಿ ಗಲ್ಲದ ಮೇಲೆ ಕುಳಿತುಕೊಂಡು ಕೈತುಂಬಾ ಸಂಪಾದನೆ ಮಾಡುವುದನ್ನು ಬಿಟ್ಟು ಎಲ್ಲಿಯೋ ಹೋಗಿ ತ್ಯಾಪೇದಾರಿ ಮಾಡುತ್ತಾನಂತೆ" ಎಂದು ಗದ್ದರಿಸಿದರು. ದಿನವೂ ಹೋಟಲಿಗೆ ಹೋಗಿ ನೋಡಿಕೊಳ್ಳಬೇಕೆಂದು ಬಲಾತ್ಕಾರ ಮಾಡಿದರು. ನನಗದು ಇಷ್ಟವಿಲ್ಲದೇ ಮನೇಬಿಟ್ಟು ಹೊರಟು ಬಂದೆ. ನಮ್ಮ ತಂದೆ ಕೋಪ ಮಾಡಿಕೊಂಡು ನನಗಾಗಿ ಮಾಡಿದ್ದ ಹೋಟಲು ಮಾರಿಬಿಟ್ಟು ಚಿತ್ರಪಾಡಿಗೆ ಹೊರಟುಹೋದರು. ಅನಂತರವೇ ನಾನು ಹಿಂದಿಯನ್ನು ಓದಲು ಮೊದಲು ಮಾಡಿದ್ದು."

"ಹಾಗಾದರೆ ದೊಡ್ಡ ಮೇಸ್ಟರ ಪರಿಚಯ ನಿಮಗಾದದ್ದು ಅಲ್ಲಿಯೇ ಏನು ?"

"ಇಲ್ಲ. ಸ್ಕೂಲಿನಲ್ಲಿ ಓದುತ್ತಿದ್ದಾಗಲೇ ಆಯಿತು. ಅವರು ನನಗಿಂತ ಎರಡು ಮೂರು ವರ್ಷ ಮೇಲಿನ ತರಗತಿಯಲ್ಲಿ ಓದುತ್ತಿದ್ದರು. ಸಾಧಾರಣವಾಗಿ ಈ ವಿಷಯಗಳೆಲ್ಲವನ್ನೂ ಅವರೊಂದಿಗೆ ಮಾತನಾಡಿದ್ದೆ. ಅವರ ಅಭಿಪ್ರಾಯಗಳಿಗೂ ನನ್ನ ಅಭಿಪ್ರಾಯಗಳಿಗೂ ಸರಿಹೋಗುತಿತ್ತು. ಆದರಿಂದಲೇ ನಾವು ಅಣ್ಣ ತಮ್ಮಂದಿರಂತೆ ಇದ್ದದ್ದು."

"ಸರಿ. ಹಾಗಾದರೆ ಮನೆಬಿಟ್ಟು ಬಂದವರು ಪುನಃ ನೀವು ಹೋಗಲಿಲ್ಲವೋ ?"

"ಹಾಗಾಗಲಿಲ್ಲ. ನಮ್ಮ ತಂದೆ ಊರಿಗೆ ಹೊರಟು ಹೋದನಂತರ

ನಾನು ನಮ್ಮಣ್ಣನ ಹೋಟಲಿನಲ್ಲಿಯೇ ಊಟ ಮಾಡಿಕೊಂಡಿದ್ದೆ. ಕೆಲವು ದಿನ ಸುಮ್ಮನಿದ್ದವನು ನನ್ನನ್ನು ಆಕ್ಷೇಪಣೆ ಮಾಡತೊಡಗಿದ. ನನ್ನನ್ನು ನೋಡಿಕೊಳ್ಳಲು ಹೇಳಿ, ಗಲ್ಲಾದ ಮೇಲೆ ಕೂರಿಸಿ ಹೊರಟುಹೋಗುತ್ತಿದ್ದ. ಯಾವ ಕೆಲಸ ಮಾಡುವುದಿಲ್ಲವೆಂದು ಹೇಳಿ ನಾನು ನಮ್ಮ ತಾಯಿ ತಂದೆ ಗಳೊಡನೆ ಜಗಳವಾಡಿಕೊಂಡೆನೋ ಅದೇ ಕೆಲಸವನ್ನು ನಮ್ಮ ಅಣ್ಣನಿಗಾಗಿ ಮಾಡಬೇಕಾಗಿ ಬಂದುದನ್ನು ನನ್ನಿಂದ ಸೈರಿಸಲಾಗಲಿಲ್ಲ. ಅಲ್ಲಿಂದಲೂ ಹೊರಟು ಬಂದುಬಿಟ್ಟೆ."

"ಅಂದರೆ ಅಂದಿನಿಂದ ನೀವು ಸ್ವತಂತ್ರರಾಗಿದ್ದೀರಿ."

"ಹುಂ. ಹಾಗೆಂದುಕೊಳ್ಳಬಹುದು. ಆದರೆ ವಾಸ್ತವವಾಗಿ ಹಾಗಿಲ್ಲ. ನನಗೇನು ಕೆಲಸವಿದೆಯೇ, ನಾನೇನು ಸಂಪಾದನೆ ಮಾಡುತ್ತಿದ್ದೇನೆಯೇ, ಏನೂ ಇಲ್ಲ. ಒಂದು ವಿಧವಾಗಿ ನಮ್ಮ ಕುಟುಂಬದ ಮೇಲೆಯೇ ಅವಲಂಬನ ಮಾಡಿಕೊಂಡಿದ್ದೇನೆ. ತಾನು ಹೇಳಿದ ಮಾತು ಕೇಳಲಿಲ್ಲವಲ್ಲ ಎಂದು ನಮ್ಮಪ್ಪನಿಗೆ ನನ್ನ ಮೇಲೆ ಕೋಪ. ಆದರೆ ನಮ್ಮಮ್ಮನಿಗೆ ಹಾಗಿಲ್ಲ. ಅನೇಕ ಮಕ್ಕಳು ಸತ್ತು ಹುಟ್ಟಿದುದರಿಂದಲೂ ತನ್ನ ಇಳಿ ವಯಸ್ಸಿನಲ್ಲಿ ಹುಟ್ಟಿದುದ ರಿಂದಲೂ ನನ್ನ ಮೇಲೆ ಅವಳಿಗೆ ಅಪಾರ ಪ್ರೇಮ. ಮೊದಲಿನಿಂದಲೂ ಖರ್ಚಿ ಗೇನಾದರೂ ಬೇಕೆಂದು ಬರೆದರೆ ಕೊಟ್ಟು ಕಳುಹಿಸುತ್ತಲೇ ಇದ್ದಾಳೆ. ಅದ ರಿಂದಲೇ ಪಥ ನಡೆಯುತ್ತಿದೆ. ಈಗ ಕಾಶಿಗೆ ಹೋಗಿ ಓದಬೇಕಾಗಿದೆ ಎಂದೂ, ಹಣ ಬೇಕೆಂದೂ ಬರೆದೆ. ಐನೂರಾದರೂ ಕಳುಹಿಸಲಿ ಎಂದು ಸಾವಿರ ರೂಪಾಯಿ ಬೇಕೆಂದು ಬರೆದಿದ್ದೆ."

"ನಿಮ್ಮ ತಂದೆಗೂ ನಿಮಗೂ ಆಗದೇ ಇರುವಾಗ ನಿಮ್ಮಮ್ಮ ನಿಮಗೆ ಬೇಕಾದಾಗಲೆಲ್ಲಾ ಹಣವನ್ನು ಹೇಗೆ ಕಳುಹಿಸುತ್ತಾರೆ ?"

"ಆಗುವುದಿಲ್ಲವೆಂದರೆ ನಮ್ಮಿಬ್ಬರ ಮಧ್ಯದಲ್ಲಿ ಹುಲ್ಲಿಟ್ಟರೆ ಭೊಗ್ಗನೆ ಹತ್ತಿಕೊಂಡು ಬಿಡುತ್ತದೆ ಎಂದಲ್ಲ. ಒಂದು ತರಹವಾಗಿ ನೋಡಿದರೆ ನನಗೆ ಹಣ ಕಳಿಸುವುದು ದಂಡವೆಂದೂ ಕಳಿಸಬಾರದೆಂದೂ ನಮ್ಮ ತಂದೆಯ ಅಭಿ ಮತ. ನಮ್ಮಮ್ಮ ಹಟಮಾಡುತ್ತಾರೆ. ಕೋಪಮಾಡಿಕೊಳ್ಳುತ್ತಾರೆ. ಆಗ ವಿಧಿಯಿಲ್ಲದೇ ನಮ್ಮಪ್ಪ ಹಣ ಕಳಿಸಲು ಒಪ್ಪಿಕೊಳ್ಳುತ್ತಾರೆ.

ಮಾಧುವಿನ ಗೃಹಕೃತ್ಯದ ವಿಷಯವೆಲ್ಲವನ್ನೂ ಸಾಂಗೋಪಾಂಗವಾಗಿ ಕೇಳಿ ತಿಳಿದುಕೊಂಡುದಾಯಿತು. ಈಗವನು ಕಾಶಿಗೆ ಹೋಗುವಂತೆ ಕಂಡು ಬರುವುದಿಲ್ಲ. ಅವನು ಬಾಣಸಂದ್ರದಲ್ಲಿ ಕಾದಿದ್ದುದು ಹಣಕ್ಕಾಗಿಯೇ ಎಂದು ಶಾರದೆ ಹೇಳಿದ್ದಳು. ಐನೂರೋ ಆರುನೂರೋ ಬರುತ್ತದೆ ಎಂದು ನಿರೀಕ್ಷಿಸಿದ್ದ. ಆದರೆ ಈಗ ಬಂದಿರುವುದು ನೂರು ರೂಪಾಯಿಗಳು ಮಾತ್ರ. ಅದನ್ನು ಮಾತ್ರ ಇಟ್ಟುಕೊಂಡು ಹೇಗೆ ಹೋಗುವುದು ? ಹಾಗೆನ್ನಿಸಿದಾಗ ಪ್ರಮಿಳೆಗೆ ತನ್ನ ಮೈಮೇಲೆ ಕೆಲವು ಒಡವೆಗಳಿರುವುದು ನೆನಪಿಗೆ ಬಂದಿತು. ಆವಶ್ಯಕವಿದ್ದರೆ ಅದನ್ನು ತೆಗೆದುಕೊಡುವುದಕ್ಕೂ ತಾನು ಸಿದ್ಧ ಎಂದುಕೊಂಡಳು.

ಆದರೆ ಅವನ ಅಪ್ಪ ಅಮ್ಮ ಸಾಯುತ್ತಿದ್ದರೆ "ಅಲ್ಲಿಗೆ ಹೋಗಬೇಡ. ಕಾಶಿಗೆ ಹೋಗೋಣ" ಎಂದು ಹೇಳುವುದಾದರೂ ಹೇಗೆ ? ಅವರಲ್ಲಿ ಸಾಯುತ್ತಿದ್ದರೆ "ನನ್ನ ವಿಷಯ ಏನುಮಾಡುತ್ತೀರಿ ?" ಎಂದು ಕೇಳುವುದಾದರೂ ಹೇಗೆ ?

ಸರಿ. ತಾನು ಸದ್ಯದಲ್ಲಿ ಅಕ್ಕನ ಮನೆಗೇ ಹೋಗುವುದೆಂದು ತನ್ನಷ್ಟಕ್ಕೆ ತಾನೇ ಮನಸ್ಸಿನಲ್ಲಿ ನಿರ್ಣಯ ಮಾಡಿಕೊಂಡಳು. ದೇವರು ದೊಡ್ಡವನು. ಕಾಗದ ಬರೆಯುವಾಗ ಅವನು ಒಳ್ಳೆಯ ಬುದ್ಧಿಯನ್ನು ಕೊಟ್ಟ. ಶುಕ್ರವಾರದ ದಿನ ಬೆಳಗಾಗ ಹೊರಟುಬರುತ್ತೇನೆಂದು ಬರೆದದ್ದೇ ಸರಿಹೋಯಿತು. ಹಾಗಲ್ಲದೇ ಮಾಧುವಿನೊಡನೆ ಎಲ್ಲಿಗೋ ಹೊರಟುಹೋಗುತ್ತೇನೆಂದು ಬರೆದಿದ್ದರೆ ತನ್ನ ಗತಿಯೇನಾಗಬೇಕು ?

ಪ್ರಮಿಳೆ ಈ ರೀತಿಯಾಗಿ ತಾನೊಂದು ಸಿದ್ಧಾಂತಕ್ಕೆ ಬಂದಿದ್ದರೂ ಮಾಧು ಏನು ಹೇಳುತ್ತಾನೆಯೋ ಎಂದು ಸುಮ್ಮನಿದ್ದಳು. ಅವನು ಹೇಳಿದ.

"ಪ್ರಮಿಳಾ. ಈಗ ನನಗೊಂದು ಆಲೋಚನೆ ಹೊಳೆಯುತ್ತಿದೆ. ಅಮ್ಮ ತಂತೀ ಕೊಡಿಸಿರುವಾಗ ನಾನು ಊರಿಗೆ ಹೋಗಿಯೇ ಬರಬೇಕು. ಇಲ್ಲದಿದ್ದರೆ ಬಹಳ ನೊಂದುಕೊಳ್ಳುತ್ತಾಳೆ. ಎಷ್ಟಾದರೂ ನೀನು ಶುಕ್ರವಾರದ ಬೆಳಗಾಗ ಹೊರಟುಬರುವುದಾಗಿ ನಿಮ್ಮಕ್ಕನಿಗೆ ಬರೆದಿದ್ದೀಯಲ್ಲಾ. ನಾಳೆ ಬೆಳಗಾಗಿನ ಮೈಲಿನಲ್ಲಿ ನೀನು ಶಿವಮೊಗ್ಗೆಗೆ ಹೋಗು. ನಾನೂ ಅದೇ ರೈಲಿನಲ್ಲಿ ಕಡೂರಿನವರೆವಿಗೆ ಬಂದು ಚಿತ್ರಪಾಡಿಗೆ ಹೋಗುತ್ತೇನೆ. ಊರಿಗೆ

ಹೋಗಿ ಸ್ವಲ್ಪ ಅವರ ಯೋಗಕ್ಷೇಮ ನೋಡಿಕೊಂಡು ಶಿವಮೊಗ್ಗೆಗೆ ಬರುತ್ತೇನೆ. ಶಿವನಸಮುದ್ರದಲ್ಲಿ ನಿನಗಿರುವಷ್ಟು ಆತಂಕ ಶಿವಮೊಗ್ಗೆಯಲ್ಲಿರಲಾರದು. ನಾನು ಬಂದು ಹೇಗಾದರೂ ನಿನ್ನನ್ನು ನೋಡುತ್ತೇನೆ. ಅನಂತರ ಮುಂದಿನ ವಿಷಯ ಇತ್ಯರ್ಥ ಮಾಡೋಣ."

ಆ ವಿಷಯವನ್ನವಳು ಮೊದಲೇ ಯೋಚನೆ ಮಾಡಿದ್ದರೂ ಅವನ ಬಾಯಿಂದಲೇ ಆ ಮಾತುಗಳನ್ನು ಕೇಳಿ ಖಿನ್ನಳಾದಳು. ಈಗಾಗಲೇ ಕಾಶೀ ನಗರದ ಜೀವನವನ್ನು ಮನಸ್ಸಿನಲ್ಲಿಯೇ ಚಿತ್ರಿಸಿಕೊಳ್ಳುತ್ತಿದ್ದವಳಿಗೆ ಆ ಮಾತು ಕೇಳಿ ನಿರಾಶೆಯಾಯಿತು. ಅವಳು ಸುಮ್ಮನಿದ್ದಳು.

"ಯಾಕೆ, ಪ್ರಮಿಳಾ ! ನನ್ನ ಮಾತು ನಿನಗೆ ಸರಿಯೆನಿಸಲಿಲ್ಲವೇ ?"

ತನ್ನ ಖಿನ್ನತೆಯನ್ನು ಸರಿಪಡಿಸಿಕೊಳ್ಳುತ್ತಾ "ಹಾಗೇನಿಲ್ಲ. ಅಮ್ಮ ಅಪ್ಪ ಇಬ್ಬರೂ ಹಾಸಿಗೆ ಹಿಡಿದು ಮಲಗಿದ್ದಾರೆಂದರೆ ನೀವು ಹೋಗಬೇಕೋ ಇಲ್ಲವೋ. ಹೋಗಿಬನ್ನಿ. ನೀವು ಹೇಳಿದಂತೆ ನಾನು ನಾಳೆಯ ದಿನದ ರೈಲಿನಲ್ಲಿ ಶಿವಮೊಗ್ಗಾಗೆ ಹೋಗುತ್ತೇನೆ" ಎಂದಳು.

"ದಯವಿಟ್ಟು ಅನ್ಯಥಾ ಭಾವಿಸಬೇಡ. ಏನೋ ಅಸಂದರ್ಭದಿಂದ ಹೀಗಾಯಿತು. ನಾನು ಊರಿಗೆ ಹೋದರೂ ನನ್ನ ಮನಸ್ಸು ನಿನ್ನೊಂದಿಗೇ ಇರುತ್ತದೆ. ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ಬಂದು ಬಿಡುತ್ತೇನೆ."

ಮಾಧವು ಬಗೆಬಗೆಯಾಗಿ ಹೇಳಿ ಪ್ರಮಿಳೆಯನ್ನು ಸಮಾಧಾನಗೊಳಿಸಿದ. ಅವರು ಮನೆಗೆ ಬಂದರು.

ಮಾರನೆಯ ದಿನ ಪ್ರಾತಃಕಾಲ ಗಂಗಮ್ಮನ ಮನೆಯಲ್ಲಿ ಯಾರೂ ಎದ್ದಿರಲಿಲ್ಲ. ಉಷಃಕಾಲವಾದರೂ ಎಲ್ಲರೂ ಮಲಗಿಯೇ ಇದ್ದರು.

ವರಾಂಡದಲ್ಲಿ ಮಲಗಿದ್ದ ಶಾರದೆಗೆ ಎಚ್ಚರವಾಯಿತು. ದಿನವೂ ಅವಳಿಗೆ ಹೊತ್ತಿಗೆ ಮುಂಚೆಯೇ ಎಚ್ಚರವಾಗುತಿತ್ತು. ಎಲ್ಲರಿಗಿಂತಲೂ ಮೊದಲೇ ಏಳುತ್ತಿದ್ದಳು.

ಹಜಾರದಲ್ಲಿ ಮಲಗಿದ್ದ ತಾಯಿ ಎಚ್ಚರಗೊಂಡಿದ್ದಾಳೆಯೋ ಎಂದು

ನೋಡಿದಳು. ಇಲ್ಲ ಅವರಿಗೆ ಎಚ್ಚರವಾಗಿರಲಿಲ್ಲ. ಪಕ್ಕದಲ್ಲಿ ಮಲಗಿ ನಿದ್ರಿಸುತ್ತಿದ್ದ ಮಕ್ಕಳಂತೆಯೇ ನಿದ್ದೆಯಲ್ಲಿದ್ದಳು ಆ ಮುದುಕಿ.

ಬೀದಿಯ ಕೋಣೆಯ ಕಡೆಗೆ ತಿರುಗಿ ನೋಡಿದಳು. ಒಂದು ಬಾಗಿಲು ಹಾಕಿದ್ದು ಮತ್ತೊಂದು ಬಾಗಿಲು ಸೇರಿಸಿದ್ದರಿಂದ ಮಾಧು ಎದ್ದಿದ್ದಾನೆಯೋ ಇಲ್ಲವೋ ಎಂಬುದು ಕಂಡುಬರುತ್ತಿರಲಿಲ್ಲ. ಅದನ್ನೂ ಆ ಆಲೋಚನೆಯೇ ಅವಳಿಗಿರಲಿಲ್ಲ. ಮಾಧು ಆ ಸಮಯದಲ್ಲಿ ಎಚ್ಚರವಾಗಿರುತ್ತಾನೆಂದು ಸ್ವಪ್ನದಲ್ಲಿಯೂ ಸಹ ಊಹಿಸುವುದು ಸಾಧ್ಯವಿರಲಿಲ್ಲ. ಎಂಟು ಗಂಟೆಯಾದ ಮೇಲೆಯೂ ಮೂರು ನಾಲ್ಕು ಬಾರಿ ಕೂಗುಹಾಕಿ ಎಬ್ಬಿಸಬೇಕು. ಪ್ರಾಯಕ್ಕೆ ಬಂದ ಹುಡುಗ. ಚೆನ್ನಾಗಿ ನಿದ್ದೆಮಾಡುವುದು ಸ್ವಾಭಾವಿಕ.

ತನ್ನ ಪಕ್ಕದಲ್ಲಿಯೇ ಹಾಸಿಗೆ ಹಾಸಿಕೊಂಡು ಮಲಗಿರುವ ಪ್ರಮಿಳೆಯ ಕಡೆ ನೋಡಿದಳು. ಅವಳೂ ಎಚ್ಚರವಾಗಿರುವಂತಿರಲಿಲ್ಲ.

ಇದೇ ಒಳ್ಳೆಯ ಸಮಯ. ಈಗಲೇ ಪ್ರಮಿಳೆಯನ್ನು ಎಬ್ಬಿಸಿ ಒಂದೆರಡು ಮಾತುಗಳನ್ನು ಹೇಳಿಬಿಡುವುದು ಒಳ್ಳೆಯದು. ಈಗ ಬಿಟ್ಟರೆ ಯಾರಿಗೂ ತಿಳಿಯದಂತೆ ಪ್ರತ್ಯೇಕವಾಗಿ ಅವಳಿಗೆ ಆ ಮಾತುಗಳನ್ನು ಹೇಳುವುದು ಸಾಧ್ಯವೇ ಇಲ್ಲ.

ಮಾಧು ಈ ಬಾರಿ ಅವರ ಮನೆಗೆ ಬಂದು ಎರಡು ಮೂರು ವಾರಗಳಾಗುತ್ತ ಬಂದಿದ್ದವು. ಗಂಗಮ್ಮ ಹೇಳಿದಂತೆ ಅವನು ಪ್ರಮಿಳೆಯನ್ನು ನೆನೆಸಿಕೊಳ್ಳದ ದಿನವೇ ಇರಲಿಲ್ಲ. ಒಂದಲ್ಲ ಒಂದು ವಿಧವಾಗಿ ಕಾರಣವಿರಲಿ, ಕಾರಣವಿಲ್ಲದಿರಲಿ ಪ್ರಮಿಳೆಯ ಮಾತೆತ್ತಿ ಅವಳನ್ನು ಪ್ರಶಂಸಿಸುತ್ತಿದ್ದ. ಶಾರದೆಯೂ ಸೂಕ್ಷ್ಮವಾಗಿ ಒಂದೊಂದೇ ಮಾತು ಕೇಳಿ ಪ್ರಮಿಳೆಯ ವಿಷಯವನ್ನು ವಿಚಾರಿಸಿ ತಿಳಿದುಕೊಂಡಿದ್ದಳು.

ಪ್ರಮಿಳೆಯ ವಿಷಯದಲ್ಲಿ ಶಾರದೆಗೆ ನಿಕೃಷ್ಟವಾದ ಅಭಿಪ್ರಾಯವಿತ್ತು. ಎಲ್ಲಿಯೋ ಒಬ್ಬ ಸ್ಕೂಲು ಮೇಸ್ಟರ ಮಗಳು. ಹಿಂದೀ ಹೇಳಿಕೊಡುತ್ತಿದ್ದ ಯುವಕನನ್ನು ಪ್ರೇಮಿಸಿದ್ದೇನೆಂದುಕೊಂಡಿದ್ದಾಳೆ. ಅದರಿಂದ ತಾಯಿ ತಂದೆಗಳು ಗೊತ್ತುಮಾಡುವ ವರಗಳನ್ನು ಮದುವೆಯಾಗುವುದಿಲ್ಲವೆಂದು ಮೊಂಡತನ ಮಾಡಿದ್ದಾಳೆ.

ಹೀಗೆ ಶಾರದೆಗೆ ಪ್ರಮಿಳೆಯ ಮೇಲೆ ಅಸಮಾಧಾನವಾಗಿತ್ತು. ತಾನೆಷ್ಟೋ ವಿಶ್ವಾಸನಾಡುತ್ತಿದ್ದ ಸಾಧುವಿನ ಮೇಲೆಯೂ ಕೋಪ ಬಂದಿತ್ತು.

ಬಡವನ ಕೋಪ ದವಡೆಗೆ ಮೂಲ ಎಂಬಂತೆ ತನಗೇಕೆ ಈ ಹವ್ಯಾಸ. ಎಲ್ಲಿಯಾದರೂ ಹಾಳಾಗಿ ಹೋಗಲಿ – ಎಂದು ಬಾಯಿ ಮುಚ್ಚಿಕೊಂಡಿದ್ದಳು. ಆದರೆ ಅಸಮಾಧಾನ ಕೋಪಗಳು ಒಳಗೊಳಗೇ ಕುದಿಯುತ್ತಿದ್ದವು.

ಪ್ರಮಿಳೆಯು ಬಾಣಸಂದ್ರಕ್ಕೆ ಬಂದು, ಅವಳೊಡನೆ ಮಾತನಾಡಿದ ನಂತರ ಶಾರದೆಯ ಅಭಿಪ್ರಾಯಗಳು ಬದಲಾವಣೆ ಹೊಂದಿದ್ದವು. ಪ್ರಮಿಳೆಯ ಮುಗ್ಧವಾದ ಮುಖ, ಸರಳವಾದ ಮನಸ್ಸು, ಸದ್ಗುಣಗಳನ್ನು ನೋಡಿ "ನಾನೆಂದುಕೊಂಡಂತೆ ಕೆಟ್ಟವಳಲ್ಲ. ಒಳ್ಳೆಯ ಹುಡುಗಿ. ತಪ್ಪುದಾರಿಯಲ್ಲಿ ಹೆಜ್ಜೆಯಿಟ್ಟಿದ್ದಾಳೆ. ತಿಳಿದ ಎರಡು ಬುದ್ಧಿಯ ಮಾತುಗಳನ್ನು ಹೇಳಿಬಿಡಬೇಕು" ಎಂದು ಮನಸ್ಸಿನಲ್ಲಿಯೇ ಅಂದುಕೊಂಡಿದ್ದಳು.

ಈ ಎರಡು ದಿನಗಳಿಂದ ಎರಡು ಮಾತು ಹೇಳುವುದಕ್ಕೆ ಸಮಯ ಕಾಯುತ್ತಿದ್ದಳು. ಅವಕಾಶ ಸಿಕ್ಕಲಿಲ್ಲ.

ಈಗ ಬಿಟ್ಟರೆ ಇನ್ನು ಅವಕಾಶವೇ ಇಲ್ಲ.

ಶಾರದೆ ಪ್ರಮಿಳೆಯ ಭುಜ ಹಿಡಿದು ಅಲ್ಲಾಡಿಸಿ ಎಬ್ಬಿಸಿದಳು.

ಅವಳು ಅರನಿದ್ದೆಯಲ್ಲಿ "ಏನು, ಏನು ?" ಎಂದಳು.

"ಮಾತನಾಡಬೇಡ. ಸ್ವಲ್ಪ ಎದ್ದು ಬಾ."

ಪ್ರಮಿಳೆಗೆ ಆ ಮಾತು ಕೇಳಿ ಗಾಬರಿಯಾಯಿತು. ಆದರೂ ಮೇಲೆದ್ದು ಶಾರದೆಯನ್ನು ಅನುಸರಿಸಿ ಹೋದಳು.

ಇನ್ನೂ ಸೂರ್ಯೋದಯವಾಗಿರಲಿಲ್ಲ. ದಿಗಂತದಿಂದ ಗೇಣುದ್ದ ಮೇಲುಗಡೆಯಲ್ಲಿ ಚಂದ್ರ ಪ್ರಕಾಶರಹಿತನಾಗಿ ತೇಲಿಹೋಗುತ್ತಿದ್ದ. ಬೆಳಕು ಕತ್ತಲೆಗಳ ಸಮ್ಮಿಶ್ರಣವು ಯಾವುದೋ ಹೊಸ ಲೋಕದಂತೆ ಭಾಸವಾಗುತಿತ್ತು.

ಮನೆಯಿಂದ ಅನತಿ ದೂರದಲ್ಲಿಯೇ ಇದ್ದ ಬಯಲಿಗೆ ಹೋದರು.

ಅಲ್ಲಿ ಶಾರದೆ ನಿಂತುಕೊಂಡಳು. ಜೊತೆಯಲ್ಲಿ ಬರುತ್ತಿದ್ದವಳು ನಿಂತುದರಿಂದ ಪ್ರಮಿಳೆಯೂ ಯಾಂತ್ರಿಕವಾಗಿ ನಿಂತುಕೊಂಡಳು.

ಶಾರದೆ ಹೇಗೆ ಮಾತು ಆರಂಭಿಸುವುದೆಂದು ಯೋಚನೆ ಮಾಡುತ್ತಿದ್ದುದರಿಂದ ಕೂಡಲೇ ಮಾತನಾಡಲಿಲ್ಲ. ಸಿಕ್ಕಿದ ಆ ಅವಕಾಶದಲ್ಲಿ ಪ್ರಮಿಳೆಯೂ ಮೂಡಲ ಕಡೆಗೆ ನೋಡತೊಡಗಿದಳು.

ಸೂರ್ಯೋದಯಕ್ಕೆ ಕ್ಷಣಕಾಲ ಅವಕಾಶವಿತ್ತು. ಪೂರ್ವದಿಂಗತದಲ್ಲಿ ಅರ್ಧಮಂಡಲಾಕಾರವಾಗಿ ಗುಲಾಬಿಯ ರೇಖೆಯಂತೆ ಕೆಂಬಣ್ಣವು ತಾನೇ ತಾನಾಗಿ ಪ್ರಕಾಶಿಸುತಿತ್ತು. ದಿಗಂತದ ಬಳಿ ದಟ್ಟವಾಗಿದ್ದ ಆ ಬಣ್ಣ ಅಂತರಿಕ್ಷದಲ್ಲೆಲ್ಲಾ ಮಾಸಲು ಮಾಸಲಾಗಿ ಪಸರಿಸಿತ್ತು. ಮೇಲಿದ್ದ ಮೋಡಗಳು ಕುಂದಣದ ನೀರಿನಲ್ಲಿ ಮಿಂದಂತೆ ಪರಿಶೋಭಿಸುತ್ತಿದ್ದವು.

ಮತ್ತೊಂದು ಕ್ಷಣ ಹೊರಳಿತು.

ದಿಗಂತದ ಕತ್ತಲೆಯ ಅಂಚಿನಿಂದ ಅರುಣವರ್ಣದ ಸೂರ್ಯಬಿಂಬ ಹೊರಗೆ ಬರಲಾರಂಭಿಸಿತು. ಮೂಶೆಯಲ್ಲಿ ಕಾದ ಲೋಹದ್ರವದಂತೆ ಕಣ್ಣು ಮುಚ್ಚಿ ತೆಗೆಯುವಷ್ಟು ಅಲ್ಪಕಾಲದಲ್ಲಿ ಕೋಟ್ಯಾಂತರ ಸುತ್ತುಗಳನ್ನು ಸುತ್ತುತ್ತಾ ಕಳಕಳಿಸುತ್ತಾ ಸೂರ್ಯ ಪೂರ್ಣವಾಗಿ ಹೊರಬಂದ.

ಅಬ್ಬಾ! ಅದೇನು ಶೋಭೆ. ಅದೇನು ಪ್ರಕಾಶ. ರವಿ ಇನ್ನೂ ಕೆಂಪಗೇ ಇದ್ದಾನೆ. ಎರಡು ತೋಳುಗಳನ್ನೂ ಹಿಗ್ಗಲಿಸಿ ಹಿಡಿದುಕೊಳ್ಳುವ ಚೆಂಡಿನಷ್ಟು ದೊಡ್ಡದಾಗಿದ್ದಾನೆ.

"ಶಾರದನ್ನ. ಸೂರ್ಯೋದಯವನ್ನು ನೋಡಿದಿರಾ? ಎಷ್ಟು ಚೆನ್ನಾಗಿದೆ."

ಸೂರ್ಯೋದಯದಲ್ಲಿ ಶಾರದೆಗೆ ಆಸಕ್ತಿಯಿರಲಿಲ್ಲ. ಅವಳ ಮನಸ್ಸು ಅನ್ಯಾಸಕ್ತವಾಗಿತ್ತು.

"ಅದೇನು ಬಿಡಮ್ಮ ಸೂರ್ಯೋದಯಕ್ಕೇನು? ದಿನವೂ ಆಗುತ್ತದೆ"

"ಹಾಗಾದರೆ ನೀವು ಸೂರ್ಯೋದಯವನ್ನು ನೋಡಿಯೇ ಇಲ್ಲ. ಊರಿನಲ್ಲಿ ನಮ್ಮ ಮನೆ ಕಡೆಯ ಸಾಲು. ದಿನವೂ ಸೂರ್ಯೋದಯದ ಹೊತ್ತಿಗೆ ಎದ್ದು ನೋಡುತ್ತೇನೆ. ನೀವೂ ನೋಡಬೇಕು. ದಿನವೂ ಆಗುತ್ತದೆ

ಎನ್ನುವಷ್ಟು ಸಾಧಾರಣವಾದ ವಿಷಯವಲ್ಲ. ಒಂದೊಂದು ದಿನದ ಸೂರ್ಯೋದಯವೇ ಒಂದೊಂದು ರೀತಿ. ಒಂದು ದಿನವಿದ್ದಂತೆ ಒಂದು ದಿನವಿರುವುದಿಲ್ಲ.

"ಅದಿರಲಿ ಪ್ರಮಿಳಾ. ಈ ಎರಡು ದಿನಗಳಿಂದಲೂ ನಿನಗೊಂದು ಮಾತು ಹೇಳಬೇಕು ಎಂದು ಯೋಚಿಸುತ್ತಿದ್ದೇನೆ. ಹೇಳಲೋ ಬೇಡವೋ ಎಂದು ಮನಸ್ಸು ಹಿಂದೆ ಮುಂದೆ ತೂಗುತ್ತಿದೆ"

"ಹೇಳಿ. ಎಂತಹ ವಿಷಯವಾದರೂ ಪರವಾಯಿಲ್ಲ."

"ಹೇಳುತ್ತೇನೆ. ಹೇಳಬೇಕೆಂದೇ ನಿರ್ಧಾರ ಮಾಡಿಬಿಟ್ಟಿದ್ದೇನೆ. ಅದರಿಂದಲೇ ನಿನ್ನನ್ನು ಬೇಗ ಎಬ್ಬಿಸಿ ಕರೆತಂದಿದ್ದೇನೆ. ನೀನು ತಪ್ಪು ತಿಳಿದುಕೊಂಡರೂ ಚಿಂತೆಯಿಲ್ಲ. ಮನೆಯವರೆಲ್ಲಾ ನನಗೆ ಚೀಮಾರಿ ಹಾಕಿದರೂ ಪರವಾಯಿಲ್ಲ. ತಿಳಿದುದನ್ನು ಹೇಳುವುದು ನನ್ನ ಕರ್ತವ್ಯ. ಹೇಳುತ್ತೇನೆ."

ವಿಷಯ ಸಂದಿಗ್ಧವಾಗಿರುವಂತಿದೆ ಎಂದು ಸೂರ್ಯಮಂಡಲದ ಕಡೆಯಿಂದ ಪ್ರಮಿಳೆ ಶಾರದೆಯ ಕಡೆ ದೃಷ್ಟಿ ತಿರುಗಿಸಿದಳು.

"ನೀನು ನಮ್ಮೂರಿಗೆ ಬಂದುದು ಸರಿಹೋಗಲಿಲ್ಲ."

"ಯಾಕೆ ?"

"ಯಾಕೆ ? ನೀನೇ ಸ್ವಲ್ಪ ನಿಧಾನವಾಗಿ ಯೋಚನೆ ಮಾಡಿದರೆ ಗೊತ್ತಾಗುತ್ತದೆ. ನೀನು ಶಿವಮೊಗ್ಗಾಕ್ಕೆ ನಿಮ್ಮಕ್ಕನ ಮನೆಗೆ ಹೋಗುತ್ತೇನೆಂದು ಮನೇಬಿಟ್ಟು ಹೊರಟವಳು ಇಲ್ಲಿಗೆ ಬಂದು ಇಳಿದಿದ್ದೀ. ಈ ವಿಷಯ ನಿಮ್ಮ ತಾಯಿ ತಂದೆಗಳಿಗೆ ತಿಳಿದರೆ ಅವರೇನೆಂದುಕೊಳ್ಳುತ್ತಾರೆ. ಈ ವಿಷಯ ಯಾರ ಕಿವಿಗಾದರೂ ಬಿದ್ದರೆ ನಿನಗೆ ಮದುವೆಯಾಗುತ್ತದೆ ಎಂದುಕೊಂಡಿದ್ದೀಯಾ ?"

"ಮದುವೆಗೆ ಏನಡ್ಡೀ ?"

"ಅವಸರ ಪಡಬೇಡ, ಪ್ರಮಿಳಾ. ನೀನು ಹೇಳದೇ ಕೇಳದೇ ಕಂಡವರ ಜೊತೆಯಲ್ಲಿ ಎರಡು ದಿನವಿದ್ದರೆ ನಿನ್ನನ್ನು ಯಾವ ಮುಂಡೇಮಗ ಮದುವೆಯಾಗುತ್ತಾನೆ, ಹೇಳು."

"ಅದೇ ನಿಮಗೆ ಗೊತ್ತಿಲ್ಲದಿರುವುದು ಶಾರದಮ್ಮ. ನಾನು ಮೇಸ್ಟರನ್ನು ಮದುವೆ ಮಾಡಿಕೊಳ್ಳುತ್ತೇನೆ."

"ಅದೆಲ್ಲಾ ಸರಿಯಿಲ್ಲ, ಪ್ರಮಿಳಾ. ಅಪ್ಪ ಅಮ್ಮ ಯಾರನ್ನು ಮದುವೆ ಮಾಡುತ್ತೇವೆಂದು ಗೊತ್ತುಮಾಡುತ್ತಾರೆಯೋ ಹೆಣ್ಣುಮಕ್ಕಳು ಅವರನ್ನೇ ಮದುವೆ ಮಾಡಿಕೋಬೇಕು."

ಪ್ರಮಿಳೆಯು ಉದ್ವಿಗ್ನಳಾಗಿ ಕೇಳಿದಳು.

"ಹಾಗಾದರೆ ಪ್ರೇಮಕ್ಕೆ ಬೆಲೆಯಿಲ್ಲವೆನ್ನುತ್ತೀರಾ ?"

ಶಾರದೆಯು ನಕ್ಕು "ಪ್ರೇಮವೆಂಬುದು ಈ ಪ್ರಪಂಚದಲ್ಲಿ ಎಲ್ಲಿದೆಯೋ ನನಗೆ ಗೊತ್ತಿಲ್ಲ, ಪ್ರಮಿಳಾ. ನನ್ನನ್ನು ಕೇಳುವ್ಹದಾದರೆ ಗಂಡು ಹೆಣ್ಣುಗಳಿಗೆ ಪರಸ್ಪರ ಅವಲಂಬನೆಯು ಬೇಕು. ಅದರಿಂದ ಅವರು ಮದುವೆಯಾಗುತ್ತಾರೆ. ಮದುವೆ ಎಂದರೆ ಏನು ಎಂದುಕೊಂಡಿದ್ದೀಯೆ ? ಹೋಮ ಹವನಗಳು, ನಾಗವಲ್ಲಿ ಅಕ್ಷತಕ್ಷತೆಗಳು ಇವುಗಳನ್ನು ಮದುವೆ ಎಂದುಕೊಂಡಿದ್ದೀಯಾ ? ಅಲ್ಲ. ಹೆಣ್ಣು ಗಂಡುಗಳು ಯಾವಜ್ಜೀವವೂ ಜೊತೆಯಲ್ಲಿ ಬದುಕುವುದಕ್ಕೆ ಮಾಡಿಕೊಳ್ಳುವ ಕಟ್ಟುಪಾಡೇ ಮದುವೆ. ಆ ಕಟ್ಟುಪಾಡು ಸರ್ವೇಸಾಧಾರಣವಾಗಿ ಸಮಾಜದಲ್ಲಿ ಹೇಗೆ ಆಗುತ್ತದೆಯೋ ಹಾಗೆ ಆದರೇನೇ ಅದು ಸಾಧಾರಣವಾಗಿ ಸ್ಥಿರವಾಗಿರುವುದು. ಹಾಗೆ ನಡೆದ ಕಟ್ಟುಪಾಡುಗಳೇ ಊರ್ಜಿತವಾಗದೇ ಹೋಗುತ್ತವೆ. ಹಾಗಿರುವಾಗ ಅದಕ್ಕೆ ವಿರೋಧವಾಗಿ ನಡೆದ ಕಟ್ಟುಪಾಡುಗಳು ಉಳಿದಾವೇ ? ಈ ವಿರೋಧವಾದ ಕಟ್ಟುಪಾಡುಗಳಲ್ಲಿ ಗಂಡು ಹೆಣ್ಣುಗಳಿಗೆ ನಂಬಿಕೆ ತಪ್ಪಿಹೋಗುತ್ತದೆ. ಖಂಡಿತವಾಗಿ ಹೇಳುತ್ತೇನೆ, ಕೇಳು. ಹೆಣ್ಣು ಈ ಪ್ರಪಂಚದಲ್ಲಿ ಪರಾಶ್ರಯವಿಲ್ಲದೇ ಬದುಕಲಾರಳು. ಸಂಪ್ರದಾಯಕ್ಕೆ ವಿರೋಧವಾಗಿ ಏರ್ಪಡುವ ಕಟ್ಟುಪಾಡಿನಿಂದ ಹೆಣ್ಣು ನಿರಾಶ್ರಿತಳಾಗುತ್ತಾಳೆ" ಎಂದಳು.

ಪ್ರಮಿಳೆಯ ಹೃದಯವು ಒಮ್ಮೆ ಕಂಪಿಸಿತು.

"ಸ್ವಲ್ಪ ಸ್ಪಷ್ಟವಾಗಿ ಹೇಳಿ, ಶಾರದಮ್ಮ. ಮೇಸ್ಟರು ನನ್ನನ್ನು ಆಶ್ರಯಹೀನೆಯಾಗಿ ಮಾಡುತ್ತಾರೆಂದು ನಿಮ್ಮ ಅಭಿಪ್ರಾಯವೇನು ?"

"ನಾನು ಯಾರ ವಿಷಯವನ್ನೂ ವೈಯಕ್ತಿಕವಾಗಿ ಹೇಳುತ್ತಿಲ್ಲ,

ಪ್ರಮಿಳಾ. ಲೋಕರೂಢಿಯನ್ನು ಹೇಳುತ್ತೇನೆ. ನನಗೆ ಗೊತ್ತಿರುವಂತೆ ಮಾಧು ಬಹಳ ಒಳ್ಳೆಯ ಹುಡುಗ. ನೀವು ಒಬ್ಬರಿಗೊಬ್ಬರಿಗೆ ಅನುರೂಪರಾಗಿದ್ದೀರಿ. ಆದರೂ ನೀವು ಲೋಕರೂಢಿಗೆ ವಿರೋಧವಾಗಿ ಮದುವೆ ಮಾಡಿಕೊಳ್ಳಕೂಡದೆಂದು ನನ್ನ ಅಭಿಮತ. ಇದನ್ನು ನಿಮ್ಮಿಬ್ಬರ ಹಿತದೃಷ್ಟಿಯಿಂದಲೂ ಹೇಳುತ್ತಿದ್ದೇನೆ."

"ನಾವಿಬ್ಬರೂ ಲೋಕರೂಢಿಯಂತೆಯೇ ಮದುವೆ ಮಾಡಿಕೊಂಡರಾಯಿತಲ್ಲ."

"ಇಲ್ಲ. ಅದು ಏನಾದರೂ ಲೋಕರೂಢಿಯಂತಾಗುವುದಿಲ್ಲ. ಯಾವ ಹೆಣ್ಣು ನಿನ್ನ ಹಾಗೆ ಅಕ್ಕನ ಮನೆಗೆ ಹೋಗುತ್ತೇನೆಂದು ಹೇಳಿ ದಾರಿಯಲ್ಲಿ ಇಳಿದು ಹೀಗೆ ಬಂದು ಯಾರ ಮನೆಯಲ್ಲಿಯೋ ಎರಡು ದಿನಗಳಿರುವುದಿಲ್ಲ."

"ಯಾರೂ ಹಾಗೆ ಮಾಡದಿರಬಹುದು. ಆದರೇನಂತೆ. ನಾನು ಅವರನ್ನು ಪ್ರೀತಿಸಿದ್ದೇನೆ. ಆದರಿಂದ ಅವರೊಂದಿಗೆ ಬಂದಿದ್ದೇನೆ. ಇದರಲ್ಲಿ ತಪ್ಪೇನಿದೆ ?"

"ಪ್ರಮಿಳಾ ನೀನಿನ್ನೂ ಹುಡುಗಿ. ನಿನಗೆ ಎಷ್ಟು ಹೇಳಿದರೂ ಅರ್ಥವಾಗುವುದಿಲ್ಲ. ಅದರಿಂದ ನಿನಗಿಂತಲೂ ಅನುಭವವಿರುವವರು ಹೇಳಿದಂತೆ ಕೇಳುವುದೊಂದೇ ನಿನಗೆ ಸುಲಭವಾದ ಮಾರ್ಗ."

"ನಾನು ಈಗ ಬಂದಿರುವುದರಲ್ಲಿ ಏನು ತಪ್ಪಿದೆ, ಹೇಳಿ. ನಾನು ಕಳ್ಳತನದಿಂದ ಬಂದಿದ್ದೇನೆಂದುಕೊಳ್ಳಬೇಡಿ. ಬೇಕಾದರೆ ಈ ದಿನವೇ ನನ್ನ ಅಪ್ಪ ಅಮ್ಮನಿಗೂ ಅಕ್ಕನಿಗೂ ನಾನಿಲ್ಲಿ ಇಳಿದು ಮೇಷ್ಟರೊಂದಿಗೆ ಇದ್ದೇನೆಂದು ಕಾಗದಗಳನ್ನು ಬರೆಯುತ್ತೇನೆ."

"ಅದನ್ನೇ ನಾನು ಹುಡುಗತನವೆಂದು ಹೇಳುವುದು. ನಿಮ್ಮ ಅಪ್ಪ, ಅಮ್ಮ, ಅಕ್ಕ ಯಾರಿಗೂ ಹೆದರಬೇಕಾಗಿಲ್ಲ. ಲೋಕಕ್ಕೆ ಹೆದರಬೇಕು. ಈಗ ನಿನ್ನೆಯ ದಿನ ಚಿತ್ರಪಾಡಿಯಿಂದ ತಂತೀ ಬರುವವರೆವಿಗೆ ನೀವುಗಳು ಏನೆಂದುಕೊಂಡಿದ್ದಿರಿ ? ಕಾಶಿಗೆ ಹೊರಟುಹೋಗುವುದಾಗಿ ಲೆಕ್ಕ ಹಾಕಿಕೊಂಡಿದ್ದಿರಿ. ಆದರೆ ತಂತೀ ಬಂದ ಮೇಲೆ ಪರಿಸ್ಥಿತಿಯು ಬದಲಾಯಿಸಿದೆ. ಮಾಧು ಚಿತ್ರಪಾಡಿಗೆ ಹೋಗುತ್ತಾನೆ. ನೀನು ಶಿವಮೊಗ್ಗೆಗೆ ಹೋಗುತ್ತೀ,

ಈ ಪರಿಸ್ಥಿತಿ ಬರುತ್ತದೆಂದು ನಿನ್ನೆಯ ದಿನ ಬೆಳಗಾಗ ನಿಮಗೇ ತಿಳಿದಿರಲಿಲ್ಲ. ಹಾಗೆ ಅನಿರೀಕ್ಷಿತವಾದ ಯಾವುದೋ ಪರಿಸ್ಥಿತಿಯು ಒದಗಿ ಬಂದು ಮಾಧು ವಿಗೂ ನಿನಗೂ ಬಿಟ್ಟುಹೋಗುತ್ತದೆಂದುಕೊಳ್ಳೋಣ. ಆಗ ನೀನಿಲ್ಲಿ ಎರಡು ದಿನಗಳಿದ್ದುದು ಲೋಕಕ್ಕೆ ಗೊತ್ತಾದರೆ ನಿನ್ನನ್ನು ಯಾರು ಮದುವೆ ಮಾಡಿ ಕೊಳ್ಳುತ್ತಾರೆ? ಒಂದುವೇಳೆ ಮದುವೆಯಾಗುತ್ತದೆ ಎಂದೇ ಇಟ್ಟುಕೋ. ನೀನು ಮದುವೆಗೆ ಮೊದಲು ಹೀಗೆ ಇಲ್ಲಿ ಬಂದು ಎರಡು ದಿನಗಳು ಇದ್ದುದು ನಿನ್ನ ಗಂಡನಿಗೆ ಗೊತ್ತಾದರೆ ನಿಮ್ಮ ಸಂಸಾರ ಒಡೆದು ಭಗ್ನವಾಗಿ ಹೋಗು ತ್ತದೆ. ಮದುವೆಯೇ ಬೇಡವೆಂದು ನೀನು ಮೊಂಡುವಾದ ಮಾಡಬಹುದು. ಆದರದು ಪ್ರಯೋಜನವಿಲ್ಲದ ಮಾತು."

ಪ್ರಮಿಳೆಯು ಗಳಿಗೆಯ ಕಾಲ ಯೋಚಿಸಿ "ನೀವು ಹೇಳುವುದು ಸರಿ ಯೆಂದೇ ಇಟ್ಟುಕೊಳ್ಳೋಣ. ಮಾತುಮಾತಿಗೆ ನಾನು ಇಲ್ಲಿ ಬಂದುದು ತಪ್ಪು ಎನ್ನುತ್ತೀರಿ. ಅದು ಹೇಗೆ ತಪ್ಪು, ಹೇಳಿ" ಎಂದಳು.

"ಈ ವಿಷಯಗಳನ್ನು ಸ್ಪಷ್ಟವಾಗಿ ಮಾತನಾಡುವುದು ಒಳ್ಳೆಯದಲ್ಲ. ಆದರೂ ಸ್ಪಷ್ಟವಾಗಿ ಮಾತನಾಡದಿದ್ದರೆ ನೀನು ಬಿಡುವುದಿಲ್ಲ. ಹೇಳಿಬಿಡು ತ್ತೇನೆ, ಪ್ರಮಿಳಾ. ನೀನು ಆಡುವ ಹುಡುಗಿಯಲ್ಲ. ವಯಸ್ಸಾದ ಹೆಂಗಸು. ಯಾವನೋ ಒಬ್ಬನೊಡನೆ ಹೋಗಿ ಎರಡು ದಿನಗಳು ಕಳೆದೆ ಎಂದರೆ ಜನ ಏನೆಂದುಕೊಳ್ಳುತ್ತಾರೆಂದು ಊಹಿಸಲಾರೆಯಾ ?"

ಜನ ಏನೆಂದುಕೊಳ್ಳುತ್ತಾರೆಂದು ಊಹೆ ಮಾಡುವುದು ಪ್ರಮಿಳೆಗೆ ಸಾಧ್ಯವಾಯಿತು. ಅವಳು ಹೇಳಿದಳು.

"ಅವರಿಗೆ ಬುದ್ಧಿಯಿಲ್ಲ. ಏನೇನೋ ಅಂದುಕೊಳ್ಳುತ್ತಾರೆ. ನೀವು ಸದಾ ಮನೆಯಲ್ಲಿಯೇ ಇರುತ್ತಿದ್ದೀರಿ. ಈ ಎರಡು ರಾತ್ರಿಗಳು ನಿಮ್ಮೊಡನೆಯೇ ಮಲಗಿಕೊಂಡಿದ್ದೇನೆ. ನಾವೇನಾದರೂ ಹಾಗೆ ನಡೆದುಕೊಳ್ಳುತ್ತಿದ್ದೇವೆಯೇ ಇಲ್ಲವೇ ಎಂಬುದು ನಿಮಗೇ ಗೊತ್ತಿದೆ"

"ನನಗೆ ಗೊತ್ತು. ಹಾಗೇನೂ ಇಲ್ಲವೆಂದು ಯಾವ ದೇವರೆದುರಿಗೆ ಬೇಕಾದರೂ ಪ್ರಮಾಣಮಾಡಿ ಹೇಳಬಲ್ಲೆ. ಆದರೆ ನನ್ನಂತಹ ಬಿಕಾರಿಯ

ಸಾಕ್ಷಿಯನ್ನು ಯಾರು ಕೇಳುತ್ತಾರೆ ? ಜನರು ತಮಗೆ ಹೇಗೆ ಬೇಕೋ ಹಾಗೆಯೇ ಅಂದುಕೊಳ್ಳುತ್ತಾರೆ"

"ಹೌದು. ಹೌದು. ನೀವು ಹೇಳುವುದೂ ನಿಜ"

ಪ್ರಮಿಳೆ ಆ ಮಾತು ಹೇಳಿ ಕ್ಷಣಕಾಲ ತಡೆದು "ಶಾರದಮ್ಮ ಪುನಃ ಈ ವಿಷಯ ಮೊದಲಿಗೆ ಬರುತ್ತದೆ. ನೀವು ಹೇಳುವುದು ನಿಜ. ನಾನು ಇಲ್ಲಿ ಬಂದು ಎರಡು ದಿನಗಳಿದ್ದ ಮೇಲೆ ನಾನು ಇವರನ್ನಲ್ಲದೇ ಬೇರೆ ಯಾರನ್ನೂ ಮದುವೆ ಮಾಡಿಕೊಳ್ಳುವುದು ಸರಿಯಲ್ಲ. ಹಾಗೆ ಮಾಡಿದರೆ ಪ್ರಮಾದಕ್ಕೆ ಇಟ್ಟುಕೊಳ್ಳುತ್ತದೆ. ಶತಾಯಗತಾಯ ಮಾಸ್ಟರನ್ನೇ ಮದುವೆ ಮಾಡಿಕೊಳ್ಳಬೇಕು" ಎಂದಳು.

"ಅದೂ ಒಂದು ವಿಧವಾಗಿ ಸರಿ. ಅಲ್ಲಿಗೂ ನೀನು ಇಲ್ಲಿ ಬಂದುದು ಸರಿಯಾಗಲಿಲ್ಲ. ಈಗ ಮಾಧು ನಿನ್ನನ್ನು ಪ್ರೀತಿಸುತ್ತಿರುವುದಾಗಿ ಅಂದುಕೊಂಡಿದ್ದಾನೆ. ಈ ಉದ್ರೇಕ ಉದ್ವೇಗಗಳಲ್ಲಿ ಇವೆಲ್ಲವೂ ಸರಿ. ನೀನು ಗಂಡಿನ ಮನಸ್ಸನ್ನು ಅರಿಯದವಳು. ನಾನು ಪೂರ್ಣವಾಗಿ ಅರಿತವಳು. ಮದುವೆಯಾಗದೇ ಎಲ್ಲಿಯೋ ಕಂಡವನೊಂದಿಗೆ ಹೀಗೆ ಬಂದು ಎರಡು ದಿನವಿದ್ದವಳು. ಹಿಂದೆ ಇನ್ನಾವನನ್ನೋ ಪ್ರೀತಿಸುತ್ತಿದ್ದೆ – ಎಂದೋ ಅಥವಾ ತನ್ನನ್ನು ಪ್ರೀತಿಸಿದಂತೆಯೇ ಮುಂದೆ ಇನ್ನಾವನನ್ನಾದರೂ ಪ್ರೀತಿಸಬಹುದು ಎಂದೋ ಮಾಧುವಿನ ಮನಸ್ಸಿಗೆ ಬಂದರೆ ಗತಿಯೇನು ಎಂಬುದನ್ನು ಒಂದು ನಿಮಿಷವಾದರೂ ಯೋಚನೆ ಮಾಡಿದ್ದೀಯಾ ?"

ಆಗ ತಾನೇ ಸೂರ್ಯೋದಯವಾಗಿತ್ತು. ಪ್ರಾತಃಕಾಲದ ಶೀತಲವಾದ ಮಂದಮಾರುತವು ಬೀಸುತ್ತಿತ್ತು. ಆದರೂ ಆ ಮಾತು ಕೇಳಿ ಪ್ರಮಿಳೆಯ ಮೈಯೆಲ್ಲಾ ಒಮ್ಮೆ ಬೆವರಿತು. ಬಾಲಸೂರ್ಯನ ಪ್ರಿಯವಾದ ಕಿರಣಗಳು ಅಗ್ನಿಜ್ವಾಲೆಗಳಂತೆ ಮೈಯೆಲ್ಲಾ ಸುಡುತ್ತಿರುವಂತೆ ಭಾಸವಾಯಿತು.

ಶಾರದೆಯು "ಅಂತಹ ಪ್ರಸಂಗವು ನಿನ್ನ ಜೀವನದಲ್ಲಿ ಬರದಿರಲಿ, ಪ್ರಮಿಳಾ. ಆದರೂ ಹೆಣ್ಣಾಗಿ ಹುಟ್ಟಿದವಳು ಇವೆಲ್ಲವನ್ನೂ ಯೋಚನೆ ಮಾಡಬೇಕು. ಅದರಿಂದಲೇ ಎಲ್ಲರೂ ತುಳಿಯುವ ದಾರಿಯಲ್ಲಿಯೇ ಹೋಗುವುದು ಕ್ಷೇಮಕರ" ಎಂದಳು.

ಅನಂತರ ಅವರಿಬ್ಬರೂ ಮನೆಗೆ ಹೊರಟು ಬಂದರು. ಅಷ್ಟು ಹೊತ್ತಿಗೆ ಸೂರ್ಯ ಕಿರಣಗಳು ಪ್ರಖರವಾಗಿ ಬೆಳಗುತ್ತಿದ್ದವು.

ಊಟ ಮಾಡಿಕೊಂಡು ಅದೇ ದಿನ ಮಧ್ಯಾಹ್ನದ ಗಾಡಿಗೆ ಮಾಧುವೂ ಪ್ರಮಿಳೆಯೂ ಹೊರಟರು.

ಕಡೂರು ಸಿಕ್ಕುವವರೆವಿಗೆ ಜೊತೆಯಲ್ಲಿ ಕುಳಿತಿದ್ದರೂ ಪ್ರಮಿಳೆಯು ಒಂದು ಮಾತನ್ನೂ ಆಡಲಿಲ್ಲ. ಆ ಬೆಳಗಾಗ ಶಾರದೆ ಹೇಳಿದ ಮಾತುಗಳೇ ಅವಳ ಮನಸ್ಸಿನಲ್ಲಿ ಸುತ್ತಿಸುತ್ತಿ ಬರುತ್ತಿದ್ದವು.

ಪ್ರಮಿಳೆಯ ಮನಸ್ಸಿನಲ್ಲಿ ಆಗುತ್ತಿದ್ದ ಅಲ್ಲಕಲ್ಲೋಲಗಳು ಮಾಧುವಿಗೆ ಅರ್ಥವಾಗಲಿಲ್ಲ. ಮನೆಯನ್ನು ಬಿಟ್ಟು ಬಂದವಳು ಪುನಃ ಮನೆಗೆ ಹೋಗಬೇಕಾಗಿ ಬಂದುದರಿಂದ ಖಿನ್ನಳಾಗಿದ್ದಾಳೆಂದೂ, ಸದ್ಯದಲ್ಲಿ ಅದು ಅನಿವಾರ್ಯವೆಂದೂ ಸಮಾಧಾನ ಮಾಡಿಕೊಂಡ.

ಕಡೂರು ಬಂದಿತು. ದಕ್ಷಿಣ ಕನ್ನಡದ ಕಡೆಗೆ ಹೋಗುವವರೆಲ್ಲರೂ ಅಲ್ಲಿ ರೈಲಿಳಿದರು. ಡಬ್ಬಿಯು ಎಷ್ಟೋ ಖಾಲಿಯಾಯಿತು. ಪ್ರಮಿಳೆಯು ಮೊದಲಿನಂತೆಯೇ ಆಲೋಚನೆ ಮಾಡುತ್ತಾ ಕುಳಿತಿದ್ದಳು.

ಮಾಧು ಗಾಡಿಯಿಂದ ಇಳಿದ. ಕಿಟಕಿ ಬಳಿ ಬಂದು ಪ್ರಮಿಳೆಗೆ ಸಮಾಧಾನ ಹೇಳಿದ.

ಅವಳು ಹೂಗುಟ್ಟಿದಳು.

ಸಾಧಾರಣವಾಗಿ ಮಾಧುವು ಜೊತೆಯಲ್ಲಿದ್ದಾಗಲೆಲ್ಲಾ ಪ್ರಮಿಳೆ ಅದೊಂದು ವಿಧವಾಗಿ ನಗುತ್ತಿದ್ದಳು. ಪ್ರಯತ್ನಪಟ್ಟರೂ ಸುಮ್ಮನಿರುವುದು ಅವಳಿಂದ ಆಗುತ್ತಿರಲಿಲ್ಲ. ನಾಲ್ಕು ಕಣ್ಣುಗಳು ಸೇರಿದಾಗಲಂತೂ ಶಬ್ದವಾಗುವಂತೆ ನಗುತ್ತಿದ್ದಳು.

ಅಂತಹ ನಗು ಒಮ್ಮೆಯಾದರೂ ಕಂಡು ಬರುವುದೇನೋ ಎಂದು ಮಾಧು ಆ ದಿನ ಬೆಳಗಾಗಿನಿಂದಲೂ ನಿರೀಕ್ಷಿಸುತ್ತಿದ್ದ. ಅದನ್ನು ಕಾಣದೇ ನಿರಾಶನಾಗುತ್ತಿದ್ದ.

ಆ ಕಡೆಯ ಗಳಿಗೆಯಲ್ಲಿಯೂ ಅವನು ಆ ನಗುವನ್ನು ಪ್ರಮಿಳೆಯಲ್ಲಿ ಕಾಣಲಾಗಲಿಲ್ಲ.

## ೨೩

ಪ್ರಮೀಳೆಯ ಅಕ್ಕನೂ ಭಾವನೂ ರೈಲ್ವೆಸ್ಟೇಷನ್ನಿಗೆ ಬಂದಿದ್ದರು. ಸ್ಟೇಷನ್ನಿನ ಜನ ಸಮೂಹದಲ್ಲಿ ಅವಳೂ ಅವರನ್ನು ಹುಡುಕುತ್ತಲೇ ಇದ್ದಳು. ಒಬ್ಬರನ್ನೊಬ್ಬರು ಕಂಡು ಸಮೀಪಿಸಿದರು.

ಅಕಸ್ಮಾತ್ ಬಾಯಿಗೆ ಬಂದು ಪ್ರಮೀಳೆಯು "ಮೊನ್ನೆಯ ದಿನವೂ ಸ್ಟೇಷನ್ನಿಗೆ ಬಂದಿದ್ದರೇನು" ಎಂದಳು.

ಅವಳಕ್ಕ ಕುಮುದ "ನನಗೆ ಇದಲ್ಲದೇ ಬೇರೇ ಕೆಲಸವೇ ಇಲ್ಲ ಅಂತಿದ್ದಿಯಾ? ಯಾಕೆ ಬರುತ್ತೇನೆ. ಅಪ್ಪನ ಕಾಗದ ಬಂದ ಮೇಲೆ ನೀನೊಂದು ಕಾಗದ ಬರೆದಿದ್ದೆಯಲ್ಲಾ" ಎಂದಳು.

"ಹೌದಕ್ಕ. ಇದೇ ದಿನ ಹೊರಡಬೇಕು ಅಂತ ಗೊತ್ತುಮಾಡಿ ಅಪ್ಪ ನಿನಗೆ ಕಾಗದ ಬರೆದಿದ್ದ. ಆ ಮೇಲೆ ಬರೆದು ಬಿಟ್ಟಿದ್ದೇನೆ. ಆ ದಿನವೇ ಹೊರಡಬೇಕು ಎಂದ. ಆ ಹೊತ್ತಿಗೆ ಸರಿಯಾಗಿ ನನಗೆ ಹೊರಗಾಗುವ ದಿನ ಅಪ್ಪನಿಗೆ ಬಲು ಆತುರ. ಯಾವುದನ್ನೂ ಸಾವಧಾನವಾಗಿ ಆಲೋಚನೆ ಮಾಡುವುದೇ ಇಲ್ಲ"

"ಹೌದಮ್ಮ. ಗಂಡಸರುಗಳಿಗೆ ಇದೊಂದೂ ಗೊತ್ತೇ ಆಗುವುದಿಲ್ಲ."

ಅಪ್ಪ ಒಂದು ಬರೆದು ತಾನು ಒಂದು ಬರೆದಿರುವುದು ಕುಮುದಳಿಗೆ ಸಂದೇಹ ಬಂದಿತೇನೋ ಎಂದು ಪ್ರಮೀಳೆಗೆ ಹೆದರಿಕೆಯಾಗಿತ್ತು. ಸಾಧಾರಣ

ವಾಗಿ ಇಂತಹ ಸಂದರ್ಭದಲ್ಲಿ ಅಕ್ಕನಿಗೆ ಸಂದೇಹ ಬರುವುದು ಮೊದಲು. ಅವಳಿಗೆ ಸಂದೇಹ ಬರಲಿಲ್ಲವೆಂಬುದು ಸ್ಪಷ್ಟವಾದ ಮೇಲೆ ಪ್ರಮಿಳೆಯ ಮನಸ್ಸು ಸಮಾಧಾನವಾಯಿತು.

ಪ್ರಮಿಳೆ ತಾನು ಬಂದ ಮಾರನೆಯ ದಿನ ಮನೆಗೆ ಕಾಗದ ಬರೆದಳು. ತಾನು ಹಿಂದಿನ ದಿನ ಸಂಜೆ ರೈಲಿನಲ್ಲಿ ಶಿವಮೊಗ್ಗಾಗೆ ಬಂದು ಸೇರಿದುದಾಗಿಯೂ, ಅಕ್ಕಾ, ಭಾವ ಇಬ್ಬರೂ ಸ್ಟೇಷನ್ನಿಗೆ ಬಂದು ಕರೆದುಕೊಂಡು ಹೋದುದಾಗಿಯೂ, ಶಿವಮೊಗ್ಗೆಯಲ್ಲಿಯೇ ಒಂದು ತಿಂಗಳಕಾಲ ಇರಬೇಕೆಂದಿರುವುದಾಗಿಯೂ, ಬರೆದು ಅಕ್ಕನಿಗೆ ತೋರಿಸಿದಳು. ಆದರೆ ಪೋಸ್ಟ್ ಮಾಡುವ ಮೊದಲು ಯಾರಿಗೂ ತಿಳಿಯದಂತೆ ಆ ಕಾಗದ ಬದಲಾಯಿಸಿ ಬೇರೊಂದು ಕಾಗದ ಕವರಿನಲ್ಲಿಟ್ಟಳು ಆ ಕಾಗದದಲ್ಲಿಯೂ ಅದೇ ವಿಷಯಗಳಿದ್ದರೂ ಬಂದ ದಿನ ಹೆಚ್ಚು ಕಡಿಮೆಯಾಗಿತ್ತು. ಬಂದ ಎರಡು ದಿನ ಗಲಾಟೆಯಲ್ಲಿ ಕಾಗದ ಬರೆಯಲಾಗಲಿಲ್ಲವೆಂದೂ ಅದಕ್ಕಾಗಿ ಕ್ಷಮಿಸಬೇಕೆಂದೂ ಸೇರಿಸಿತ್ತು.

ಒಂದು ವಿಧವಾಗಿ ನೋಡಿದರೆ ಪ್ರಮಿಳೆಯು ಶಿವಮೊಗ್ಗೆಗೆ ಬಂದುದರಿಂದ ಅವಳಿಗೊಂಡು ಹೊಸಬಗೆಯ ಉತ್ಸಾಹವು ಬಂದಿತ್ತು. ಶಿವನಸಮುದ್ರದಲ್ಲಿದ್ದಾಗಲೇ ತಾಯಿ ತಂದೆಗಳಿಗೂ ಅವಳಿಗೂ ರಾಜಿಯಾಗಿತ್ತು. ಮಾತು ಕತೆಗಳು ಮೊದಲಾಗಿದ್ದವು ಆದರೂ ಮನಸ್ಸಿಗೆ ಏನೋ ಒಂದು ವಿಧವಾದ ಸಂಕೋಚ. ಮೊದಲಿನಿಂದಲೂ ತಾನಿದ್ದ ಮನೆಯಲ್ಲಿ ಇಲ್ಲವೆಂದೂ ತಾನು ಹೊಸಜನರೊಂದಿಗೆ ವ್ಯವಹರಿಸುತ್ತಿದ್ದೇನೆಂದೂ ತೋರುತ್ತಿತ್ತು. ಮೊದಲಿನ ಸದರದಿಂದ ತಾಯಿಯೊಡನೆಯೋ ತಂದೆಯೊಡನೆಯೋ ಮಾತನಾಡಲು ಹೋದಾಗ ಅವಳಿಗೆ ಹಳೆಯದೆಲ್ಲವೂ ಜ್ಞಾಪಕಕ್ಕೆ ಬರುತ್ತಿತ್ತು. ತಾನು ಅವರೊಂದಿಗೆ ಜಗಜವಾಡಿದ್ದು ಮೊಂಡೀ ಕುಳಿತುಕೊಂಡಿದ್ದು ಎಲ್ಲಾ ನೆನಪಾಗಿ ಮನಸ್ಸಿಗೆ ಸಂಕೋಚವಾಗುತ್ತಿತ್ತು.

ಈಗ ಶಿವಮೊಗ್ಗೆಯಲ್ಲಿ ಅದೊಂದೂ ಇಲ್ಲ. ಅಕ್ಕ ಭಾವಂದಿರು ಪ್ರಮಿಳೆಯನ್ನು ತಾಯಿ ತಂದೆಗಳಿಗಿಂತ ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದರು. ಆ ಮಕ್ಕಳ ಜೊತೆಯಲ್ಲಿ ಮಗುವಿನಂತೆಯೇ ಇದ್ದ ಪ್ರಮಿಳೆಗೆ ದಿನಗಳು ಕಳೆದು ಹೋಗುತ್ತಿದ್ದುದೇ ಗೊತ್ತಾಗುತ್ತಿರಲಿಲ್ಲ.

ಮತ್ತೊಂದು ವಿಷಯ. ಮಕ್ಕಳೆಲ್ಲರೂ ಅವಳನ್ನು 'ಚಿಕ್ಕಮ್ಮ' ಎಂದು ಕರೆಯುತ್ತಿದ್ದರು. ಹಾಗೆ ಕರೆದಾಗ ತಾನೇನೋ ದೊಡ್ಡವಳಾದಂತೆ ದೊಡ್ಡ ಅಂತಸ್ಥಿಗೆ ಬಂದಂತೆ ಪ್ರಮೀಳೆಗೆ ಭಾಸವಾಗುತಿತ್ತು.

ಕುಮುದಳ ಮಕ್ಕಳಲ್ಲಿ ದೊಡ್ಡವಳು ಪದ್ಮಾ. ಅವಳಿಗೆ ಎಂಟು ವರ್ಷ ವಯಸ್ಸು. ಅವಳ ತಮ್ಮ ರಘುವಿಗೆ ಐದುವರ್ಷ. ಅವರಿಬ್ಬರೂ ಸ್ಕೂಲಿಗೆ ಹೋಗುತ್ತಿದ್ದರು. ಆ ಸಮಯವನ್ನು ಬಿಟ್ಟರೆ ಅವರಾವಾಗಲೂ ಪ್ರಮೀಳೆಯನ್ನು ಬಿಟ್ಟೇ ಇರುತ್ತಿರಲಿಲ್ಲ. ಕಡೆಯವನು ಶಶಿ. ಎರಡು ವರ್ಷ. ಮುದ್ದು ಮುದ್ದಾಗಿ ಮಾತನಾಡುತ್ತಾನೆ. ಅವನಿಗೆ ಚೌಲವಾಗಿರಲಿಲ್ಲ. ಹುಟ್ಟು ಕೂದಲು ಹಣೆಯ ಮೇಲೆಲ್ಲಾ ಬೀಳುತಿತ್ತು. ಜಡೆಹಾಕದೇ ಬಿಟ್ಟು ಬಿಡುವಂತಿರಲಿಲ್ಲ. ಜಡೇ ಹಾಕಿಸಿಕೊಳ್ಳಲು ಅವನದು ಬಲು ತಕರಾರು.

ಶಶಿಯನ್ನು ಮುದ್ದಾಡುತ್ತಾ, ಮಾತನಾಡಿಸುತ್ತಾ, ಅರ್ಥವಿಲ್ಲದೇ ಅವನಾಡುವ ಮಾತುಗಳಿಗೆ ಹೂಗುಟ್ಟುತ್ತಾ ಜಡೆಹಾಕಲು ಕುಮುದಳಿಗೆ ಪುರಸತ್ತಿರಲಿಲ್ಲ. ದಿನವೂ ಅವನಿಗೆ ಜಡೆಹಾಕಿ ಮುಗಿಯುವುದು ರಾದ್ಧಾಂತವಾಗುತ್ತಿತ್ತು.

ಪ್ರಮೀಳೆ ಬಂದ ದಿನ ಸಾಯಂಕಾಲ ಶಶಿ ರಂಪಮಾಡುತ್ತಿದ್ದುದನ್ನು ನೋಡಿ "ನಾನು ಜಡೆ ಹಾಕುತ್ತೇನೆ" ಎಂದು ಕರೆದಳು.

ಅವನು ಹೋಗಬೇಕೆಂದ ಕಡೆಗೆಲ್ಲಾ ಹೋಗಿ, ಆಡನಾಡುವ ಆಟಗಳಿಗೆಲ್ಲಾ ಅವಕಾಶಕೊಟ್ಟು, ಅಂತೂ ಜಡೇಹಾಕಿ ಮುಗಿಸಿದಳು. ಹಿತ್ತಲಲ್ಲಿದ್ದ ಗುಲಾಬಿ ಹೂಕಿತ್ತು ತಂದು ಮುಡಿಸಿದಳು.

ಹೂ ಮುಡಿಸಿದರೂ ಮಗುವಿನ ಅಲಂಕಾರ ಸಂಪೂರ್ಣವಾಗಲಿಲ್ಲವೆಂದು ಪ್ರಮೀಳೆಗೆ ಕಂಡಿತು. ಏನು ಲೋಪವಾಗಿದೆಯೆಂದು ಬಲುಹೊತ್ತು ಯೋಚಿಸಿ ಪೆಟ್ಟಿಗೆಯಿಂದ ಹೊಸಹೊಸ ಬಣ್ಣದ ರಿಬ್ಬನ್ ತೆಗೆದು ಅದನ್ನು ಕೂದಲಿನ ಕೊನೆಗೆ ಕಟ್ಟಿ ಕೊನೆಯಲ್ಲಿ ಐದು ರೇಖೆಯ ಹೂವಿನಂತೆ ಗಾಡಿ ಗಂಟು ಹಾಕಿದಳು. ಆಗ ನೆತ್ತಿಯ ಮೇಲೆ ನಿಂತ ಹೂವಿಗೂ ಪಕ್ಕದಲ್ಲಿ ಕಟ್ಟಿದ ಹೂವಿಗೂ ಸರಿಹೋಗಿ ಎಷ್ಟೋ ಮುದ್ದಾಗಿ ಕಂಡಿತು.

ಶಶಿಗೆ ದೊಡ್ಡ ಕನ್ನಡಿ ಹಿಡಿದು ತೋರಿಸಿದಳು. ನೋಡಿಕೊಂಡು ಅವನಿಗೆ ಖುಷಿಯಾಯಿತು.

ಎರಡು ದಿನ ಬಲಾತ್ಕಾರದಿಂದ ಹಿಡಿದು ಜಡೆ ಹಾಕಿದ ಮೇಲೆ ಮೂರನೆಯ ದಿನದಿಂದ ಅವನೇ 'ಜಡೆ-ಹೂವು' ಎನ್ನುತ್ತಾ ಅವಳ ಬಳಿಗೆ ಬರುತ್ತಿದ್ದ.

ಚಿಕ್ಕಮಗುವಿನ ಶೃಂಗಾರದ ಜೊತೆಗೆ ದೊಡ್ಡ ಮಕ್ಕಳ ಶೃಂಗಾರವೂ ಪ್ರಮಿಳೆಯ ಪಾಲಿಗೇ ಗಂಟುಬಿತ್ತು.

ಪದ್ಮಳಿಗೆ ಒಂದೊಂದು ದಿನ ಒಂದೊಂದು ವಿಧವಾಗಿ ಹೆರಳು ಹಾಕಿ ಕಳಿಸಬೇಕು. ಒಂದು ದಿನ ಡಬ್ಬಲ್ ಜಡೆ. ಮತ್ತೊಂದು ದಿನ ಪೋನಿಟೈಲ್. ಈರೀತಿಯಾಗಿ ಹುಡುಕಿ ಹುಡುಕಿ ಹೊಸಹೊಸ ತರಹವಾಗಿ ಹೆರಳು ಕಟ್ಟಬೇಕು. ಕೆಲವು ದಿನವಂತೂ ತನ್ನೊಂದಿಗೆ ಮೂರುನಾಲ್ಕು ಜನ ಸ್ನೇಹಿತೆಯರನ್ನು ಜಡೆಹಾಕಿಸಿಕೊಳ್ಳುವುದಕ್ಕೆ ಕರೆದುಕೊಂಡು ಬರುತ್ತಿದ್ದಳು.

ನಡುಕಲವನಿಗೆ ಕ್ರಾಪು ಬಿಡಿಸಿತ್ತು. ಅವನ ಅಲಂಕಾರವೇನೂ ಕಷ್ಟವಾಗುತ್ತಿರಲಿಲ್ಲ. ಬೇಕೂ ಇರಲಿಲ್ಲ. ಆದರೆ ಅಕ್ಕ ತಮ್ಮ ಎಲ್ಲರೂ ಚಿಕ್ಕಮ್ಮನಿಂದಲೇ ತಲೆ ಬಾಚಿಸಿಕೊಳ್ಳುವುದನ್ನು ನೋಡಿದ ಅವನಿಗೆ ತಾನೂ ಅವಳಿಂದಲೇ ತಲೆಬಾಚಿಸಿಕೊಳ್ಳದಿದ್ದರೆ ಸಮಾಧಾನವಿಲ್ಲ.

ಕ್ರಾಪು ಬಾಚಿ, ಪೌಡರ್ ಹಚ್ಚಿ, ಪುಟ್ಟಾಣಿ ಮುಖಕ್ಕೊಂದು ಮುತ್ತು ಕೊಟ್ಟು ಕಳಿಸುವವರೆಗೆ ಅವನಿಗೆ ತೃಪ್ತಿಯಿಲ್ಲ.

ಇದರ ಮೇಲೆ ಇನ್ನೊಂದು ತಾಪತ್ರಯ ಸಂಜೆಯಾದರೆ ಪದ್ಮಳೂ ರಘುವೂ ಆಟವಾಡುವುದಕ್ಕೆ ಹೋಗದೇ "ಕಥೆ ಹೇಳು, ಚಿಕ್ಕಮ್ಮ" ಎಂದು ಸುತ್ತಲೂ ಬಂದು ಕುಳಿತುಕೊಂಡು ಬಿಡುತ್ತಿದ್ದರು. ಅವರಿಬ್ಬರೇ ಅಲ್ಲ. ಅವರೊಡನೆ ಆಡುವುದಕ್ಕೆ ಬಂದ ಮಕ್ಕಳೂ ಸೇರುತ್ತಿದ್ದರು.

ನಾಲ್ಕಾರು ದಿನ ಕತೆಗಳನ್ನು ಹೇಳುವುದು ಪ್ರಮಿಳೆಗೆ ಕಷ್ಟವಾಗಲಿಲ್ಲ. ಅನಂತರ ಅವಳಿಗೆ ಗೊತ್ತಿದ್ದ ಕತೆಗಳೆಲ್ಲವೂ ಮುಗಿದು ಅವರಿಗೆ ಹೇಳುವುದಕ್ಕಾಗಿಯೇ ಪುಸ್ತಕಗಳನ್ನು ಹುಡುಕಬೇಕಾಯಿತು.

ಶಶಿ ಬೇರೆ ಕೇಳುವುದಕ್ಕೆ ಕುಳಿತುಬಿಡುತ್ತಿದ್ದ. ಅವನಿಗೆ ಅರ್ಥವಾಗುತ್ತಿರಲಿಲ್ಲ.

ನಡುನಡುವೆ "ಚಿಕ್ಕಮ್ಮ. ಕತೆ. ನನಗೆ" ಎನ್ನುತ್ತಿದ್ದ. ಅವನಿಗೆ ಏನಾದರೂ ಹೇಳಿದಂತೆ ಮಾಡಿ ಸಮಾಧಾನ ಮಾಡಿ ಕಥೆ ಮುಂದುವರಿಸಬೇಕು.

ಬೆಳಗಾಗ ಸಾಯಂಕಾಲಗಳೆಲ್ಲಾ ಮಕ್ಕಳ ಗಲಾಟೆಗಳಲ್ಲಿಯೇ ಪ್ರಮಿಳೆಗೆ ಕಾಲವು ಕಳೆದುಹೋಗುತ್ತದೆ. ಬಿಡುವು ಸಿಕ್ಕಿದರೆ ಮಧ್ಯಾನ್ಹದ ಹೊತ್ತು. ಆಗಲೂ ಶಶಿಯ ರಗಳೆ ಇದ್ದೇ ಇರುತ್ತದೆ.

ಇವನ್ನೆಲ್ಲಾ ನೋಡಿ ಕುಮುದೆ ಆಗಾಗ "ಪ್ರಮಿಳಾ. ನೀನು ಈಗಾಗಲೇ ಅರ್ಧದಷ್ಟು ಗೃಹಿಣಿಯಾಗಿದ್ದಿಯೆ ?" ಎಂದು ಹೇಳುತ್ತಿದ್ದಳು.

ಮೊದಲನೆಯ ಸಲ ಆ ಮಾತು ಹೇಳಿದಾಗ ಪ್ರಮಿಳೆಗೆ ಸರಿಯಾಗಿ ಅರ್ಥವಾಗಲಿಲ್ಲ. ಅವಳು ಕೇಳಿದಳು.

"ಹಾಗಂದರೇನೇ ಅಕ್ಕ"

"ಗೃಹಿಣಿ ಎಂದರೆ ಗಂಡ, ಮಕ್ಕಳು. ಅರ್ಧ ಗೃಹಿಣಿಯಾಗಿದ್ದೀಯೆ. ಒಳ್ಳೆಯದಾಯಿತು ಬಿಡು. ನೀನು ನಮ್ಮ ಮನೆಗೆ ಬಂದುದು ಸ್ಕೂಲಿಗೆ ಬಂದು ಸೇರಿದಂತಾಯಿತು"

ಅಕ್ಕನ ಆ ಮಾತು ತಂಗಿಯ ಬಾಯಿಕಟ್ಟಿತು. ಮುಂದೆ ಆ ಮಾತು ಹೇಳಲ್ಪಟ್ಟಾಗ ಅವಳು ನಾಚಿಕೆಯಿಂದ ತಲೆ ತಗ್ಗಿಸುತ್ತಿದ್ದಳು.

ಪ್ರಮಿಳೆಗೆ ಅಕ್ಕನ ಮನೆಯಲ್ಲಿ ಹೊಸದೊಂದು ಅನುಭವವಾಯಿತು.

ಅವಳು ಮಕ್ಕಳೊಂದಿಗೆ ಆಟವಾಡಿಕೊಂಡು ಮಗುವಿನಂತೆ ಇದ್ದರೂ ಸಹ ಅವಳು ಯುವತಿ. ಅವಳ ಕಣ್ಣುಗಳು ಸೂಕ್ಷ್ಮವಾಗಿ ಎಲ್ಲವನ್ನೂ ಗಮನಿಸುತ್ತಿದ್ದವು. ಮನಸ್ಸು ಅವುಗಳನ್ನೆಲ್ಲಾ ಕುರಿತು ಆಲೋಚನೆ ಮಾಡುತ್ತಿದ್ದಿತು.

ಶಿವನಸಮುದ್ರ ತಕ್ಕಮಟ್ಟಿಗೆ ಸಣ್ಣ ಊರು. ಅಲ್ಲಿ ಸಿರಿವಂತಿಕೆ, ಬಡತನಗಳು ಸ್ಪಷ್ಟವಾಗಿ ಕಂಡುಬರುತ್ತಿದ್ದವು. ಸುಮಾರು ಮೂವತ್ತು ನಲವತ್ತು ಮನೆಗಳವರು ಅನುಕೂಲಸ್ಥರು. ಅವರುಗಳೆಲ್ಲರೂ ಆಫೀಸರುಗಳು. ಅಥವಾ ಆ ಅಂತಸ್ಥಿನವರು. ಮಿಕ್ಕವರು ಗುಮಾಸ್ತರು, ಕೆಲಸಗಾರರು. ಸಣ್ಣ ಊರಾದ್ದರಿಂದ ಪ್ರಮಿಳೆಗೆ ಹೆಚ್ಚು ಕಡಿಮೆ ಎಲ್ಲರೂ ಗೊತ್ತು. ಅವಳ ಗೆಳತಿಯರಲ್ಲಿ ಶ್ರೀಮಂತರೂ ಇದ್ದರು ಬಡವರೂ ಇದ್ದರು. ಸಿರಿವಂತಿಗೆ ದಾರಿದ್ರ್ಯಗಳು

ಸ್ಪಷ್ಟವಾಗಿ ಕಂಡುಬರುತ್ತಿದ್ದವು. ಬಡವರ ಮನೆಗಳಲ್ಲಿ ಗೃಹಿಣಿಯರು ಬೆಳಗಿನಿಂದ ಸಂಜೆಯವರೆಗಿನ ದುಡಿಯುತ್ತಿರುವುದು, ಅವರ ಕಷ್ಟಕಷ್ಟ, ಸಂತಾನ ಬಾಹುಳ್ಯ ಇವುಗಳನ್ನೆಲ್ಲಾ ನೋಡಿ ಪ್ರಮೀಳೆಯು "ಇದೆಂತಹ ಜೀವನ? ಇವರೇಕೆ ಇಷ್ಟು ಕಷ್ಟಪಟ್ಟುಕೊಂಡು ಬದುಕಿದ್ದಾರೆ?" ಎಂದು ಯೋಚಿಸುತ್ತಿದ್ದಳು. ಆಫೀಸರುಗಳ ಹೆಂಡತಿಯರೇ ಪ್ರಮೀಳೆಗೆ ಆದರ್ಶವಾಗಿದ್ದರು. ಅವಳು ತನ್ನ ಶ್ರೀಮಂತ ಗೆಳತಿಯರ ಮನೆಗೆ ಹೋದಾಗಲೆಲ್ಲಾ ಕೇಕೆಹಾಕಿಕೊಂಡು ಕುಣಿಯುತ್ತಾ ಆಟವಾಡುವ ಮಕ್ಕಳನ್ನು ನೋಡುತ್ತಿದ್ದಳು. ರೇಡಿಯೋ ಹಾಕಿಕೊಂಡು ಕುಳಿತಿರುವ ಹೆಂಗಸರನ್ನು ನೋಡುತ್ತಿದ್ದಳು. ಪುಸ್ತಕಗಳನ್ನು ಹಿಡಿದು ಓದುತ್ತಿರುವವರನ್ನು ನೋಡಿದ್ದಳು. ಹುಡುಗರನ್ನು ಬಿಟ್ಟರೆ ವಯಸ್ಸಾದನಂತರ ಹಿಂದೀ ಪಾಠಕ್ಕೆ ಬರುತ್ತಿದ್ದವರೂ ಶ್ರೀಮಂತ ಸ್ತ್ರೀಯರೇ! ಸಾಯಂಕಾಲವಾದರೆ ರಾಕೆಟ್‌ಗಳನ್ನು ಹಿಡಿದು ಕ್ಲಬ್ಬಿಗೆ ಹೋಗುತ್ತಿದ್ದವರೂ ಅವರೇ!

ಸಾಹಿತ್ಯಾಭಿರುಚಿ, ಕ್ರೀಡಾಸಕ್ತಿ ಮುಂತಾದುವೆಲ್ಲವೂ ಕಂಡು ಬರುತ್ತಿದ್ದುದು ಸಿರಿವಂತರಲ್ಲಿಯೇ?

ಜೀವನವನ್ನು ನೋಡುವುದರಲ್ಲಿಯೂ ಅಷ್ಟೆ.

ಪ್ರಮೀಳೆಯ ಗೆಳತಿಯರಲ್ಲಿ ಇಬ್ಬರು ಬಡಹುಡುಗಿಯರಿಗೆ ಲಗ್ನವಾಗಿತ್ತು. ಸಣ್ಣವಯಸ್ಸಿನಲ್ಲಿಯೇ ಮದುವೆಯಾಗಿ ಹೋಗಿತ್ತು. ಆ ದಿನಗಳು ಇನ್ನೂ ಪ್ರಮೀಳೆಗೆ ಜ್ಞಾಪಕವಿವೆ. ಮದುವೆಗೆ ಕೆಲದಿನಗಳ ಮೊದಲು ಆ ಹುಡುಗಿಯರಿಗೆ ತಮನ್ನು ಮದುವೆಯಾಗುವ ಗಂಡಂದಿರು ಯಾರೆಂದು ಸಹ ತಿಳಿದಿರಲಿಲ್ಲ. ಮದುವೆಯ ಕಾಲದಲ್ಲಿಯೂ ಅವರ ಸ್ಥಿತಿಗತಿಗಳು ಗೊತ್ತಿದ್ದಿತೋ ಇಲ್ಲವೋ? ತಾಯಿ ತಂದೆಗಳು ಗೊತ್ತುಮಾಡಿದರೆಂದು ಕುರಿಗಳಂತೆ ತಲೆಬಗ್ಗಿಸಿಕೊಂಡು ಗಂಡನ ಮುಖವನ್ನು ಸಹ ಸರಿಯಾಗಿ ನೋಡದೇ ತಾಳಿ ಕಟ್ಟಿಸಿಕೊಂಡಿದ್ದರು. ಮದುವೆಯಾದ ಎರಡು ಮೂರು ವರ್ಷಗಳಿಗೆಲ್ಲಾ ಹೆರಿಗೆಗಾಗಿ ತವರಿಗೆ ಬಂದಿದ್ದರು. ಅಷ್ಟುಹೊತ್ತಿಗಾಗಲೇ ಅವರಿಗೆ ಜೀವನವು ನಿಸ್ಸಾರವಾಗಿರುತಿತ್ತು.

ಆದರೆ ಸಿರಿವಂತರ ಮನೆಯ ಹೆಣ್ಣುಗಳು ಹಾಗಲ್ಲ. ಅವಳ ಗೆಳತಿಯರಲ್ಲಿಯೇ ಎಷ್ಟೋ ಮಂದಿಗೆ ಇಪ್ಪತ್ತು ಇಪ್ಪತ್ತೆರಡು ವರ್ಷವಾದರೂ ಮದುವೆ

ಯಾಗಿರಲಿಲ್ಲ, ಎಷ್ಟೋ ಗಂಡುಗಳು ಬಂದಿದ್ದವು. ಆ ಹುಡುಗಿಯರಿಗೆ ಒಪ್ಪಿಗೆಯಾಗಿರಲಿಲ್ಲ.

ಕ್ಲಬ್ಬಿನ ಪ್ರೆಸಿಡೆಂಟ್ ರಾಮಾನುಜಾಯ್ಯಂಗಾರ್ಯರ ಮಗಳು ಜಾನಕಿಯ ವಿಷಯ ಪ್ರಮೀಳೆಯ ನೆನಪಿಗೆ ಆಗಾಗ ಬರುತ್ತದೆ. ಎಲ್ಲ ಹುಡುಗಿಯರೂ ಅವಳಂತೆ ದೃಢಮನಸ್ಕರಾದರೆ ಪ್ರಪಂಚದಲ್ಲಿ ಆ ಹೆಂಗಸರ ಕಷ್ಟಗಳೆಲ್ಲವೂ ಒಮ್ಮೆಗೇ ಬಗೆಹರಿಯುತ್ತದೆಂದು ಕೊಂಡಿದ್ದಳು.

ಜಾನಕಿಗೆ ಇಪ್ಪತ್ತೆರಡು ವರ್ಷವೆಂದು ಹೇಳುತ್ತಿದ್ದರು. ಅದಕ್ಕೆ ತಕ್ಕ ಹಾಗೆ ಜಾತಕವನ್ನು ಬರೆಸಿದ್ದರು. ಆದರೆ ಅವಳಿಗೆ ವಯಸ್ಸು ಮೂವತ್ತರ ಹತ್ತಿರ ಹತ್ತಿರವಾಗಿದೆಯೆಂದು ಜನಗಳು ಮಾತನಾಡಿಕೊಳ್ಳುತ್ತಿದ್ದರು. ಆದರೇನು? ಅವಳು ಬೆಂಗಳೂರಿನ ಕಾಲೇಜ್ ಹಾಸ್ಟಲಿನಲ್ಲಿದ್ದುಕೊಂಡು ಬಿ.ಎ. ಪ್ಯಾಸು ಮಾಡಿಕೊಂಡು ಬಂದಿದ್ದಾಳೆ. ಶಿವಸಮುದ್ರದ ಕ್ಲಬ್ಬಿನಲ್ಲಿ ಅವಳು ಆಕ್ಟಿವ್ ಮೆಂಬರು. ಅನುರೂಪನಾದ, ಅವಳು ಪ್ರೀತಿಸುವಂತಹ ಗಂಡು ಸಿಕ್ಕದೇ ಅವಳಿಗೆ ಮದುವೆಯಾಗಿರಲಿಲ್ಲ. "ಕಂಡು ಕಾಣದೆ ಎಲ್ಲೋ ಬಂದವನನ್ನು ಮದುವೆಯಾದರೆ ಜೀವನ ಸುಖವಾಗುವುದಿಲ್ಲ. ನನ್ನ ಮನಸ್ಸೊಪ್ಪುವಂತಹ—ನಾನು ಪ್ರೀತಿಸುವಂತಹವನು ಸಿಕ್ಕಿದರೆ ಮದುವೆಯಾಗುತ್ತೇನೆ. ಇಲ್ಲದಿದ್ದರೆ ಮದುವೆಯೇ ಬೇಡ. ಎಲ್ಲಿಯಾದರೂ ಕೆಲಸಕ್ಕೆ ಸೇರುತ್ತೇನೆ. ಎಷ್ಟೋಮಂದಿ ಹೆಂಗಸರು ಮದುವೆಯಾಗದೆಯೇ ಸುಖವಾಗಿಲ್ಲವೇ? ಗಂಡಸರು ಬೇಕಾದರೆ ಮದುವೆ ಮಾಡಿಕೊಳ್ಳದೆಯೇ ಇರಬಹುದು ಹೆಂಗಸರು ಮದುವೆ ಮಾಡಿಕೊಳ್ಳಲೇ ಬೇಕು—ಎಂಬ ನಿರ್ಬಂಧವೇಕೆ?" ಎನ್ನುತ್ತಿದ್ದಳು.

ಆದರೆ ಈಗ ಅಕ್ಕನ ಮನೆಯಲ್ಲಿ ಬಂದಿರಲಾರಂಭಿಸಿದನಂತರ ಆ ವಿಷಯದಲ್ಲಿ ಪ್ರಮೀಳೆಯ ಅಭಿಪ್ರಾಯ ಸ್ವಲ್ಪಸ್ವಲ್ಪವಾಗಿ ಬದಲಾವಣೆಯಾಗತೊಡಗಿತು. ಕುಮುದೆಗೆ ಹದಿನಾಲ್ಕನೇ ವಯಸ್ಸಿಗೆ ಮದುವೆಯಾಗಿತ್ತು. ಮದುವೆಯಾಗುವವನನ್ನು ಸರಿಯಾಗಿ ಅರ್ಥಮಾಡಿಕೊಂಡು ಅನಂತರ ಮದುವೆಯಾಗಿರಲಿಲ್ಲ. ಅಪ್ಪ ಅಮ್ಮ ತಂದು ಗಂಟುಹಾಕಿದವನನ್ನೇ ಮದುವೆಯಾಗಿದ್ದಳು. ಆತನ ಸಂಪಾದನೆಯು ಹೆಚ್ಚಾಗಿಲ್ಲ. ಅವಳ ಗಂಡ ಶಿವಸ್ವಾಮಿಗೆ ಎಲ್ಲಾ ಸೇರಿ ಬರುವುದು ಎಂಭತ್ತುರೂಪಾಯಿ. ದುರ್ಗಿಗುಡಿಯಲ್ಲಿ ಹದಿ

ನ್ನೈದು ರೂಪಾಯಿ ಕೊಟ್ಟು ಮನೆಮಾಡಿಕೊಂಡಿದ್ದಾರೆ. ಉಳಿದ ಅರವತ್ತೈದು ರೂಪಾಯಿಗಳಲ್ಲಿ ಗಂಡ ಹೆಂಡತಿ ಮೂರುಮಕ್ಕಳೂ ಜೀವನಮಾಡುತ್ತಿದ್ದಾರೆ. ಅವರೂ ಬಡವರೇ! ಆದರೆ ಬಡರಾದರೂ ಎಷ್ಟೋ ಸುಖವಾಗಿದ್ದಾರೆ. ಗಂಡ ಹೆಂಡತಿಯರು ಪರಸ್ಪರ ಎಷ್ಟೋ ಪ್ರೀತಿಸುತ್ತಾರೆ.

ಪ್ರಮಿಳೆ ತಾನು ನೋಡಿದ ಎಷ್ಟೋ ಬಡಸಂಸಾರಗಳನ್ನು ನೆನೆದುಕೊಂಡು ಅವರೂ ತನ್ನ ಅಕ್ಕನಂತೆ ಯಾಕೆ ಸುಖವಾಗಿರಬಾರದು–ಎಂದುಕೊಳ್ಳುತ್ತಿದ್ದಳು.

ಸೂಕ್ಷ್ಮವಾಗಿ ತನ್ನ ಅಕ್ಕನೊಂದಿಗೆ ಈ ವಿಷಯ ಪ್ರಸ್ತಾಪಿಸಿದಳು.

"ಪ್ರಮಿಳಾ, ನೀನಿನ್ನೂ ಹುಡುಗಿ. ಅದು ನಿನಗೆ ಅರ್ಥವಾಗುವುದು ಕಷ್ಟ. ನೀನು ನೋಡಿದ ಬಡಸಂಸಾರಗಳಲ್ಲಿ ಕಷ್ಟವಿಲ್ಲವೆಂದು ನಾನು ಹೇಳುವುದಿಲ್ಲ. ಆದರೆ ನೀನೆಂದುಕೊಂಡಿರುವಂತೆ ನಿಸ್ಸಾರವಾದ ಜೀವನಗಳಲ್ಲ. ಹಾಗೆ ಇದ್ದಿದ್ದರೆ ಆ ಸಂಸಾರಗಳು ಎರಡು ಗಳಿಗೆಯೂ ಇರುತ್ತಿರಲಿಲ್ಲ"

"ಹಾಗಲ್ಲಕ್ಕ. ನಾನು ಹೇಳುವುದು ನಿನಗೆ ಗೊತ್ತಾಗಲಿಲ್ಲ. ನಾನು ಹೀಗೆ ಹೇಳುತ್ತೀನೆಂದುಕೊಳ್ಳಬೇಡ. ಭಾವನಿಗೆ ಬರುವ ಸಂಬಳವೂ ಕಡಿಮೆ. ನೀವೇನು ಶ್ರೀಮಂತರಲ್ಲ. ಆದರೆ ಈ ಮನೆಯಲ್ಲಿ ತೃಪ್ತಿ ಸಂತೋಷಗಳು ಕಂಡು ಬರುತ್ತವೆ. ಅಲ್ಲಿ ಹಾಗಿಲ್ಲ"

"ಕೆಲವರು ಒಪ್ಪವಾಗಿ ಬದುಕುತ್ತಾರೆ. ಮತ್ತೆ ಕೆಲವರು ಹೇಗಿದ್ದರೂ ಆಯಿತೆಂದುಕೊಳ್ಳುತ್ತಾರೆ. ಅದು ಅವರವರ ಅಭ್ಯಾಸ. ಅವರಿಗೆ ಸುಖವಿಲ್ಲವೆಂದು ಹೇಳುತ್ತೀಯಾ ?"

"ಒಪ್ಪದ ಮಾತು ಬೇರೆ, ತೃಪ್ತಿಯ ಮಾತು ಬೇರೆ"

"ಊಹು. ನೀನು ನನ್ನ ಮನೆಯಲ್ಲಿ ಹೊಕ್ಕು ಎಲ್ಲವನ್ನೂ ನೋಡಿದ್ದೀಯೆ. ಆ ಮನೆಗಳಲ್ಲಿ ಈರೀತಿಯಾಗಿ ನೋಡಲು ಅವಕಾಶವಾಗಲಿಲ್ಲ. ದೂರದಿಂದ ನೋಡಿ ತಪ್ಪು ತಿಳಿದುಕೊಂಡಿದ್ದೀಯೆ ಆ ಸಂಸಾರಗಳು ಒಡೆದುಹೋಗದೇ ಇರುವುದೇ ಅವರಿಗಾವುದೋ ಬಗೆಯ ತೃಪ್ತಿ ಸಂತೋಷಗಳಿವೆ ಎಂಬುದಕ್ಕೂ ಆಶೆ ಭರವಸೆಗಳಿವೆ ಎಂಬುಕ್ಕೂ ಸಾಕ್ಷಿ"

"ನಾನು ಹೇಳುವುದು ನಿನಗೆ ಸರಿಯಾಗಿ ಅರ್ಥವಾಗಿಲ್ಲ, ಅಕ್ಕ. ವಯಸ್ಸಾಗಿ ತಾವು ಪ್ರೀತಿಸಿ ಮದುವೆಯಾಗುವವರ ವಿಷಯ ಬೇರೆ. ಸಂಪ್ರದಾದಾಯಕ್ಕೆ ಕಟ್ಟುಬಿದ್ದು ಮದುವೆ ಮಾಡಿಕೊಳ್ಳುವವರ ವಿಷಯ ಬೇರೇ. ಸಂಪ್ರದಾಯ ಶರಣರ ಜೀವನವು ಬಲುಬೇಗ ನಿಸ್ಸಾರವಾಗುತ್ತವೆ. ಪ್ರೇಮಿಸಿ ಮದುವೆಯಾಗುವವರ ಮಾತು ಹಾಗಲ್ಲ ಅವರ ಜೀವನದಲ್ಲಿ ಉತ್ಸಾಹವಿರುತ್ತದೆ. ಆಟಪಾಟಗಳಲ್ಲಿ ಓದು ಬರಹಗಳಲ್ಲಿ ಅವರಿಗೆ ಆಸಕ್ತಿಯಿರುತ್ತದೆ. ಚಿಕ್ಕವರು ಮದುವೆಯಾದ ಒಂದೆರಡು ವರ್ಷಗಳಲ್ಲಿಯೇ ಜೀವನ ನಿಸ್ಸಾರವೆಂದುಕೊಳ್ಳುತ್ತಾರೆ"

"ನೀನು ಒಂದಕ್ಕೊಂದಕ್ಕೆ ತಪ್ಪು ತಿಳಿದುಕೊಂಡಿದ್ದೀಯೆ, ಪ್ರಮಿಳಾ. ಅದು ಪ್ರೇಮಿಸಿ ಮದುವೆಯಾಗುವುದು ಮತ್ತು ಮದುವೆಯಾಗಿ ಪ್ರೇಮಿಸಲು ಪ್ರಯತ್ನಪಡುವುದು ಅವುಗಳಲ್ಲಿಲ್ಲ. ಬಡತನ ಸಿರಿವಂತಿಕೆಗಳಲ್ಲಿದೆ. ಬಡವರು ತಮ್ಮ ಕೆಲಸ ತಾನೇ ಮಾಡಿಕೊಳ್ಳಬೇಕು. ಅವರು ಸೋಮಾರಿಗಳಾಗಿರುವುದು ಸಾಧ್ಯವೇ ಇಲ್ಲ. ಸೋಮಾರಿಗಳಾದ ಶ್ರೀಮಂತರಿಗೆ ಆಟಪಾಟಗಳಿಗೂ, ಓದುಬರಹಗಳಿಗೂ, ಪ್ರೇಮದ ಮಾತುಗಳಾಡುವುದಕ್ಕೂ ಬೇಕಾದಷ್ಟು ಅವಕಾಶವಿರುತ್ತದೆ"

"ಏನೋ ಅಕ್ಕ. ನೀನು ಹೇಳುವುದೊಂದೂ ಅರ್ಥವೇ ಆಗುವುದಿಲ್ಲ"

ನಿಜ. ಕುಮುದಾ ಹೇಳಿದ್ದು ಪ್ರಮಿಳೆಗೆ ಪೂರ್ಣವಾಗಿ ಅರ್ಥವಾಗಲಿಲ್ಲ. ಕೆಲವೊಂದು ಬಾರಿ 'ಇರಬಹುದು. ಅಕ್ಕ ಹೇಳಿದ ಹಾಗಿಲ್ಲದಿದ್ದರೆ ಗಂಡನೊಂದು ಕಡೆ ಹೆಂಡತಿಯೊಂದುಕಡೆ ಓಡಿಹೋಗುತ್ತಿದ್ದರೇನೋ' ಎಂದುಕೊಳ್ಳುವಳು.

ಪ್ರಮಿಳೆ ಶಿವಮೊಗ್ಗೆಗೆ ಹೋದ ಹತ್ತು ದಿನಗಳ ಮೇಲೆ ಒಂದು ಮಧ್ಯಾಹ್ನ ಕುಮುದ ಕೇಳಿದಳು.

"ನಿನ್ನೊಂದು ವಿಷಯ ಕೇಳಬೇಕು—ಎಂದು ಬಹಳ ದಿನಗಳಿಂದ ನನ್ನ ಮನಸ್ಸಿನಲ್ಲಿಯೇ ಇದೆ. ಕಾಣೆ"

ಸರಿ. ಇನ್ನಿವಳು ಮಾಧುವಿನ ವಿಷಯ ಕೇಳುತ್ತಾಳೆಂದು ಪ್ರಮಿಳೆ ಮನಸ್ಸಿನಲ್ಲಿಯೇ ಅಂದುಕೊಂಡಳು. ಅವಳಿಗೆ ಗೊತ್ತಿದ್ದ ಹಾಗೆ ಕುಮುದ

ಬಹಳ ಚಪಲ ಸ್ವಭಾವದವಳು. ಇಷ್ಟು ದಿನ ಕೇಳದೇ ಬಿಟ್ಟಿದ್ದೇ ಆಶ್ಚರ್ಯ.

"ಕೇಳಕ್ಕ. ಮನಸ್ಸಿಗೆ ಬಂದಾಗಲೇ ಕೇಳಬಹುದಾಗಿದ್ದಿತಲ್ಲ. ಇಷ್ಟು ದಿನಗಳು ಯಾಕೆ ಒಳಗೇ ಇಟ್ಟುಕೊಂಡಿದ್ದೆ"

"ಈಗಲೇ ನನಗೆ ತೋರಿತು ಎಂದುಕೋ. ನಷ್ಟವೇನು? ನೀನು ಮದುವೆಯಾಗುವುದಿಲ್ಲ ಎಂದು ಹಟ ಹಿಡಿದಿದ್ದೀಯಂತೆ. ಯಾಕೆ?"

ಪ್ರಮೀಳೆಯು ನಗುತ್ತಾ "ಈಗಲೇ ಏನು ಅವಸರ. ಇನ್ನೂ ನಾಲ್ಕು ದಿನಗಳು ಹೋಗಲಿ ಅಂತ" ಎಂದಳು.

"ಇನ್ನೂ ನಾಲ್ಕು ದಿನವಾಗಬೇಕೇ? ಚೆನ್ನಾಯಿತು. ಚೆನ್ನಾಯಿತು. ಮೈ ಕೈ ಸುಕ್ಕುಬಿದ್ದು, ತಲೆನೆರೆತು, ಹಲ್ಲುಗಳು ಬಿದ್ದಮೇಲೆ ಮಾಡಿಕೋಬೇಕು–ಅಂತ ಇದ್ದೀಯೇನು? ಆ ವಯಸ್ಸಿನಲ್ಲಿ ಮಾಡಿಕೊಂಡರೂ ಒಂದೇ ಬಿಟ್ಟರೂ ಒಂದೇ"

"ಆಗಲಿ ಬೇಗನೆ ಮಾಡಿಕೊಳ್ಳೋಣವಂತೆ ಬಿಡು. ನೀನು ಕೇಳಿದೆಯಲ್ಲಾ ಎಂದು ಹೇಳುತ್ತೇನೆ. ನನ್ನ ಸ್ನೇಹಿತೆ ಒಬ್ಬಳಿದ್ದಾಳೆ. ಜಾನಕಿ ಅಂತ. ಅವಳಿಗೆ ಮೂವತ್ತರ ಹತ್ತಿರ ಹತ್ತಿರ ವಯಸ್ಸಾಗಿದೆಯಂತೆ. ಅವಳಿಗಿನ್ನೂ ಮದುವೆಯೇ ಇಲ್ಲ"

"ನೀನು ಹೇಳುವುದು ನಮ್ಮೂರಿನಲ್ಲಿ ಆಚೇ ಬೀದಿಯ ಹುಡುಗಿಯನ್ನಲ್ಲವೇ? ಯಾಕಿಲ್ಲ ಹೇಳು"

"ತಾನು ಪ್ರೀತಿಸುವಂತಹವನು ಸಿಕ್ಕಿದರೆ ಮಾತ್ರ ಮದುವೆಯಾಗುತ್ತಾಳೆಯಂತೆ. ಅಪ್ಪ ಅಮ್ಮ ಯಾವನನ್ನೋ ತಂದು ಮದುವೆಯಾಗು ಎಂದರೆ ಮದುವೆಯಾಗುವುದಿಲ್ಲ–ಎನ್ನುತ್ತಾಳೆ"

"ಅವಳ ಮಾತು ಬಿಡು. ನಾನು ಅವಳನ್ನು ಬಲ್ಲೆ. ಅದೆಲ್ಲಾ ಸುಳ್ಳು. ಸಾವಿರಾರು ರೂಪಾಯಿ ಸಂಬಳ ಬರುವವನಿಗೆ ಕಾದಿದ್ದಾಳವಳು. ನಿನ್ನ ವಿಷಯ ಹೇಳು"

"ನನ್ನ ವಿಷಯ ಬಿಟ್ಟೇ. ಈಗಲೇ ಏನು ಅವಸರ?"

"ಹಾಗಲ್ಲ. ನಿನ್ನ ಗುಟ್ಟು ನನಗೆ ಗೊತ್ತು"

"ಸರಿ. ಗೊತ್ತಿದ್ದ ಮೇಲೆ ಯಾಕೆ ಕೇಳುತ್ತೀಯೆ?"

“ನಾನು ಹೇಳುವುದನ್ನು ಪೂರಾ ಕೇಳು. ನೀನು ಯಾರೋ ಹಿಂದೀ ಮೇಸ್ಟರನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದೀಯಂತೆ. ಅದರಿಂದ ಬೇರೇ ಯಾರನ್ನೂ ಮದುವೆಯಾಗುವುದಿಲ್ಲವೆಂದು ಹಟ ಹಿಡಿದು ಕುಳಿತಿದ್ದೀಯಂತೆ. ನಾನು ಹೇಳುವುದು ನಿನಗೆ ಬೇಗ ಮದುವೆಯಾಗಬೇಕೆಂದು. ಅಷ್ಟೇ. ಆತನಿಗೇ ಕೊಟ್ಟು ಮದುವೆ ಮಾಡಿಬಿಡೋಣ.”

ಪ್ರಮೀಳೆಯು ಎಚ್ಚರ ತಪ್ಪಿ “ಇಲ್ಲಕ್ಕ. ಅಪ್ಪ ಜಪ್ಪಯ್ಯ ಎಂದರೂ ಅದಕ್ಕೆ ಒಪ್ಪುವುದಿಲ್ಲ” ಎಂದಳು.

“ಒಪ್ಪುತ್ತಾನೆ. ಒಪ್ಪದೇ ಏನು ಮಾಡುತ್ತಾನೆ. ನಾನು ಹೇಳಿ ಒಪ್ಪಿಸುತ್ತೇನೆ. ಸುಮ್ಮನಿರು”

ಕುಮುದ ಆ ದಿನ ಅಷ್ಟಕ್ಕೇ ಮಾತುಬಿಟ್ಟಳು.

ಆದರೆ ಸಾವಧಾನವಾಗಿ ಮಾಧವರಾಯನ ವಿಷಯವೆಲ್ಲವನ್ನೂ ತಂಗಿಯಿಂದ ಕೇಳಿ ತಿಳಿದುಕೊಂಡಳು. ಬಾಣಸಂದ್ರದಲ್ಲಿ ಎರಡು ದಿನ ಇದ್ದ ವಿಷಯವನ್ನೊಂದು ಹೇಳದೇ ಮಿಕ್ಕ ವಿಷಯವೆಲ್ಲಾ ಪ್ರಮೀಳೆ ಹೇಳಿದಳು. ತಾಯಿ ತಂದೆಗಳಿಗೆ ಆರೋಗ್ಯ ಚೆನ್ನಾಗಿಲ್ಲವೆಂದು ಅವನು ಚಿತ್ರವಾಡಿಗೆ ಹೋಗಿರುವುದಾಗಿಯೂ ಅಲ್ಲಿಂದ ಶಿವಮೊಗ್ಗೆಗೆ ಬರುವುದಾಗಿ ಹೇಳಿರುವುದಾಗಿ ತಿಳಿಸಿದಳು.

ಒಂದೂವರೆ ಎರಡು ತಿಂಗಳು ಕಳೆದರೂ ಮಾಧವರಾಯನು ಬರಲಿಲ್ಲ. ಅವನಿಂದ ಕಾಗದ ಪತ್ರಗಳು ಸಹ ಬರಲಿಲ್ಲ.

“ನಿನಗೊಂದು ಕತೆ ಹೇಳಲೇ, ಪ್ರಮೀಳಾ” ಎಂದು ಒಮ್ಮೆ ಕುಮುದೆ ಕೇಳಿದಳು.

“ಹೇಳು. ಚಿಕ್ಕ ಮಕ್ಕಳು ಕತೆ ಹೇಳು ಕತೆ ಹೇಳು ಎಂದು ಪ್ರಾಣ ತೆಗೆಯುತ್ತಾರೆ. ನನಗೆ ಬರುವ ಕತೆಗಳೆಲ್ಲವೂ ತೀರಿಹೋಗಿವೆ. ಹೊಸದೊಂದು ಕತೆ ಸಿಕ್ಕಿದರೆ ಅವರು ಕೇಳಿದಾಗ ಹೇಳುವುದಕ್ಕಾದರೂ ಆಗುತ್ತದೆ.”

“ಇದು ಮಕ್ಕಳಿಗಾಗಿ ಹೇಳುವ ಕತೆಯಲ್ಲ. ನಿನಗಾಗಿ ಹೇಳುವ ಕತೆ.”

"ಯಾರಿಗಾದರೂ ಆಗಲಿ. ಹೇಳುವುದಂತೂ ಹೇಳು"

"ಒಂದಾನೊಂದು ಕಾಲದಲ್ಲಿ ಪಾರ್ವತೀ ಪರಮೇಶ್ವರರು ಬೆಸ್ತರ ಜಾತಿಯಲ್ಲಿ ಹುಟ್ಟಿದರಂತೆ. ಒಂದೇ ಹಳ್ಳಿಯಲ್ಲಿ ಹುಟ್ಟಿದವರು. ಹುಡುಗರಾಗಿದ್ದಾಗ ಆಡಿಕೊಂಡಿದ್ದರು. ಅವರಲ್ಲಿ ಪರಸ್ಪರ ವಿಶ್ವಾಸವಿತ್ತು. ಬೆಳೆದು ದೊಡ್ಡವರಾಗುತ್ತಲೂ ಒಬ್ಬರನ್ನೊಬ್ಬರು ಪ್ರೀತಿಸತೊಡಗಿದರು. ಮದುವೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದರು. ಪರಮೇಶ್ವರ ಜಗದೊಡೆಯನಾದರೂ ಬೆಸ್ತರ ಮನೆಯಲ್ಲಿ ಹುಟ್ಟಿದ ಮೇಲೆ ಮೀನು ಹಿಡಿಯಲು ಹೋಗಲೇಬೇಕಷ್ಟೇ. ಒಂದು ದಿನ ಬೆಳಗಾಗ ಎದ್ದವನೇ ಮೀನು ಹಿಡಿಯಲು ಹೋದ. ಸೂರ್ಯಾಸ್ತಮಾನದ ಸಮಯವಾಗುತ್ತ ಬಂದಿತು. ಗಂಡಸರು ಮೀನು ಹಿಡಿಯಲು ಹೋದರೆ ಹೆಂಗಸರೂ ಮಕ್ಕಳೂ ಸಾಯಂಕಾಲ ಅವರು ಬರುವುದನ್ನು ನಿರೀಕ್ಷಿಸುತ್ತಾ ದಡದಲ್ಲಿ ನಿಂತುಕೊಳ್ಳುವುದು ಸಮುದ್ರತೀರದ ಹಳ್ಳಿಗಳಲ್ಲಿ ರೂಢಿ. ಹಾಗೆಯೇ ಬೆಸ್ತರ ಹುಡುಗಿ ಸಮುದ್ರ ತೀರದಲ್ಲಿ ನಿಂತು ತನ್ನ ಪ್ರಿಯನಿಗಾಗಿ ನಿರೀಕ್ಷಣೆ ಮಾಡತೊಡಗಿದಳು. ಸಮುದ್ರದ ಮೇಲೆ ಹೋಗಿದ್ದವರೆಲ್ಲರೂ ಹಿಂತಿರುಗಿದರು. ಆ ಪ್ರಿಯ ಮಾತ್ರ ಹಿಂತಿರುಗಲಿಲ್ಲ. ಕತ್ತಲಾಯಿತು. ಬಿರುಗಾಳಿ ಮಳೆಗಳು ಬಂದುವು. ಸಮುದ್ರ ಅಲ್ಲಕಲ್ಲೋಲವಾಯಿತು. ಅವನು ಬರುವ ಆಸೆಯೇ ಉಳಿಯಲಿಲ್ಲ. ಆದರೆ ಆ ಹುಡುಗಿ ತನ್ನ ಪ್ರಿಯನಿಗಾಗಿ ನಿರೀಕ್ಷಿಸುತ್ತಾ ನಿಂತುಕೊಂಡೇ ಇದ್ದಳು. ಸಾವಿರಾರು ವರ್ಷಗಳಾದುವು. ಇನ್ನೂ ಆ ಪ್ರಿಯ ಬರಲಿಲ್ಲ. ಆದರೆ ಆ ಹುಡುಗಿ ಇನ್ನೂ ಕಾಯುತ್ತಾ ನಿಂತಿದ್ದಾಳೆ. ಅವಳೇ ಕನ್ಯಾಕುಮಾರಿ"

ಅಕ್ಕ ಹೇಳಿದ ಕತೆ, ಹೇಳಿದ ಕಾರಣ ತಂಗಿಗೆ ಗೊತ್ತಾಯಿತು.

"ನನ್ನ ಮದುವೆಯ ವಿಷಯವೂ ಹಾಗೇ ಆಗುತ್ತದೆ ಎಂದಲ್ಲವೇ ನೀನು ಈ ಕತೆಯನ್ನು ಹೇಳಿದುದು"

"ಈಗೀಗ ನನಗೆ ಅದೇ ಸಂದೇಹ ಬರತೊಡಗಿದೆ. ಎಂಟು ದಿನಗಳೊಳಗಾಗಿ ಬಂದು ನೋಡುತ್ತೇನೆ ಎಂದು ಹೇಳಿದ ಎಂದಿದ್ದೆ. ಎಂಟು ದಿನಗಳು ಹೋಗಲಿ, ಎಂಟು ವಾರಗಳಾದರೂ ಅವನಿಂದ ಸಮಾಚಾರವೇ ಇಲ್ಲ"

"ಹಾಗಲ್ಲ ಅಕ್ಕ. ಅವರ ವಿಷಯ ನಿನಗೆ ಗೊತ್ತಿಲ್ಲ. ಏನೋ ಅನಾನು

ಕೂಲವಾಗಿ ಅವಗು ಬಂದಿಲ್ಲ. ನೋಡುತ್ತಾ ಇರು. ನಾಳೇ ನಾಡಿದ್ದರಲ್ಲಿ ಅವರಾದರೂ ಬರುತ್ತಾರೆ. ಅಥವಾ ಅವರಿಂದ ಕಾಗದವಾದರೂ ಬರುತ್ತದೆ"

ಆ ಎರಡು ದಿನಗಳೂ ಕಳೆದುವು. ಎರಡು ವಾರಗಳೂ ಕಳೆದುವು. ಮಾಧವರಾಯನಿಂದ ಸಮಾಚಾರವೇ ಬರಲಿಲ್ಲ.

ಒಂದು ದಿನ ಮಧ್ಯಾಹ್ನ ಕುಮುದ ತವರಿಗೆ ಯೋಗಕ್ಷೇಮದ ಕಾಗದ ಬರೆಯುತ್ತಾ ಕುಳಿತುಕೊಂಡಿದ್ದಳು.

ಕಾಗದದ ಮೊದಲಲ್ಲಿ "ಕ್ಷೇಮ. ತೀರ್ಥರೂಪು ತಂದೆಯವರಿಗೆ — —" ಎಂದು ಬರೆದಿದ್ದುದನ್ನು ನೋಡಿ ಪ್ರಮೀಳೆಯು "ಊರಿಗೆ ಕಾಗದ ಬರೆಯುತ್ತಿದ್ದೀಯಾ ? ಏನು ಬರೆಯುತ್ತೀಯೆ ?" ಎಂದು ಲೋಕಾಭಿರಾಮವಾಗಿ ಕೇಳಿದಳು.

"ಅದೇ. ನಿನ್ನ ವಿಷಯವನ್ನೇ ಬರೆಯೋಣವೆಂದು ಕುಳಿತುಕೊಂಡೆ. ಸಮುದ್ರ ತೀರಕ್ಕೆ ಹೋದವನು ಹೊರಟೇಹೋದ. ಅವನೇನು ಬರುವ ತರಹ ಕಂಡುಬರುವುದಿಲ್ಲ. ನಮ್ಮ ಪ್ರಮೀಳೆ ಕನ್ಯಾಕುಮಾರಿಯಂತೆ ಕಾಯುತ್ತಾ ನಿಂತಿರಬೇಕಾದ್ದೇನೋ, ಅವಳಿಗೇನಾದರೂ ಮದುವೆಯ ಏರ್ಪಾಟು ಮಾಡುತ್ತೀರೋ ಎಂದು ಬರೆಯುತ್ತೇನೆ"

"ಯಾರಾದರೂ ನಿನ್ನ ಕಾಗದ ನೋಡಿದರೆ ನಗುತ್ತಾರೆ"

"ನಕ್ಕರೆ ನಕ್ಕರು ಬಿಡು. ನಿನಗೆ ಕನ್ಯಾಸೆರೆ ಬಿಟ್ಟುಹೋಗಲಿ"

ತಂಗಿ ಏನೂ ಮಾತನಾಡಲಿಲ್ಲ.

ಕುಮುದ ಕಾಗದ ಬರೆಯಲು ಕುಳಿತುಕೊಂಡಾಗ ಈ ವಿಷಯ ಬರೆಯಬೇಕೆಂದಿರಲಿಲ್ಲ. ಮಾತಿಗೆ ಮಾತು ಬಂದು ಈ ವಿಷಯ ಬಂದಿತ್ತು. ಪ್ರಮೀಳೆ ಹಣ್ಣಾಗಿರುವಂತೆ ಅವಳಿಗೆ ಭಾಸವಾಯಿತು. ಯೋಗಕ್ಷೇಮಗಳನ್ನು ಬರೆದು ಮುಗಿಸಿ ಕಡೆಯಲ್ಲಿ "ಇನ್ನೆಷ್ಟು ದಿನ ಪ್ರಮೀಳೆಗೆ ಮದುವೆ ಮಾಡದೇ ಸುಮ್ಮನಿರುವುದು. ಎಲ್ಲಿಯಾದರೂ ಒಂದು ಗಂಡು ನೋಡಿ ಮದುವೆ ಮಾಡಿಬಿಡಿ. ನಾನು ಅವಳನ್ನು ಒಪ್ಪಿಸಿದ್ದೇನೆ" ಎಂದು ಬರೆದು ತಂಗಿಗೆ ತೋರಿಸಿದಳು.

ತಂಗಿ ಅದನ್ನು ಹರಿದುಹಾಕಲು ಪ್ರಯತ್ನಮಾಡಿದಳು. ಆದರದು ಹುಸಿ ಪ್ರಯತ್ನವಾಗಿತ್ತು.

ಪ್ರಮೀಳೆ ಹೆಣ್ಣಾಗಿದ್ದಾಳೆಂದು ಅವಳಕ್ಕ ಭಾವನೆಮಾಡಿದ್ದುದರಲ್ಲಿ ಸ್ವಲ್ಪ ನಿಜವಿತ್ತು.

ಹತ್ತಿರ ಹತ್ತಿರ ಮೂರು ತಿಂಗಳುಗಳು ಉರುಳಿಹೋಗಿದ್ದರೂ ಮಾಧವ ರಾಯನ ಸುಳಿವೇ ಕಂಡುಬರಲಿಲ್ಲ. ಬರುತ್ತೇನೆಂದವನು ಬರಲಿಲ್ಲ. ಕಾಗದ ವನ್ನಾದರೂ ಬರೆಯಲಿಲ್ಲ. ಹೀಗೇಕೆ ಮಾಡಿದ? ತನ್ನಲ್ಲಿ ಅವನಿಗಿದ್ದ ಪ್ರೇಮವು ಮಾಯವಾಯಿತೋ?

ಮಾಧುವಿಗೆ ತನ್ನಲ್ಲಿದ್ದ ಆಸಕ್ತಿಯು ಕಡಿಮೆಯಾಗಿ ಹೋಯಿತೋ ಎಂದು ಒಂದೊಂದುಬಾರಿ ತೋರುತ್ತದೆ. ಅದು ತೋರಲಾರಂಭಿಸಿದುದು ಇತ್ತೀಚೆಗಲ್ಲ. ಅವರು ಶಿವಮೊಗ್ಗಾಗೆ ಹೊರಟ ದಿನ ಶಾರದೆಯೊಂದಿಗೆ ಮಾತ ನಾಡಿದ ಪ್ರತ್ಯೇಕಕಾಲದಿಂದ ತೋರಲಾರಂಭವಾಗಿತ್ತು.

ಅಪ್ಪ ಅಮ್ಮ ಎಲ್ಲರನ್ನೂ ಬಿಟ್ಟು ಕಂಡುಕಾಣದ ತನ್ನೊಂದಿಗೆ ಬಂದವಳು ಮತ್ತಾರೊಡನೆಯೋ ಹೀಗೇ ಹೋಗಿಲ್ಲ, ಹೋಗುವುದಿಲ್ಲ ಎಂಬ ಭರವಸೆ ಯುಂಟಾಗುವುದು ಹೇಗೆ, ಆ ಸಂಶಯ ಅವನಿಗೆ ಬರುವುದಿಲ್ಲವೇ—ಎಂದು ಶಾರದೆ ಕೇಳಿದ್ದಳು. ಆ ಮಾತು ಆ ನಿಮಿಷದಿಂದಲೂ ಅವಳ ಮನಸ್ಸಿ ನಲ್ಲಿ ಮುಳ್ಳಿನಂತೆ ಚುಚ್ಚುತ್ತಿತ್ತು.

ಆ ಸಂದೇಹ ಬಂದು ಮಾಧುವು ತನ್ನ ವಿಷಯದಲ್ಲಿ ಅನಾಸಕ್ತನಾಗಿದ್ದಾ ನೆಯೋ ಎಂಬ ಭಾವನೆ ಪ್ರಮೀಳೆಯನ್ನು ಅಸ್ಥಿರಳನ್ನಾಗಿ ಮಾಡಿತು. ದಡವೇ ಕಾಣದೇ ಪ್ರವಾಹದಲ್ಲಿ ತೇಲಿಹೋಗುತ್ತಿರುವಂತೆ ಅವಳಿಗೆ ಭಾಸವಾಗಿತ್ತು.

ಮಗಳ ಕಾಗದವನ್ನು ಕಂಡು ಗುಂಡಪ್ಪನವರು ಖುಷಿಯಾದರು. ಪ್ರಮೀಳೆ ಶಿವಸಮುದ್ರದಲ್ಲಿದ್ದಾಗಲೇ ಸರಿಹೋಗುತ್ತಿದ್ದಾಳೆಂದು ಕೊಂಡಿ ದ್ದರು. ಈಗ ಮಗಳಿಂದ ಈರೀತಿಯಾಗಿ ಕಾಗದವು ಬರುತ್ತಲೇ ದೊಡ್ಡ ದೊಂದು ಗಂಡಾಂತರದಿಂದ ಪಾರಾದ ಹಾಗಾಯಿತು.

ಗುಂಡಪ್ಪ ಕಾಗದ ಓದುತ್ತಿದ್ದಂತೆಯೇ ಪಾತಮ್ಮನವರು "ಏನೊಂದ್ರೇ. ಯಾವುದೋ ಕಾಗದ ಬಂದ ಹಾಗಿದೆ. ಶಿವಮೊಗ್ಗದ್ದು ತಾನೇ" ಎಂದರು.

"ಹೌದು. ಶಿವಮೊಗ್ಗಾದಿಂದಲೇ. ಕುಮುದ ಬರೆದಿದ್ದಾಳೆ. ಮಕ್ಕಳು

ಮರಿ, ನಿನ್ನ ಅಳಿಯ ಎಲ್ಲರೂ ಆರೋಗ್ಯವಾಗಿದ್ದಾರಂತೆ. ಈಗ ಮುಖ್ಯವಾದ ವಿಷಯ ಕೇಳು. ಪ್ರಮೀಳೆಯ ಬುದ್ಧಿ ಸರಿಹೋಗಿದೆ. ಅವಳು ಮದುವೆ ಮಾಡಿಕೊಳ್ಳಲು ಸಿದ್ಧವಾಗಿದ್ದಾಳೆ–ಎಂದು ಬರೆದಿದ್ದಾಳೆ”

“ರೋಗಿ ಬಯಸಿದ್ದೂ ಹಾಲು ಅನ್ನ. ವೈದ್ಯ ಹೇಳಿದ್ದೂ ಹಾಲು ಅನ್ನ. ಸರಿಯೇ ಹೋಯಿತಲ್ಲ. ಎಲ್ಲಿಯಾದರೂ ಗಂಡು ನೋಡಿ ಅವಳು ಒಪ್ಪಿರುವಾಗಲೇ ಮದುವೆ ಮಾಡಿಬಿಡಿ”

“ಹೂ. ಮಾಡಿಬಿಡಿ. ಹೆಂಗಸರು ನಿಮಗೆ ಹೇಳುವುದಕ್ಕೇನು, ಹೇಳುತ್ತೀರಿ? ಒಪ್ಪಿಕೊಂಡಿದ್ದರೆ ಇಷ್ಟು ಹೊತ್ತಿಗೆ ಮದುವೆಯೇ ಆಗಿಹೋಗುತ್ತಿತ್ತು. ಅಂತಹ ಸಂಬಂಧವನ್ನು ಬೇಡವೆಂದು ಬಿಟ್ಟು ಈಗ ಗಂಡು ನೋಡಿ ಎಂದರೆ ಎಲ್ಲಿ ಸಿಗುತ್ತವೆ. ಗಂಡುಗಳನ್ನು ಹುಡುಕಿ ತರುವುದು ಎಂದರೆ ಮಾರ್ಕೆಟ್ಟಿನಲ್ಲಿ ತರಕಾರಿ ಕೊಂಡುಕೊಂಡು ಬಂದಹಾಗೆ ಎಂದುಕೊಂಡಿದ್ದೀಯೇನು”

“ನೀವು ಹೀಗೆ ಮುರಾಡಾ ಹಾಕಿ ಕುಳಿತುಕೊಂಡರೆ ಹೆಣ್ಣು ಹೆಂಗಸು ನಾನೇನು ಮಾಡುವುದಕ್ಕಾಗುತ್ತದೆ? ಏನೋ ತಿಳಿಯದ ಕಂದ. ಅದರ ಮೇಲೆ ಕೋಪಮಾಡಿಕೊಂಡರೆ ಹೇಗಾಗುತ್ತದೆ. ಏನಾದರೂ ಮಾಡಬೇಕು. ಮತ್ತೆ ನಿಮ್ಮ ತಂಗಿಯನ್ನೇ ಹೋಗಿ ನೋಡಿ. ಏನಾದರೂ ಮಾಡುತ್ತಾರೆ”

“ಬೇಕು, ಬೇಕಾದಾಗಲೆಲ್ಲಾ ರಜಾ ಸಿಕ್ಕಲು ನಿನ್ನ ಗಂಡನೇನು ಸರದಾರ ಅಂದುಕೊಂಡಿದ್ದೀಯೋನೇ ?”

“ಇಂಥಾ ಸಮಯಕ್ಕಿಲ್ಲದ್ದು ಯಾಕೆ ಅಂದರೆ? ಮನೆ, ಹೆಂಡತಿ, ಮಕ್ಕಳು ಎಲ್ಲಾ ಬಿಟ್ಟು ಗೂಟಾ ಹೊಡೆದುಕೊಂಡು ಕುಳಿತಿರಬೇಕು ಅಂತ ಹೇಳಿದೆಯೆ? ನಮ್ಮ ಸಂಸಾರಕ್ಕಾಗಿ ತಾನೇ ಆ ಕೆಲಸ?”

ಗಳಿಗೆಯ ಹೊತ್ತು ಯೋಚನೆಮಾಡಿ ಗುಂಡಪ್ಪ ‘ಅದನ್ನು ಹೇಗಾದರೂ ಮಾಡಿಕೊಳ್ಳಬಹುದು ಎನ್ನು. ಆದರೆ ಯಾವ ಮುಖವಿಟ್ಟುಕೊಂಡು ಅವಳ ಮುಂದೆ ಹೋಗಲಿ, ಹೇಳು” ಎಂದರು.

“ಅವರಿಗೆ ತಾನೇ ವಿಷಯ ಗೊತ್ತಿಲ್ಲವೇ ? ಹೋಗಿಬನ್ನಿ”

ಪಾತಮ್ಮನವರು ಹೇಳಿದರೂ ಹೇಳದಿದ್ದರೂ ಗುಂಡಪ್ಪನವರಿಗೆ ಇದ್ದುದು ಅದೊಂದೇ ಮಾರ್ಗ. ಹೆಂಡತಿಗಿದ್ದ ಜವಾಬ್ದಾರಿ ಗಂಡನಿಗೇ ಇರದೇ ಇರ

ಲಿಲ್ಲ. ಬುದ್ಧಿಕೆಟ್ಟ ಮಗಳು ಒಪ್ಪಿರುವಾಗಲೇ ಯಾವುದಾದರೊಂದು ಕಡೆ ಗಂಟುಹಾಕಿ ತನ್ನ ತಲೆಯ ಮೇಲಿನ ಹೊರೆ ಇಳಿಸಿಕೊಳ್ಳಬೇಕು ಎಂದಿತ್ತು, ಅವರಿಗೆ.

ದುರುಗುಟ್ಟಿಕೊಂಡೇ ಬೆಂಗಳೂರಿಗೆ ಬಂದು ನಾಗರತ್ನಮ್ಮನಿಗೆ ಗಂಟು ಬಿದ್ದರು.

ನಾಗರತ್ನಮ್ಮ ಹುಸಿಕೋಪದಿಂದ "ಒಳ್ಳೆಯ ಆಸಾಮಿ ಕಣೋ ನೀನು. ಕಷ್ಟಪಟ್ಟು ಕುದುರಿಸಿ ಕರೆದುಕೊಂಡು ಬಂದ ಗಂಡುಗಳನ್ನೆಲ್ಲಾ ನೀನೂ ನಿನ್ನ ಮಗಳೂ ಬೇಡವೆನ್ನುತ್ತೀರಿ. ನಾನು ಹೊಸಹೊಸ ಗಂಡುಗಳನ್ನು ಹುಡುಕುತ್ತಿರುತ್ತೇನೆ. ನೀನು ಹುಡುಗಾಟವಾಡುತ್ತಿರುವಂತೆ ಕಂಡುಬರುತ್ತದೆ" ಎಂದರು.

"ಆಯಿತಲ್ಲ ನಾಗು. ಎಲ್ಲವೂ ನಿನಗೇ ಗೊತ್ತಿದೆ. ಆ ಹುಡುಗಿಗೆ ಇದ್ದಕ್ಕಿದ್ದ ಹಾಗೆ ಬುದ್ಧಿಕೆಟ್ಟು ಹೀಗೆಲ್ಲಾ ಮಾಡುತ್ತಾಳೆಂದು ನನಗೆ ಸ್ವಪ್ನ ಬಿದ್ದಿತ್ತೇ, ಹೇಳು. ಈಗೇನೋ ಬುದ್ಧಿ ಸರಿಯಾಗಿದೆ. ಮದುವೆಮಾಡಿಕೊಳ್ಳುತ್ತೇನೆಂದು ಹೇಳುತ್ತಿದ್ದಾಳೆಂದು ಅವಳಕ್ಕ ಬರೆದಿದ್ದಾಳೆ. ಈಗಲೇ ಏನಾದರೂ ಮಾಡಬೇಕು."

"ಏನುಮಾಡಲಿ, ಹೇಳಪ್ಪ. ಅದಿರಲಿ. ಏಳು. ಊಟಮಾಡುವಿಯಂತೆ"

"ಊಟಗೀಟ ಎಲ್ಲಾ ಆಮೇಲೆ. ಮೊದಲು ನನ್ನ ಮಾತಿಗೇನು ಹೇಳುತ್ತೀಯೋ ಹೇಳು"

"ನೀನು ಬಂದಕೂಡಲೇ ಆಗಲಿ ಎಂದು ಹೇಳುವುದಕ್ಕೆ ನಾನೇನು ಗಂಡು ಮಕ್ಕಳನ್ನು ಹೆತ್ತು ಇಟ್ಟುಕೊಂಡಿದ್ದೇನೆಯೆ ? ಮಾತುಕೊಡು ಇಲ್ಲದಿದ್ದರೆ ಉಪ್ಪೋಸ್ಕ ಕುಳಿತುಕೊಳ್ಳುತ್ತೇನೆ–ಎಂದರೆ ಹೇಗೆ ?"

"ಹಾಗೇ! ನೀನು ಹುಂ ಎನ್ನುವವರೆವಿಗೆ ನಿನ್ನ ಮನೆಯಲ್ಲಿ ಉಪ್ಪೋಸ್ಕ ಕುಳಿತುಕೊಳ್ಳಬೇಕೆಂದು ತೀರ್ಮಾನಮಾಡಿಕೊಂಡೇ ಬಂದಿದ್ದೇನೆ"

"ನೀನು ಹಾಗೆಲ್ಲಾ ಸತ್ಯಾಗ್ರಹ ಮಾಡುವುದಾದರೆ ನಾನೂ ಸತ್ಯಾಗ್ರಹ ಮಾಡುತ್ತೇನೆ. ಈ ಮುರಾಡವೆಲ್ಲಾ ನಡೆಯುವುದಿಲ್ಲ. ನಾನೂ ನಿನ್ನ ತಂಗಿಯೇ. ರಜಾಗೆ ಬರೆದುಹಾಕಿ ಮೂರು ನಾಲ್ಕು ದಿನ ಇರು. ಇವರಿವರನ್ನು ವಿಚಾರಿಸಿ ನೋಡೋಣ. ಎಲ್ಲಿಯಾದರೂ ಕೂಡಿ ಬರುತ್ತದೆಯೇನೋ?

ಒಟ್ಟಿನಲ್ಲಿ ಈ ಹುಡುಗಿಯ ಅದೃಷ್ಟ ಹೇಗಿದೆಯೋ ಹಾಗಾಗುತ್ತದೆ. ಊಟಕ್ಕೇಳು"

ಇನ್ನೂ ಬಲಾತ್ಕಾರ ಮಾಡುವುದು ಸರಿಹೋಗುವುದಿಲ್ಲವೆಂದುಕೊಂಡು ಗುಂಡಪ್ಪ ಊಟಕ್ಕೆದ್ದರು.

ತಂಗಿಯೊಡನೆ ಊಟಕ್ಕೆ ಕುಳಿತಿದ್ದಾಗ "ನಾಗು. ಯಾವುದಾದರೂ ವರ ನಿನ್ನ ಮನಸ್ಸಿನಲ್ಲಿದೆಯೆ ?" ಎಂದು ಕೇಳಿದರು.

"ನೋಡೋಣ ಎಂದು ಹೇಳಿದೆನಲ್ಲಾ. ನೀನು ಕುದುರೆಯಿಂದ ಇಳಿಯದೆಯೇ ಹೋದರೆ ಹೇಗೆ ಹೇಳು"

ಊಟ ಮಾಡುತ್ತಾ ನಾಗರತ್ನಮ್ಮನವರು ಅತ್ತಿಗೆಯ ಯೋಗಕ್ಷೇಮ ವಿಚಾರಿಸಿದರು. ಶಿವಮೊಗ್ಗಾದಲ್ಲಿ ಕುಮುದೆಯ ಮನೆಯ ಯೋಗಕ್ಷೇಮ ಕೇಳಿದರು. ಪ್ರಮಿಳೆಯ ವಿಚಾರವನ್ನು ಕೇಳಿ ತಿಳಿದುಕೊಂಡರು.

ಅನಂತರ "ಗುಂಡಾ. ನಿನ್ನ ಮಗಳೊಬ್ಬಳದೇ ಹೀಗೆ ಎಂದುಕೊಳ್ಳಬೇಡ. ನಮ್ಮ ಹೈಸ್ಕೂಲಿನಲ್ಲಿ ನೋಡುತ್ತಿದ್ದೇನಲ್ಲಾ. ಈ ಹುಡುಗಿಯರ ಮನೋಭಾವವೇ ವಿಚಿತ್ರವಾಗಿ ಕಂಡು ಬರುತ್ತಿದೆ. ಈ ಹುಡುಗಿಯರು ಏನೋ ಒಂದೆರಡು ದಿನ ಓದಿಕೊಂಡಿದ್ದು ಆ ಮೇಲೆ ಯಾವನನ್ನೋ ಕಟ್ಟಿಕೊಂಡು ಸುಖವಾಗಿ ಬದುಕೋಣ ಎಂಬಂತೆ ಇಲ್ಲ. ಮೋಟರು ಕಾರುಗಳಲ್ಲಿ ಓಡಿಯಾಡುವ ಶ್ರೀಮಂತ ಸ್ತ್ರೀಯರೇ ಈ ಹುಡುಗಿಯರಿಗೆಲ್ಲಾ ಆದರ್ಶ. ಆ ಮನೋರಥವನ್ನು ಈಡೇರಿಸ ಬಲ್ಲವನು ಇದ್ದರೆ ಮದುವೆಯಾಗಲೀ. ಇಲ್ಲದಿದ್ದರೆ ಬೇಡ. ನಾವೇ ಓದಿಕೊಂಡು ಯಾವುದಾದರೂ ಕೆಲಸವೋ ಪಲಸವೋ ಮಾಡಿಕೊಂಡಿರುತ್ತೇವೆ – ಎಂದುಕೊಳ್ಳುತ್ತಾರೆ" ಎಂದರು.

ಗುಂಡಪ್ಪನವರಿಗೆ ಇವೆಲ್ಲಾ ಗೊತ್ತಿರಲಿಲ್ಲ. ಮುಗ್ಧರಂತೆ ಕೇಳತೊಡಗಿದರು.

"ಹೀಗೇ ಇದ್ದರೆ ಈಗಿನಂತೆ ಮದುವೆ ಸಂಸಾರಗಳು ನಡೆಯುತ್ತವೆ ಎಂದು ನನಗೆ ತೋರುವುದಿಲ್ಲ. ಗಂಡು ಹುಡುಗರಂತೆಯೇ ಹೆಣ್ಣು ಹುಡುಗಿಯರೂ ಓದಿ ಒಂದೊಂದು ಕೆಲಸಕ್ಕೆ ಸೇರುತ್ತಾರೆ. ತೋರಿದವರನ್ನು ತೋರಿದವರು ಕಟ್ಟಿಕೊಂಡು ಬದುಕುತ್ತಾರೆ"

ಮುಂದೆ ಹೇಗಾಗುತ್ತದೆಯೋ ಆ ಕಾಲಜ್ಞಾನದಲ್ಲಿ ಗುಂಡಪ್ಪನವರಿಗೆ ಆಸಕ್ತಿಯಿರಲಿಲ್ಲ. ತಮ್ಮ ಮಗಳ ತಲೆಯ ಮೇಲೆ ಮಂಗಳಾಕ್ಷತೆ ಬಿದ್ದರೆ ಸಾಕು. ಆ ಮೇಲೆ ಪ್ರಪಂಚ ಹೇಗಾದರೂ ಆಗಲಿ ಎಂದು ಅವರ ಮನೋಭಿಪ್ರಾಯ.

"ಅಯ್ಯೋ! ಅದು ಹೇಗೆ ಬೇಕಾದರೂ ಆಗಲಿ, ನಾಗು. ಮೊದಲು ಪ್ರಮಿಳೆಗೊಂದು ಮದುವೆಯಾಗಿ ಬಿಟ್ಟರೆ — —"

"ಆ ಮಾತಾಡಬೇಡ ಎಂದು ಹೇಳಿದ್ದೆನಲ್ಲಾ"

"ಆಡುವುದಿಲ್ಲ. ಇನ್ನೂ ಎರಡು ಮೂರು ದಿನ ಬಾಯಿಮುಚ್ಚಿಕೊಂಡು ಬಿದ್ದಿರುತ್ತೇನೆ. ಆಯಿತೇ ?"

ಊಟವಾಯಿತು. ನಾಗರತ್ನಮ್ಮ ಸ್ಕೂಲಿಗೆ ಹೊರಟುಬಿಟ್ಟರು. ಗುಂಡಪ್ಪ ಮನೆಯಲ್ಲಿಯೇ ಉಳಿದರು. ಸುಮ್ಮನೆ ಕುಳಿತುಕೊಂಡು ಮಾಡುವುದೇನೆಂದು ಮಲಗಿಕೊಂಡರು. ಬೆಳಗಾಗ ಊಟಮಾಡಿಕೊಂಡು ಸ್ಕೂಲಿಗೆ ಓಡಿಹೋಗುವ ಅವರಿಗೆ ಮಲಗಿ ನಿದ್ದೆಮಾಡಿ ರೂಢಿಯಿರಲಿಲ್ಲ. ಒಂದು ಗಂಟೆಯ ಒಳಗಾಗಿ ಎಚ್ಚರವಾಗಿಹೋಯಿತು. ಆ ಮೇಲೆ ಪ್ರಯತ್ನ ಪಟ್ಟರೂ ನಿದ್ದೆ ಬರಲಿಲ್ಲ. ಕುಳಿತುಕೊಂಡಿರಲು ಬೇಜಾರು. ಎದ್ದು ಯಾವುದೋ ಪುಸ್ತಕ ನೋಡತೊಡಗಿದರು. ಅದೂ ಅವರಿಂದಾಗಲಿಲ್ಲ.

ಎಷ್ಟುಹೊತ್ತಿಗೆ ಒಬ್ಬ ವರ ಸಿಕ್ಕಿಯಾನು, ಯಾವಾಗ ಪ್ರಮಿಳೆಗೆ ಮದುವೆ ಮಾಡಿಬಿಟ್ಟೇನು ಎಂಬುದೊಂದೇ ಯೋಚನೆ. ಅದೇ ಸುತ್ತಿಸುತ್ತಿ ಬರುತ್ತಿತ್ತು.

ಮೂರು ಗಂಟೆಯಾಯಿತು. ಗೌರಮ್ಮನವರು ಬಂದು "ಕಾಫೀ ಕುಡಿಯುತ್ತೀರೇನಪ್ಪಾ" ಎಂದರು.

ಗೌರಮ್ಮ ನಾಗರತ್ನಮ್ಮನ ದೂರದ ಬಂಧು ಬಲು ವರ್ಷಗಳಿಂದಲೂ ಆಕೆಗೆ ಸಹಾಯಕವಾಗಿ ಅದೇ ಮನೆಯಲ್ಲಿದ್ದರು.

"ಕೊಡಿಮ್ಮ. ಊಟ ಕಾಫಿಗಳಿಗಾಗಿಯೇ ಬಂದು ಕುಳಿತಿದ್ದೇನಲ್ಲಾ"

ಗೌರಮ್ಮ ಆಗಿನ್ನೂ ಕಾಫಿಯನ್ನು ಮಾಡಿರಲಿಲ್ಲ. ಬೆಳಗಾಗ ಹತ್ತು ಗಂಟೆಯ ವೇಳೆಗೆ ಅಡಿಗೆಯಾದರೆ ಕಾಫೀ ತಿಂಡಿಯೆಲ್ಲಾ ಸಾಯಂಕಾಲವೇ.

ಗುಂಡಪ್ಪ ಕಾಫೀ ಕುಡಿಯುತ್ತೇನೆ ಎಂದರಲ್ಲಾ ಎಂದು ಒಂದು ಬಟ್ಟಲು ಮಾಡಿ ತಂದಿಟ್ಟರು. ಕಾಫಿಯನ್ನು ಕುಡಿದು ಗುಂಡಪ್ಪನವರು ಯಥಾ ಪ್ರಕಾರ ಕುಳಿತುಕೊಂಡಿದ್ದರು. ಅವರ ಮನಸ್ಸಿನಲ್ಲಿ ಒಂದೇ ಆಲೋಚನೆ.

ಸಾಯಂಕಾಲ ಐದು ಗಂಟೆಯ ಸಮಯವಾಯಿತು. ಏರೋಪ್ಲೇನ್ ಫ್ಯಾಕ್ಟರಿಗೆ ಹೋಗಿದ್ದ ಗೋವಿಂದರಾಯ ಮನೆಗೆ ಬಂದ.

ಬಂದವನೇ "ಯಾವಾಗ ಬಂದಿರಿ ಗುಂಡಪ್ಪನವರೇ, ಏನು ಸಮಾಚಾರ" ಎಂದು ಯೋಗಕ್ಷೇಮ ಮಾಡಿದ.

"ಬೆಳಗಾಗ ಬಸ್ಸಿನಲ್ಲಿ ಬಂದೆನಪ್ಪಾ. ನಾನು ಬರುವ ವೇಳೆಗೆ ನೀನು ಕೆಲಸಕ್ಕೆ ಹೊರಟುಬಿಟ್ಟಿದ್ದೆ ಎಂದು ಕಾಣುತ್ತದೆ"

"ಹೌದು. ಬೆಳಗಾಗ ಹೊರಟರೆ ಇಷ್ಟುಹೊತ್ತಿಗೇ ಬರುವುದು"

"ಮಧ್ಯಾಹ್ನ ಊಟಕ್ಕೆ ಮಾತ್ರ ಕಷ್ಟ"

"ಕಷ್ಟವೇನು ಬಂದಿತು. ಊಟ ಕಳಿಸಿಕೊಡುತ್ತಾರಲ್ಲ"

ಮನೆಯಿಂದ ಗೋವಿಂದರಾಯನಿಗೆ ಊಟ ಕಳಿಸುವುದು ಗುಂಡಪ್ಪನವರಿಗೆ ಗೊತ್ತಿತ್ತು.

"ಆದರೂ ಅದೆಂತಹ ಊಟ ಬಿಡಪ್ಪಾ. ಮನೆಯಲ್ಲಿ ಪಟ್ಟಾಂಗವಾಗಿ ಎಲೆ ಮುಂದೆ ಕುಳಿತುಕೊಂಡು ಊಟ ಮಾಡಿದಂತಾಗುತ್ತದೆಯೆ ?"

ಅವನು ನಗುತ್ತಾ "ಆಗುವುದಿಲ್ಲ ಎನ್ನಿ. ಆದರೂ ಹೊಟ್ಟೆ ತುಂಬಿಕೊಳ್ಳುವುದಕ್ಕೆ ಏನಾದರೂ ತಿನ್ನಲೇಬೇಕಲ್ಲ" ಎಂದ.

"ಹುಂ. ಕೈ ಕಾಲು ತೊಳೆದುಕೊಂಡು ಕಾಫೀ ತಿಂಡೀ ತೆಗೆದುಕೋಪ್ಪ. ನನ್ನ ಮಾತೇನು ಇದ್ದೇ ಇದೆ. ಇನ್ನೂ ಎರಡು ಮೂರು ದಿನ ಇರುತ್ತೇನೆ. ನಿಧಾನವಾಗಿ ಮಾತನಾಡಬಹುದು"

"ಅದೇನು ದೊಡ್ಡ ಮೊಕ್ಕಾಂ ಇಟ್ಟು ಬಿಟ್ಟಿದ್ದಿರಿ, ಯಾವೊತ್ತೂ ಇಲ್ಲ ದಿದ್ದದ್ದು"

"ಹೇಳುತ್ತೇನೆ. ನೀನು ಮೊದಲು ಹೊಟ್ಟೆಗೇನಾದರೂ ಹಾಕಿಕೊಂಡು ಬಾ"

ಗೋವಿಂದರಾಯ ಬಟ್ಟೆಬಿಚ್ಚಿ ಕೈ ಕಾಲು ತೊಳೆದುಕೊಂಡು ಬರಲು ಹೋದ.

ಅವನ ಪರಿಚಯ ಗುಂಡಪ್ಪನವರಿಗೆ ಚೆನ್ನಾಗಿತ್ತು. ಗೋವಿಂದರಾಯ ನಾಗರತ್ನಮ್ಮನ ಗಂಡನ ಕಡೆಯ ಸಂಬಂಧ. ಅವನು ಏನು ಓದಿ ಪ್ಯಾಸು ಮಾಡಿದ್ದನೋ ಗುಂಡಪ್ಪನವರಿಗೆ ನಿಶ್ಚಿತವಾಗಿ ಗೊತ್ತಿರಲಿಲ್ಲ. ಆದರೆ ಅವನು ಏನೋ ಸ್ವಲ್ಪ ಓದಿದ್ದಾನೆಂದು ಅವರಿಗೆ ಗೊತ್ತಿತ್ತು. ಸುಮಾರು ನಾಲ್ಕೈದು ವರ್ಷಗಳ ಹಿಂದೆ ಬೆಂಗಳೂರಿಗೆ ಬಂದು ಏರೋಪ್ಲೇನ್ ಫ್ಯಾಕ್ಟರಿಗೆ ಕೆಲಸಕ್ಕೆ ಸೇರಿದ್ದ. ಆಗ ತಿಂಗಳಿಗೆ ಅರವತ್ತೋ ಎಂಬತ್ತೋ ಬರುತ್ತಿತ್ತು. ಇಲ್ಲಿ ಯಾರೂ ಇರಲಿಲ್ಲ. ಎಲ್ಲಿಯೋ ಹೋಟೆಲಿನಲ್ಲಿ ಊಟ ಮಾಡಿಕೊಂಡಿದ್ದ. ತನಗೆಲ್ಲೋ ಅವನು ಸಿಕ್ಕಿದನೆಂದೂ ಮನೆಗೆ ಒಂದು ಗಂಡು ದಿಕ್ಕಿರಲಿ ಎಂದು ಮನೆಯಲ್ಲಿ ತಂದಿಟ್ಟುಕೊಂಡಿರುವುದಾಗಿಯೂ ನಾಗರತ್ನಮ್ಮ ಅಣ್ಣನೊಂದಿಗೆ ಹೇಳಿದ್ದರು. ಬುದ್ಧಿವಂತ. ಅವಕಾಶವನ್ನು ಹಿಡಿದು ಮುಂದೆ ಬಂದಿದ್ದಾನೆ. ಫ್ಯಾಕ್ಟರಿಯವರೇ ಅವನನ್ನು ಆರು ತಿಂಗಳ ಹಿಂದೆ ಅಮೇರಿಕಾಕ್ಕೆ ಕಳಿಸಿದ್ದರು. ಅಲ್ಲಿಂದಿಷ್ಟು ದಿನ ಇದ್ದು ಬಂದ. ಗುಂಡಪ್ಪನವರಿಗೆ ಗೊತ್ತಿರುವಂತೆಯೇ ಅವನಿಗೆ ಮುನ್ನೂರೈವತ್ತು ರೂಪಾಯಿ ಸಂಬಳ ಬರುತ್ತಿದೆ. ಇನ್ನೂ ಸಂಬಳ ಹೆಚ್ಚಾಗಬಹುದೆಂದು ತಂಗಿಯೇ ಅವರಿಗೆ ಹೇಳಿದ್ದಳು.

ಆಗ ಗುಂಡಪ್ಪನವರ ಮನಸ್ಸಿಗೊಂದು ಯೋಚನೆ ಬಂದಿತು. ಅರೆರೇ ! ಎಂತಹ ಕೆಲಸವಾಯಿತು. ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಅಲೆದಾಡುತ್ತಿರುವಂತಾಯಿತಲ್ಲ, ನನ್ನ ಗತಿ. ಗೋವಿಂದರಾಯನೇ ಇದ್ದಾನೆ. ಅವನಿಗೇ ಪ್ರಮೀಳೆಯನ್ನು ಕೊಟ್ಟು ಮದುವೆ ಮಾಡಬಾರದೇಕೆ ? ಸ್ವಲ್ಪ ವಯಸ್ಸಾಗಿದೆಯಲ್ಲಾ ಎಂದೆನಿಸಿತು. ಆದರೆ ತಾನೇ ಏನು ? ಕೈ ತುಂಬಾ ಸಂಬಳ ಬರುತ್ತದೆ. ಲಕ್ಷಣವಾಗಿದ್ದಾನೆ. ಸಂಬಳ ಸರ್ಕಾರೀ ಅಲ್ಲವೆಂದು ಒಂದೇ ಒಂದು ಕುಂದುಕ. ಏನು ಮಾಡುವುದಕ್ಕಾಗುತ್ತದೆ ? ಅವಸರಕ್ಕೆ ಪರಿಪೂರ್ಣವಾಗಿರುವುದು ಎಲ್ಲಿಂದ ಸಿಕ್ಕಬೇಕು ? ಎಲ್ಲವರಲ್ಲಿಯೂ ಒಂದಲ್ಲ ಒಂದು ಬಗೆಯ ಲೋಪ ಇದ್ದೇ ಇರುತ್ತದೆ. ಹಾಗೇ ಅವರ ಯೋಚನೆ ಮತ್ತಷ್ಟು ಮುಂದೆ

ಹೋಯಿತು. ಹತ್ತಾರು ಸಾವಿರ ಜನ ಅಲ್ಲಿ ಕೆಲಸ ಮಾಡುತ್ತಿದ್ದಾರೆ. ಎಲ್ಲರಿಗೂ ಆದದ್ದೇ ಇವನಿಗೂ ಆಗುತ್ತದೆ – ಎಂದು ಸಮಾಧಾನ ಮಾಡಿಕೊಂಡರು.

ಅವರಾ ಯೋಚನೆಯಲ್ಲಿ ಮಗ್ನರಾಗಿರುವಾಗಲೇ ನಾಗರತ್ನಮ್ಮ ಬಂದರು. ಎಲ್ಲರೂ ಕಾಫೀ ತಿಂಡಿಗೆ ಕುಳಿತುಕೊಂಡರು.

ಗುಂಡಪ್ಪ ಬಿಗುಮಾನಕ್ಕೆ "ನನಗೊಂದು ಬಾರಿ ಆಯಿತು. ಪುನಃ ಯಾಕಮ್ಮ" ಎಂದರು.

"ಗುಂಡಾ. ನಿನಗೇನು ಬೀಗನಿಗೆ ಹೇಳಿದಂತೆ ಉಪಚಾರ ಹೇಳಬೇಕೆಂದು ತೋರುತ್ತದೆಯಲ್ಲ"

ನಾಗರತ್ನಮ್ಮನ ಮಾತಿಗೆ ಪುಷ್ಟಿಕೊಡುತ್ತಾ ಗೌರಮ್ಮ "ಮಧ್ಯಾಹ್ನ ಒಂದು ಕಪ್ಪು ಕಾಫೀ ಕುಡಿದರೆ ತೆಗೆದುಕೊಂಡ ಹಾಗಾಯಿತೇ? ಮಡಿಯಲ್ಲಿ ಮಾಡಿದ್ದೇನೆ. ಏಳಿ" ಎಂದರು.

ಗುಂಡಪ್ಪನವರು ಲೌಕಿಕರಾದರೂ ವೈದಿಕಬ್ರಾಹ್ಮಣ. ಬೆಳಗಾಗ ಹತ್ತು ಗಂಟೆಯಲ್ಲಿ ಊಟ ಮಾಡಿದ್ದು ಯಾವಾಗ ಕರಗಿಹೋಗಿತ್ತೋ. ಸಣ್ಣ ಫಲಹಾರವನ್ನೇ ಮಾಡಿದರು.

ರಾತ್ರಿ ಫಲಹಾರಕ್ಕೆ ತಮಗೂ ಆಗಲೆಂದು ಗೌರಮ್ಮ ಸಾಯಂಕಾಲದ ಕಾಫೀ ಟಿಫನ್‌ಗಳನ್ನು ಮಡಿಯಲ್ಲಿಯೇ ಮಾಡುತ್ತಿದ್ದರು. ಎಷ್ಟೇ ಮಡಿಯಲ್ಲಿ ಮಾಡಿದರೂ ಕಾಫೀ ಎಂಬ ಪದಾರ್ಥ ಮೈಲಿಗೆ ಎಂದು ಅವರ ಭಾವನೆ. ಆದರ ಮೈಲಿಗೆಯನ್ನು ಕಳೆಯಲು ಕಾಫೀ ಮಾಡಿದ ಕೂಡಲೇ ಅದನ್ನು ಮಡೀ ಚೊಂಬನಲ್ಲಿ ಹಾಕಿ ಒಲೆಯ ಮಗ್ಗುಲಲ್ಲಿ ಬೆಂಕಿಯ ಮೇಲೆ ಇಟ್ಟಿರುತ್ತಿದ್ದರು.

ಎಲ್ಲರೂ ಉಪ್ಪಿಟ್ಟು ತಿಂದ ಮೇಲೆ ಮಡೀ ಚೊಂಬಿನಿಂದ ಎಲ್ಲರ ಲೋಟಾಗಳಿಗೂ ಎರಡೆರಡು ಬಾರಿ ಬೊಗ್ಗಿಸಿದರು.

ದಿನವೂ ಸಾಯಂಕಾಲ ಕಾಫೀತಿಂಡಿಗಳಾದ ಮೇಲೆ ಗೋವಿಂದರಾಯನೂ ನಾಗರತ್ನಮ್ಮನವರೂ ವಾಕಿಂಗ್ ಹೋಗಿ ಬರುತ್ತಿದ್ದರು.

ಮಾಮೂಲಿನಂತೆ ಸೂಟು ಹಾಕಿಕೊಂಡು ಹೊರಡಲು ಸಿದ್ಧವಾಗಿ ಗೋವಿಂದರಾಯ "ಏನತ್ತೇ. ನೀವು ಬರುವುದಿಲ್ಲವೇ?" ಎಂದ.

ಅಣ್ಣ ತಂಗಿಯರು ಹಜಾರದಲ್ಲಿ ಚಾಪೆಯ ಮೇಲೆ ಕುಳಿತು ಮಾತ ನಾಡುತ್ತಿದ್ದರು.

"ಬಾ. ಗುಂಡಣ್ಣ. ಹೀಗೇ ಹೋಗಿ ಬರೋಣ"

ಗುಂಡಪ್ಪ ಆಸಕ್ತಿಯಿಂದ "ಎಲ್ಲಿಗೆ ?" ಎಂದು ಕೇಳಿದರು.

"ವಾಕಿಂಗ್ ಹೋಗಿ ಬರೋಣ"

"ಚೆನ್ನಾಯಿತು. ಚೆನ್ನಾಯಿತು. ನೀವು ಹೋಗಿಬನ್ನಿ. ಗೊಡ್ಡು ಬ್ರಾಹ್ಮಣ. ನನಗೇಕೆ ವಾಕಿಂಕ್ ?"

ಅಣ್ಣ ಬರುವುದಿಲ್ಲವೆನ್ನುತ್ತಾನೆ. ಮನೆಗೆ ಬಂದಿರುವ ಅವನನ್ನು ಬಿಟ್ಟು ತಾವೇ ಹೋಗಿ ಬರುವುದು ಚೆನ್ನಾಗಿರುವುದಿಲ್ಲ.

ಅದರಿಂದ ನಾಗರತ್ನಮ್ಮ "ಗೋವಿಂದ. ನಾನು ನಮ್ಮಣ್ಣನೊಡನೆ ಮಾತನಾಡುತ್ತಾ ಕುಳಿತಿರುತ್ತೇನೆ. ಈ ದಿನ ನೀನೇ ಹೋಗಿ ಬಂದು ಬಿಡು. ಬರುತ್ತಾ ಒಂದರ್ಧ ಪೌಂಡು ಕಾಫೀಪುಡೀ ಹಿಡಿದುಕೊಂಡು ಬಾ. ಮರೆಯ ಬೇಡ" ಎಂದರು.

ಗೋವಿಂದರಾಯ ಒಬ್ಬನೇ ಹೊರಟು ಹೋದ.

ಅವನು ಹೋಗುವುದನ್ನೇ ಕಾದಿದ್ದ ಗುಂಡಪ್ಪ "ನಾಗೂ. ನನ್ನ ಕೆಲಸ ಏನು ಮಾಡಿದೆ ?" ಎಂದರು.

ನಾಗರತ್ನಮ್ಮ ಪಕಪಕನೆ ನಗುವುದಕ್ಕೆ ಮೊದಲು ಮಾಡಿದರು.

"ಯಾಕೆ ನಗುತ್ತೀಯೆ ? ನೀನೇನು ಮಾಡೀಯೇ ? ನನ್ನನ್ನು ನೋಡಿ ದರೆ ನಿನಗೆಲ್ಲಾ ನಗುವಂತಾಗಿದೆ"

"ಹಾಗಲ್ಲ, ಗುಂಡಾ. ಬೆಳಗಾಗ ಬಂದಿದ್ದೀಯೆ. ನಿನ್ನೊಂದಿಗೆ ಮಾತ ನಾಡಿಕೊಂಡವಳು ನಾನು ಸ್ಕೂಲಿಗೆ ಹೋಗಿ ಬಂದಿದ್ದೇನೆ. ಇನ್ನೂ ನಾನು ಮನೆಗೆ ಬಂದು ಕುಳಿತುಕೊಳ್ಳುವುದಕ್ಕಿಲ್ಲ. ಆಗಲೇ ನನ್ನ ಕೆಲಸ ಏನು ಮಾಡಿದೆ – ಎಂದು ಕೇಳಿದರೆ ಏನು ಹೇಳಲಿ ಹೇಳು"

"ನೀನು ಸ್ಕೂಲಿಗೆ ಹೋದಾಗ ಹಾಗೇ ಕುಳಿತುಕೊಂಡು ಆಲೋಚನೆ ಮಾಡುತ್ತಿದ್ದೆ. ನನಗೊಂದು ಯೋಚನೆ ಬಂದಿತು. ನೋಡು. ನಾನು ಹೇಳುವ ಹಾಗೆ ಮಾಡಿದರೆ ನಿನಗೂ ಕಷ್ಟವಿಲ್ಲ. ನನ್ನ ಕೆಲಸವೂ ಸುಸೂತ್ರ ವಾಗಿ ನಡೆಯುತ್ತದೆ"

"ಏನು ಹೇಳು ಕೇಳೋಣ"

"ನಮ್ಮ ಪ್ರಮಿಳೆಯನ್ನು ನೀನು ಈ ಗೋವಿಂದನಿಗೇ ಯಾಕೆ ತಂದು ಕೋ ಬಾರದು ಅಂತ"

ಗುಂಡಪ್ಪನವರು ಆ ಮಾತು ಹೇಳಬಹುದೆಂದು ನಾಗರತ್ನಮ್ಮ ನಿರೀಕ್ಷಿಸಿರಲಿಲ್ಲ.

"ಅವನು ಮದುವೆಯೇ ಮಾಡಿಕೊಳ್ಳುವುದಿಲ್ಲವೆಂದಿದ್ದಾನೆ"

"ಮದುವೆ ಮಾಡಿಕೊಳ್ಳದೇ ಏನು ಮಾಡುತ್ತಾನಂತೆ ? ನೀನು ಹೇಳಿ ಅದನ್ನೇ ಗೊತ್ತು ಮಾಡು, ಮತ್ತೆ ?"

"ನಿನಗೆ ಒಪ್ಪಿಗೆಯಾಗಿದ್ದರೆ ಪ್ರಯತ್ನ ಮಾಡುತ್ತೇನೆ. ಆದರೆ ಕೆಲಸವಾಗುವುದೆಂದು ನನಗೆ ನಂಬಿಕೆಯಿಲ್ಲ. ಆದರೂ ಅವನು ಒಪ್ಪಿಕೊಳ್ಳುತ್ತಾನೆ ಎಂದೇ ಇಟ್ಟುಕೋ. ಇವನಿಗೆ ಮೂವತ್ತೈದು ವರ್ಷ ವಯಸ್ಸು. ಪ್ರಮಿಳೆಗೂ ಇವನಿಗೂ ವಯೋತಾರತಮ್ಯ ಬಹಳವಾಗುತ್ತದಲ್ಲಾ"

"ಅಯ್ಯೋ ! ವಯೋತಾರತಮ್ಯವೇನು ? ನಿನಗೂ ನಿನ್ನ ಗಂಡನಿಗೂ ಇಪ್ಪತ್ತು ವರ್ಷ ವ್ಯತ್ಯಾಸವಿತ್ತು. ನೀವು ಸುಖವಾಗಿ ಸಂಸಾರ ಮಾಡಿಕೊಂಡಿರಲಿಲ್ಲವೇ ?"

ಹೇಳಿದ ಮೇಲೆ ಗುಂಡಪ್ಪನವರಿಗೆ ಆ ಉದಾಹರಣೆ ಕೊಟ್ಟದ್ದು ಸರಿ ಹೋಗಲಿಲ್ಲವೆನ್ನಿಸಿತು. ಆದರೆ ಮಾತಿನ ಭರದಲ್ಲಿ ಅವರು ಮಾತನ್ನು ಆಡಿಬಿಟ್ಟಿದ್ದರು.

"ಅದಕ್ಕೇ ನಾನು ಹೀಗೆ ಕುಳಿತುಕೊಂಡಿದ್ದು"

"ಚೆನ್ನಾಯಿತು. ಬ್ರಹ್ಮ ಬರೆದ ಆಯುಸ್ಸಿಗೆ ನರಮಾನವರಾದ ನಾವು ಹೊಣೆಯೆ ? ಭಾವ ಬದುಕಿದ್ದಾಗ ನಿನ್ನ ಸಂಸಾರ ನಾಲ್ಕು ಜನ ನೋಡಿ ಭೇಷ್ ಎನ್ನುವಂತೆಯೇ ಇತ್ತು. ಹೋಗಲಿ. ಈಗ ನನಗೂ ನನ್ನ ಹೆಂಡತಿಗೂ ಹದಿನಾಲ್ಕು ವರ್ಷ ವ್ಯತ್ಯಾಸ. ನನಗೇನಾಗಿದೆ. ಬಡವರು. ಆದರೂ ನಾವು ದೇವರು ಕೊಟ್ಟದ್ದು ತಿಂದುಕೊಂಡು ಹಾಯಾಗಿಲ್ಲವೇ ?"

"ಸರಿ. ಜಾತಕವಿದೆಯೋ ಕೇಳಿ ತಿಳಿದುಕೊಳ್ಳುತ್ತೇನೆ. ಅದು ಸರಿ ಹೋದರೆ ಆ ಮೇಲೆ ಮಾತನಾಡಿ ನೋಡೋಣ. ವಯಸ್ಸು ಹೆಚ್ಚೆಂಬುದೊಂದನ್ನು ಬಿಟ್ಟರೆ ಗೋವಿಂದ ಉತ್ತಮನಾದ ವರ ಎಂಬುದಕ್ಕೆ ಸಂದೇಹವೇ ಇಲ್ಲ"

ಜಾತಕಾನುಕೂಲ ಸರಿಹೋಗದೇ ಇದ್ದರೆ ಸಂಬಂಧ ತಪ್ಪಿಹೋಗುತ್ತದಲ್ಲಾ – ಎಂದೆನಿಸಿತು ಗುಂಡಪ್ಪನವರಿಗೆ.

"ಜಾತಕ ಗೀತಕ ನೋಡುವುದು ಬೇಡ, ನಾಗು. ಗೋವಿಂದ ಹುಡುಗಿಯನ್ನ ಒಪ್ಪಿದರೆ ಸಾಕು. ಹುಡುಗಿಯನ್ನು ಒಪ್ಪಿಕೊಳ್ಳುತ್ತಾನೆ ಎನ್ನುವುದರಲ್ಲಿ ಸಂದೇಹವೇ ಇಲ್ಲ.

ನಾಗರತ್ನಮ್ಮ ನಗುತ್ತಾ "ಇದೇನು ಗುಂಡಾ. ಹೀಗೆ ಬದಲಾಯಿಸಿಬಿಟ್ಟೆ. ಸಂಪ್ರದಾಯಸ್ಥನಾದ ನೀನು ಜಾತಕ ನೋಡುವುದೇ ಬೇಡವೆನ್ನುತ್ತೀಯೆ ?" ಎಂದರು.

"ನಾನೂ ಹೇಳುವುದೂ ಸಂಪ್ರದಾಯವೇ. ಅನ್ಯಥಾ ಏನೂ ಇಲ್ಲ. ಜಾತಕಗೀತಕಕ್ಕಿಂತಲೂ ಮನೋನಿಶ್ಚಯವೇ ದೊಡ್ಡದು. ಮನೋನಿಶ್ಚಯವಾದ ಮೇಲೆ ಜಾತಕ ನೋಡಬೇಕಾಗಿಲ್ಲ"

''ಸರಿ. ಬಿಡು. ಗೋವಿಂದನೊಡನೆ ಮಾತನಾಡುತ್ತೇನೆ"

''ಮಾತನಾಡುವುದಲ್ಲ. ಏನಾದರೂ ಮಾಡಿ ಅವನನ್ನು ಒಪ್ಪಿಸಬೇಕು"

''ನೋಡೋಣ. ಹುಡುಗಿಯನ್ನು ಮದುವೆ ಮಾಡಿಕೊಳ್ಳುವವನು ಅವನು. ನಾನಲ್ಲವಲ್ಲ"

ನಾಗರತ್ನಮ್ಮ ಆ ಮಾತು ಹೇಳಿದ ಗಳಿಗೆಯನಂತರ ''ಗುಂಡಾ. ಇದಿಷ್ಟು ದಿನಗಳಿಂದ ಗೋವಿಂದನನ್ನು ನೋಡುತ್ತಿದ್ದರೂ ಪ್ರಮೀಳೆಯನ್ನು ಅವನಿಗೆ ಕೊಡಬೇಕೆಂಬುದು ತೋರದೇ ಈಗ ನಿನಗೆ ತೋರಿದ್ದು ಆಶ್ಚರ್ಯ" ಎಂದರು.

''ನನಗೂ ಅದೇ ಯಾಕೆ ತೋರಲಿಲ್ಲ ಎನ್ನಿಸಿತು. ಅದೆಲ್ಲಾ ದೈವ ಪ್ರೇರಣೆ, ನಾಗು. ಆಗ ಆ ಪರಮಾತ್ಮನಿಗೆ ಬೇಡವಾಗಿತ್ತು. ಈಗ ಬೇಕೆನಿಸಿದೆ. ಆತನ ಲೀಲಾವಿಲಾಸಕ್ಕೆ ನಾವೇನು ಹೇಳಲಾಗುತ್ತದೆ"

''ಒಳ್ಳೇ ಪರಮಾತ್ಮ, ಒಳ್ಳೇ ಲೀಲಾವಿಲಾಸ ! ನಿನ್ನ ಸಮಯಕ್ಕೆ ಈ ದೇವರು ಸಿಕ್ಕಿ ಹಾಕಿಕೊಂಡು ಪರದಾಡುವ ಗತಿ ಬಂದಿದೆ"

"ಹಾಗೆನ್ನ ಬೇಡ. ಈ ಗೋವಿಂದನಿಗೆ ಯಾಕೆ ಪ್ರಮೀಳೆಯನ್ನು ಕೊಡಬಾರದು ಎಂದುಕೊಂಡವನು ಹಾಗೇ ಯೋಚಿಸಿದೆ. ಮೊದಲೇ ಅವ

ನನ್ನು ಕೇಳಿದ್ದೆವು ಎಂದುಕೋ. ಇವನು ಒಪ್ಪಿಕೊಂಡು ಬಂದಿದ್ದ ಎಂದುಕೋ. ಆ ಹುಡುಗಿ ಬುದ್ಧಿ ಕೆಟ್ಟಿದ್ದಾಗ ಮದುವೆ ಬೇಡ ಎಂದಿದ್ದರೆ ಈ ಮದುವೆಯಾಗುತ್ತಿತ್ತೇ ? ನನಗೂ ನಿನಗೂ ಈಗಿರುವಷ್ಟು ವಿಶ್ವಾಸ ಇರುತ್ತಿತ್ತೇ ? ಬ್ರಹ್ಮ ಇವನೇ ಗಂಡನೆಂದು ಅವಳ ಹಣೆಯಲ್ಲಿ ಬರೆದಿರಬೇಕು. ಅದಕ್ಕಾಗಿ ಮದುವೆ ಆಗದಂತಹ ಸಮಯದಲ್ಲಿ ಈ ಬುದ್ಧಿ ನನಗೆ ಕೊಡದೇ ಮದುವೆ ಆಗುವಂತಹ ಸಮಯದಲ್ಲಿ ಕೊಟ್ಟಿದ್ದಾನೆ. ನನಗೆ ತೋರಿಬಿಟ್ಟಿದೆ. ಬ್ರಹ್ಮಲಿಖಿತವೇ ಇದು. ನೀನು ಪ್ರಯತ್ನ ಪಡು"

ನಾಗರತ್ನಮ್ಮ ನಗುತ್ತಾ "ನೋಡೋಣ. ನೀನು ಹೇಳುವ ಬ್ರಹ್ಮಲಿಖಿತ ಹೇಗಿದೆಯೋ ?" ಎಂದರು.

"ಹಾಗಾದರೆ ಯಾವಾಗ ಕೇಳುತ್ತೀ ?"

"ಎಲ್ಲಾ ನಿನ್ನ ಹತ್ತಿರ ಏಳು ತಿಂಗಳಿಗೆ ಹುಟ್ಟಿದವನ ಮಾತೇ. ಈಗ ಹೇಳುತ್ತಿದ್ದೀ. ಆಗಲೇ ಲಗ್ನ ಯಾವಾಗ ಎಂದರೆ ಏನು ಹೇಳಬೇಕು ಹೇಳು. ಸ್ವಲ್ಪ ತಡೆದುಕೋ. ಇನ್ನೂ ಅವನೊಂದಿಗೆ ಮಾತನಾಡಬೇಕು, ಮಾಡಬೇಕು"

ನಾಗರತ್ನಮ್ಮ ಅಣ್ಣನೊಂದಿಗೆ ಹೇಳಿದಂತೆ ಸೂಕ್ಷ್ಮವಾಗಿ ಮದುವೆಯ ವಿಷಯವನ್ನು ಗೋವಿಂದರಾಯನೊಡನೆ ಹೇಳಿದರು. ಅನಂತರ ಸ್ವಲ್ಪ ಬಲಾತ್ಕಾರವನ್ನೂ ಮಾಡಿದರು.

ವಾಸ್ತವವಾಗಿ ಗೋವಿಂದರಾಯ ಮದುವೆ ಬೇಡವೆಂದೇ ಇದ್ದ. ಇಂದಲ್ಲ. ಬಹಳ ಹಿಂದೆಯೇ ಮದುವೆ ಬೇಡವೆಂದು ತೀರ್ಮಾನ ಮಾಡಿಕೊಂಡಿದ್ದ. ಅವನ ತಾಯಿ ತಂದೆಗಳು ಅನುಕೂಲಸ್ಥರಲ್ಲ. ಕಷ್ಟದಿಂದ ಕಾರ್ಪಣ್ಯದ ಜೀವನವನ್ನು ನಡೆಯಿಸುತ್ತಿದ್ದರು. ಓದುವುದಕ್ಕೆ ಅನುಕೂಲವಿಲ್ಲದೇ ದಿನವೂ ಹೊಟ್ಟೆ ತುಂಬಾ ತಿನ್ನುವುದಕ್ಕೆ ಸಹ ಇಲ್ಲದೇ ಎಷ್ಟೋ ಪಡಪಾಟಲು ಪಟ್ಟಿದ್ದ. ದೇವನಹಳ್ಳಿಯಲ್ಲಿ ಇದ್ದ ಒಂದು ಸಣ್ಣ ಮನೆಯನ್ನೂ ಮಾರಿ ಅವನ ತಂಗಿಗೆ ಮದುವೆ ಮಾಡಲಾಗಿತ್ತು. ಆ ಮೇಲೆ ಊರಿನಲ್ಲಿ ಜೀವನ ನಡೆಯುವುದೇ ಕಷ್ಟವಾಗಿ ಬೆಂಗಳೂರಿನಲ್ಲಿ ಫ್ಯಾಕ್ಟರಿ ಕೆಲಸಕ್ಕೆ ಬಂದು ತನ್ನ ಹೊಟ್ಟೆಯನ್ನು ಹೊರೆದುಕೊಂಡು, ಊರಿಗೂ ಸ್ವಲ್ಪ ಹಣವನ್ನು ಕಳಿ

ಸುತ್ತಿದ್ದ. ಹೀಗೆ ಗೋವಿಂದರಾಯನಿಗೆ ಮನೆ, ಸಂಸಾರಗಳೆಂದರೆ ತಲೆ ಚಿಟ್ಟು ಹಿಡಿದು ಹೋಗಿತ್ತು. ಅವನ ತಾಯಿ ಸಹ ''ವಂಶಾಭಿವೃದ್ಧಿಗಾದರೂ ಆಗಲಿ. ಮದುವೆ ಮಾಡಿಕೋ" ಎಂದು ಎಷ್ಟೋ ಹೇಳಿದ್ದರು. ಸಂಸಾರದಿಂದ ತನಗಾಗಿದ್ದ ತೊಂದರೆಯನ್ನು ನೆನೆದುಕೊಂಡಾಗಲೆಲ್ಲಾ ಭಯವಾಗುತ್ತಲೇ ಇತ್ತು. ಅವನು ಮದುವೆ ಮಾಡಿಕೊಂಡಿರಲಿಲ್ಲ.

ಆದರೆ ಅವನಿಗೆ ಮದುವೆಯ ವಿಷಯ ಆಗಾಗ ಮನಸ್ಸಿಗೆ ಬರದೇ ಇರುತ್ತಿರಲಿಲ್ಲ. ಊರಿಗೆ ಹೋದಾಗ ತಾಯಿ ಮದುವೆಯ ವಿಷಯ ಮಾತನಾಡುತ್ತಿದ್ದರು. ಯಾವಾಗಲಾದರೊಮ್ಮೆ ಬೆಂಗಳೂರಿಗೆ ಕಾಗದ ಬರೆಸುತ್ತಿದ್ದರು. ಆಗಲ್ಲಾ ಅವನಿಗೆ ಮದುವೆಯ ವಿಷಯ ಜ್ಞಾಪಕ ಬರುವುದು.

ಮದುವೆ ಬೇಡವೆಂದು ಮನಸ್ಸಿನಲ್ಲಿಯೇ ನಿರ್ಧರ ಮಾಡಿಕೊಳ್ಳುತ್ತಿದ್ದರೂ ಎಲ್ಲ ಗಂಡಸರಿಗೂ ಇರುವಂತೆ ತನ್ನವಳೇ ಎಂದುಕೊಳ್ಳಬಹುದಾದ ಹೆಣ್ಣಿನ ಜೊತೆ ಬೇಕು – ಎಂದು ಮನಸ್ಸಿನ ಮೂಲೆಯಲ್ಲಿಯೇ ಒಂದು ಆಶೆ ಬೂದಿಮುಚ್ಚಿದ ಕೆಂಡದಂತೆ ಕುಳಿತೇ ಇತ್ತು. ಅವನ ತಾಯಿ ಆಗಾಗ ಗಾಳಿ ಹಾಕುತ್ತಿದ್ದರೆಂಬುದು ನಿಜ.ಆದರೆ ಅವರು ಬೀಸುತ್ತಿದ್ದ ಗಾಳಿ ಮೇಲಿನ ಬೂದಿಯನ್ನು ನಿವಾರಿಸಿ ಕೆಂಡವನ್ನು ಕಳಕಳಿಸುವ ಹಾಗೆ ಮಾಡುವಷ್ಟು ಬಲವಾಗಿರಲಿಲ್ಲ.

ಮಾರನೆಯ ದಿನ ಗುಂಡಪ್ಪನವನ್ನು ಮನೆಯಲ್ಲಿಯೇ ಬಿಟ್ಟು ಗೋವಿಂದರಾಯನೊಡನೆ ವಾಕಿಂಗ್ ಹೋಗಿದ್ದಾಗ ನಾಗರತ್ನಮ್ಮ ಹೇಳಿದರು.

"ಗೋವಿಂದ. ನಮ್ಮ ಅಣ್ಣ ಯಾಕೆ ಬಂದಿದ್ದಾನೆ ಗೊತ್ತೇ ?"

ಗುಂಡಪ್ಪ ತಂಗಿಯನ್ನು ಹುಡುಕಿಕೊಂಡು ಯಾಕೆ ಬರುತ್ತಾರೆಂಬುದು ಬಲು ದಿನಗಳು ಆ ಮನೆಯಲ್ಲಿಯೇ ಇದ್ದ ಗೋವಿಂದರಾಯನಿಗೆ ಗೊತ್ತಿರದೇ ಇರಲಿಲ್ಲ.

"ನೀವೂ ಹೇಳಲಿಲ್ಲ. ಅವರೂ ಹೇಳಲಿಲ್ಲ. ನನಗೆ ಹೇಗೆ ಗೊತ್ತಾಗಬೇಕು ?"

"ಅವರ ಎರಡನೇ ಮಗಳಿಗೆ ಗಂಡು ನೋಡುವುದಕ್ಕೆ ಬಂದಿದ್ದಾರೆ"

"ಮೂರು ನಾಲ್ಕು ತಿಂಗಳ ಮೊದಲೇ ಯಾವುದೋ ಗಂಡು ಗೊತ್ತಾಗಿದೆ ಎಂದು ಹೇಳಿದ್ದಿರಲ್ಲ"

"ಏನೋ ಒಂದು ರೀತಿಯಾಗಿ ಆಗಿತ್ತು. ಹುಡುಗಿ ಜಂತದ ಗೊಂಬೆ ಇದ್ದ ಹಾಗೆ ಇದ್ದಾಳೆ. ಆ ವರ ನನ್ನ ಮನಸಿಗೇ ಒಪ್ಪಲಿಲ್ಲ. ವರನಾನ್ನು ಚೆನ್ನಾಗಿಲ್ಲವೆಂದುಕೊಂಡು ನಾನೇ ಬೇಡವೆಂದೆ"

"ಈಗ ಯಾವುದಾದರೂ ಗೊತ್ತಾಗುತ್ತೋ ?"

"ಉಹೂಂ, ಹಾಗಲ್ಲಾ. ಈ ಬಾರಿ ಗುಂಡಣ್ಣ ಬರುತ್ತಲೂ ನನಗೊಂದು ಯೋಚನೆ ಬಂದಿತು. ಗಂಡು ಹುಡುಕುವುದೇನೂ ಬೇಕಾಗಿಲ್ಲ – ಎಂದು ಹೇಳಿದೆ"

"ಯಾಕೆ, ಹುಡುಗಿಗೆ ಮದುವೆಯೇ ಬೇಡ ಎಂದು ಹೇಳಿದಿರಾ ?"

ನಾಗರತ್ನಮ್ಮ ಏನೋ ಹೇಳಬೇಕೆಂದು ಹೊರಟರೆ ಮಾತು ಮತ್ತಾವ ಕಡೆಗೋ ತಿರುಗಿದಂತೆ ಆಕೆಗೆ ಭಾಸವಾಯಿತು.

"ಯಾಕೆ ಹೇಳಬಾರದು, ಗೋವಿಂದ. ಗಂಡಸರು ಮದುವೆಯಿಲ್ಲದೆಯೇ ಇರಬಹುದಂತೆ. ಹೆಂಗಸರು ಮದುವೆ ಮಾಡಿಕೊಳ್ಳದೇ ಇರಬಾರದೇ ?"

ಗೋವಿಂದರಾಯ ನಗುತ್ತಾ "ಯಾಕಿರಬಾರದು, ಅತ್ತೆ. ಧಾರಾಳವಾಗಿರಬಹುದು. ಆದರೆ ನಿಮ್ಮ ಅಣ್ಣಂದಿರು ಅದಕ್ಕೆ ಒಪ್ಪುತ್ತಾರೆಯೇ ಎಂದು" ಎಂದ.

ಅವನು ನಾಗರತ್ನಮ್ಮನನ್ನು ಅತ್ತೆ ಎಂದೇ ಕರೆಯುತ್ತಿದ್ದ.

"ಮಾತು ಎಲ್ಲಿಗೋ ಬಂದಿತು. ನಾನು ಆ ಹುಡುಗಿಗೆ ಮದುವೆ ಬೇಡವೆಂದು ಹೇಳಲಿಲ್ಲ. ಅವಳನ್ನು ನಮ್ಮ ಗೋವಿಂದನಿಗೆ ಕೊಟ್ಟು ಮದುವೆ ಮಾಡಿಬಿಡು ಎಂದು ಹೇಳಿದೆ"

"ಅಯ್ಯೋ! ಆ ಮಾತೇಕೆ ಹೇಳಿದಿರಿ, ಅತ್ತೆ. ನಾನು ಮದುವೆಮಾಡಿಕೊಳ್ಳುವುದಿಲ್ಲವೆಂಬುದು ನಿಮಗೆ ಗೊತ್ತಿಲ್ಲವೆ ?"

"ಮದುವೆಯನ್ನೇ ಮಾಡಿಕೊಳ್ಳದೆ ನಿಂತಿರುವುದಕ್ಕೇ ನೀನೇನು ಕೋಟೆ ಬಾಗಿಲಿನ ಹನುಮಂತರಾಯನೇ ?"

"ಹಾಗಲ್ಲ. ಮದುವೆ, ಮಕ್ಕಳು, ಸಂಸಾರ ಇವುಗಳಲ್ಲಿ ನನಗೆ ಜಿಗುಪ್ಸೆ ಬಂದುಬಿಟ್ಟಿದೆ"

ಗೋವಿಂದರಾಯನ ಮನಸ್ಸಿನಲ್ಲಿದ್ದ ಜಿಗುಪ್ಸೆಯ ಕಾರಣ ನಾಗರತ್ನಮ್ಮ ನವರಿಗೆ ಚೆನ್ನಾಗಿ ಗೊತ್ತಿತ್ತು.

"ನೀನು ಬಹಳ ಬುದ್ಧಿವಂತ ಅಂದುಕೊಂಡಿದ್ದೀಯೇ ವಿನಾ ನಿನಗೆ ಲೋಕಾನುಭವವಿಲ್ಲ, ಗೋವಿಂದ. ನೀನು ಆಗಿನ್ನೂ ಹುಡುಗ. ನಮ್ಮ ಯಜ ಮಾನರು ಬದುಕಿದ್ದಾಗ ನಿಮ್ಮ ಮನೆಗೆ ಬಂದು ಹೋಗುತ್ತಿದ್ದುದುಂಟು. ನಿಮ್ಮ ಮನೆ ಎಷ್ಟು ಚೆನ್ನಾಗಿತ್ತು. ಒಲ್ಲೆಯಾ ? ನಿಮ್ಮಪ್ಪನ ಸಂಪಾದನೆ ಕಟ್ಟಿದ ಗೂಟ ಹಾಕಿದ ಹುಲ್ಲು ಎಂಬಂತೇ ಒಂದೇ ವಿಧವಾಗಿದ್ದಿತು. ಆದರೆ ಕಾಲ ವೈಪರೀತ್ಯವಾಗಿ ಹೋಗಿ ಅವರು ಕಷ್ಟಕ್ಕೆ ಸಿಕ್ಕಿಕೊಂಡರು. ನಿಮಗೆಲ್ಲಾ ತೊಂದರೆಯಾಯಿತು. ಯಾವಾಗಲೋ ಒಮ್ಮೆ ಕಷ್ಟವಾಯಿತೆಂದು ಹೇಳಿ ಮದುವೆಯೇ ಬೇಡವೆನ್ನುವುದು ಕೇವಲ ಹುಚ್ಚುತನ"

"ನೀವು ಹೇಳುವುದು ನಿಜ. ಅತ್ತೆ. ಆದರೆ ನನಗೆ ಈ ಮದುವೆಯ ವಿಷ ಯದಲ್ಲಿ ಬೇಜಾರು ಬಂದುಬಿಟ್ಟಿದೆ"

"ಸುವ್ವೀ ಎಂದರೆ ರಾಗ ಎತ್ತುತ್ತೀಯಲ್ಲಾ ನನ್ನ ಮಾತು ಕೇಳು. ನನ್ನ ಸೋದರಸೊಸೆ ಎಂದು ಹೇಳುವುದಿಲ್ಲ. ಹುಡುಗಿ ಚೆನ್ನಾಗಿ ಬೆಳೆದಿ ದ್ದಾಳೆ. ರತಿಯಂತೆ ಇದ್ದಾಳೆ. ಎಸ್ಸೆಸ್ಸೆಲ್ಸಿ ಓದಿದ್ದಾಳೆ"

"ಹುಡುಗಿಯ ರೂಪ, ಓದುಗಳನ್ನು ಕುರಿತು ನಾನು ಹೇಳುವುದಿಲ್ಲ—"

"ನಿನ್ನ ವಿತಂಡವಾದವೆಲ್ಲವೂ ಬಿಡು. ಹುಡುಗಿಯನ್ನು ನೋಡು. ಮನಸ್ಸಿಗೆ ಒಪ್ಪಿಗೆಯಾಗದಿದ್ದರೆ ಬೇಡ. ನಾನು ಬಲಾತ್ಕಾರ ಮಾಡುವುದಿಲ್ಲ"

"ನಾನು ಮೊದಲೇ ಹೇಳಿದೆನಲ್ಲಾ. ರೂಪಗೀಪದ ವಿಷಯ ಮುಖ್ಯ ವಲ್ಲ. ನಾನೇನಾದರೂ ಮದುವೆಮಾಡಿಕೊಳ್ಳುವುದಾದರೆ ಹುಡುಗಿ ನೋಡು ವುದಕ್ಕೆ ಕುರೂಪಿಯಾಗಿಲ್ಲದೇ ಆರೋಗ್ಯವಂತಳಾಗಿದ್ದರೆ ಸಾಕು"

"ಹಾಗಾದರೆ ಪ್ರಮೀಳೆಯನ್ನು ಮದುವೆಮಾಡಿಕೋ. ಆರೋಗ್ಯವಾಗಿ ದ್ದಾಳೆ. ಲಕ್ಷಣವಾಗಿದ್ದಾಳೆ"

"ಅದಲ್ಲ, ಅತ್ತೆ. ಮದುವೆಯೇ ನನಗಿಷ್ಟವಿಲ್ಲವೆಂದು ನಾನುಹೇಳಿದ್ದು"

"ನಮ್ಮ ಹುಡುಗಿಯನ್ನು ಬೇಕಾದರೆ ಮಾಡಿಕೋ. ಇಲ್ಲದಿದ್ದರೆ ಬಿಟ್ಟುಬಿಡು. ಮದುವೆಯಂತೂ ಮಾಡಿಕೊಳ್ಳಲೇ ಬೇಕು. ಬಹಳ ದಿನಗಳ ಹಿಂದೆಯೇ ಈ ವಿಷಯ ನಿನಗೆ ಹೇಳಬೇಕೆಂದಿದ್ದೆ. ನಿಮ್ಮಮ್ಮ ನನ್ನ ಮೇಲೆ ಹೊಡೆದುಕೊಂಡು ಸಾಯುತ್ತಾರೆ. ಇರುವ ಒಬ್ಬ ಮಗನೂ ಬ್ರಹ್ಮಚಾರಿಯಾಗಿ ಕುಳಿತುಕೊಂಡನಲ್ಲ ಎಂದು ಗೋಳುಗರೆಯುತ್ತಾರೆ"

ಗೋವಿಂದರಾಯ ಅವರ ಮಾತಿಗೆ ಏನೂ ಹೇಳಲಿಲ್ಲ. ನಾಗರತ್ನಮ್ಮನವರೂ ಮುಂದೆ ಮಾತನಾಡಲಿಲ್ಲ.

ಅವರಿಬ್ಬರೂ ಆ ದಿನ ಲಾಲ್‌ಬಾಗ್ ಕಡೆಗೆ ಹೊರಟಿದ್ದರು. ಒಳಗಡೆಯೂ ಹೋದರು. ಗೋವಿಂದರಾಯ ಯಾವುಯಾವುದೋ ಬೇರೆಯ ಮಾತುಗಳನ್ನು ತೆಗೆದು ನೋಡಿದ. ನಾಗರತ್ನಮ್ಮ ಒಂದೊಂದೇ ಮಾತಿನಲ್ಲಿ ಜವಾಬು ಹೇಳಿದರು. ಅವರಿಗೆ ಅಸಮಾಧಾನವಾಗಿದೆ ಎಂದುಕೊಂಡ ಗೋವಿಂದ.

ಆಡುವುದಕ್ಕೆ ಮಾತೂ ಇಲ್ಲವೇ ಮೌನವಾಗಿ ಬರುತ್ತಿದ್ದುದರಿಂದ ವಾಕಿಂಗ್ ರುಚಿಸಲಿಲ್ಲ. ಲಾಲ್‌ಬಾಗ್ ಹೋಟೆಲನ್ನು ಒಂದು ರೌಂಡ್ ಹೊಡೆದುಕೊಂಡು ಹಿಂತಿರುಗಿದರು.

ಮನೆಯ ಕಡೆಗೆ ಬರುತ್ತಿರುವಾಗ ಗೋವಿಂದರಾಯ "ಯಾಕತ್ತೆ. ನನ್ನ ಮೇಲೆ ಅಸಮಾಧಾನವೇ" ಎಂದು ಕೇಳಿದ.

"ಅಸಮಾಧಾನವೇನೂ ಇಲ್ಲಪ್ಪ. ಯಾಕೆ ಅಸಮಾಧಾನ ಮಾಡಿಕೊಳ್ಳಲಿ"

'ಹಾಗಾದರೇ ನೀವು ಮಾತೇ ಆಡುವುದಿಲ್ಲ. ಏನೋ ಒಂದು ತರಹವಾಗಿ ಬರುತ್ತಿದ್ದೀರಿ ?"

"ಇನ್ನೇನು ಮಾಡಲಿ. ಮಾತನಾಡಿದರೆ ತಾನೇ ಯಾರು ನನ್ನ ಮಾತು ಕೇಳುತ್ತಾರೆ. ನಾನೂ ಹೆಂಗಸು. ಹೆಣ್ಣಿನ ಮನಸ್ಸಿನಲ್ಲಿರುವ ಆಸೆ ಆಕಾಂಕ್ಷೆಗಳೆಲ್ಲವೂ ನನ್ನ ಮನಸ್ಸಿನಲ್ಲಿಯೂ ಇವೆ. ಮಗ ಅಂತ ಒಬ್ಬನಿರಬೇಕು. ಅವನ ತಲೆಯ ಮೇಲೆ ಮಂಗಳಾಕ್ಷತೆ ಬಿದ್ದದ್ದು ನೋಡಬೇಕು. ಮನೆಗೆ ಸೊಸೆ ಬಂದು ಓಡಿಯಾಡುವುದನ್ನು ನೋಡಿ ಸಂತೋಷಪಡಬೇಕು–ಎಂದೆಲ್ಲಾ

ಇದೆ. ಆದರೆ ನಾವು ಕೇಳಿಕೊಂಡು ಬರದೇ ಇರುವುದಕ್ಕಿಲ್ಲಾ. ಆಸೆಪಟ್ಟರೆ ಹೇಗಾಗುತ್ತದೆ? ನಾನೇನೂ ಗೊಡ್ಡಿಯಲ್ಲ. ನನಗೂ ಒಬ್ಬ ಮಗನಿದ್ದ. ಬದುಕಿದ್ದಿದ್ದರೆ ಅವನಿಗೂ ನಿನ್ನ ವಯಸ್ಸೇ. ಅವನೇ ಇದ್ದಿದ್ದು ಹೊಸ ಮನೆಗೆ ಬರಬೇಕು–ಎಂದು ನಾನು ಆಸೆ ಪಟ್ಟಿದ್ದರೆ ಅವನು ನನ್ನ ಆಸೆಯನ್ನು ನಿರಾಕರಿಸುತ್ತಿದ್ದನೇ? ಎಲ್ಲದಕ್ಕೂ ಪುಣ್ಯಮಾಡಬೇಕು”

ಆ ಮಾತುಗಳನ್ನು ಕೇಳಿ ಗೋವಿಂದರಾಯನ ಮನಸ್ಸಿನಲ್ಲಿ ಅಲ್ಲೋಲಕಲ್ಲೋಲವಾದಂತಾಯಿತು.

ಎಲ್ಲಿಯೋ ಹೋಟೆಲಿನಲ್ಲಿದ್ದ ತನ್ನನ್ನು ಆಕೆ ಮನೆಯಲ್ಲಿ ತಂದಿಟ್ಟುಕೊಂಡದ್ದೇಕೆ–ಎಂಬುದು ಅವನಿಗೆ ಅರ್ಥವಾಗಿರಲಿಲ್ಲ. ಈಗಂತೂ ಕೈತುಂಬಾ ಸಂಬಳ ಬರುತ್ತದೆ. ಆಗ ತಾನು ಈ ಮನೆಗೆ ಸೇರುವ ಮೊದಲು ಊರಿಗೆ ಕಳಿಸಿಬಿಟ್ಟರೆ ಉಳಿದ ಹಣ ಕಾಫೀ ತಿಂಡಿಗಾದರೆ ಊಟಕ್ಕೆ ಸಾಕಾಗುತ್ತಿರಲಿಲ್ಲ. ಅಂತಹ ಕಷ್ಟಕಾಲದಲ್ಲಿ ಆಕೆ ಆಶ್ರಯವನ್ನು ಕೊಟ್ಟಿದ್ದರು. ಒಂದು ದಿನವಾದರೂ ಒಂದು ಕಾಸು ಕೇಳಿರಲಿಲ್ಲ. ಮನೆಗೆ ಬಂದು ಇರಲಾರಂಭಿಸಿದ ನಂತರ ಊರಿಗೆ ಹಣ ಕಳುಹಿಸಿ, ಐದುರೂಪಾಯಿ ಖರ್ಚಿಗಿಟ್ಟುಕೊಂಡು ಉಳಿದುದನ್ನು ಆಕೆಗೆ ಕೈಗೆ ಕೊಡುವುದಕ್ಕೆ ಹೋಗಿದ್ದ. ನಾಗರತ್ನಮ್ಮ “ನೀನೊಬ್ಬನು ಊಟಮಾಡಿಕೊಂಡು ಹೋದರೆ ನನಗೆ ನಷ್ಟವೇ? ನಿನ್ನ ಹತ್ತಿರ ದುಡ್ಡು ತೆಗೆದುಕೊಳ್ಳುವುದಕ್ಕೆ ನಾನೇನು ಹೋಟೆಲಿಟ್ಟುಕೊಂಡಿದ್ದೇನೆಯೇ ? ನೀನೇ ಖರ್ಚಿಗಿಟ್ಟುಕೋ” ಎಂದು ಹೇಳಿದ್ದರು. ಅನಂತರ ಮನೆಗೆ ಸಾಮಾನು ತರಲು ಪ್ರಯತ್ನಪಟ್ಟಿದ್ದ. ಖಚಿತವಾಗಿ ಅದನ್ನು ತರಕೂಡದೆಂದು ಹೇಳಿದ್ದರು. ಈಗೀಗ ಸಂಬಳ ಹೆಚ್ಚಿದ ಮೇಲೆ ಸೋಪೋ ಕಾಫಿಪುಡಿಯೋ, ತರಕಾರಿಯೋ ತಂದರೆ ಬೇಡವೆನ್ನುತ್ತಿರಲಿಲ್ಲ. ಒಂದೊಂದು ದಿನ ಅವರೇ ತರುವುದಕ್ಕೆ ಹೇಳುತ್ತಾರೆ.

ಆಕೆ ತನ್ನ ವಿಷಯದಲ್ಲಿ ಯಾಕೆ ಇಷ್ಟೊಂದು ವಾತ್ಸಲ್ಯದಿಂದ ಇದ್ದಾರೆ ಎಂದು ಎಷ್ಟು ಯೋಚಿಸಿದರೂ ಗೋವಿಂದರಾಯನಿಗೆ ಗೊತ್ತಾಗಿರಲಿಲ್ಲ. ಈಗ “ನನ್ನ ಮಗ ಬದುಕಿದ್ದರೆ ನಿನ್ನ ವಯಸ್ಸಿನವನೇ ಆಗಿರುತ್ತಿದ್ದ” ಎಂದು

ಹೇಳುತ್ತಲೂ ತನ್ನನ್ನು ತಮ್ಮ ಮಗ ಎಂದುಕೊಂಡೇ ವ್ಯವಹರಿಸುತ್ತಿದ್ದಾರೆ ಈಕೆ ಎಂದು ಅವನ ಮನಸ್ಸಿಗೆ ಬೋಧೆಯಾಯಿತು.

"ನನ್ನ ಮಗನೇ ಬದುಕಿದ್ದು ಸೊಸೆ ಮನೆಗೆ ಬರಬೇಕು ಎಂದು ನಾನು ಆಸೆಪಟ್ಟಿದ್ದರೆ ಅವನು ನನ್ನ ಆಸೆಯನ್ನು ನಿರಾಕರಿಸುತ್ತಿದ್ದನೇ ?" ಆ ಕಡೆಯ ಶಬ್ದಗಳು ಗೋವಿಂದರಾಯನ ಮನಸ್ಸಿನಲ್ಲಿ ಪ್ರತಿಧ್ವನಿಸಿದವು.

ಅವನು ಉದ್ರೇಕದಿಂದ "ಅತ್ತೆ. ನಾನು ಮದುವೆಮಾಡಿಕೊಳ್ಳುತ್ತೇನೆ. ನಿಮ್ಮ ಅಣ್ಣನಿಗೆ ಆಗಲೆಂದು ಹೇಳಿಬಿಡಿ" ಎಂದ.

ನಾಗರತ್ನಮ್ಮ "ಹುಂ" ಎಂದರು. ಮಾತನಾಡಲಿಲ್ಲ. ಅವರ ಕೊರಳು ಕಟ್ಟಿಕೊಂಡಿದ್ದಿತು.

ಇಬ್ಬರೂ ಮನೆಗೆ ಹಿಂತಿರುಗಿದರು. ಮನೆಗೆ ಬಂದಮೇಲೆ ನಾಗರತ್ನಮ್ಮ ಅಣ್ಣನಿಗೆ ಹೇಳುತ್ತಾರೆಯೇನೋ ಎಂದು ಗೋವಿಂದರಾಯ ನಿರೀಕ್ಷಿಸಿದ. ಊಟಮಾಡುವಾಗ ಪ್ರಸ್ತಾಪಿಸುತ್ತಾರೆಯೇನೋ ಎಂದು ನೋಡಿದ. ಆಕೆ ಆ ವಿಷಯವನ್ನೇ ಮಾತನಾಡಲಿಲ್ಲ.

ಆ ಅತ್ತೆಗೆ ತೃಪ್ತಿಯನ್ನುಂಟುಮಾಡಲು ಅವನೇನು ಬೇಕಾದರೂ ಮಾಡುವುದಕ್ಕೆ ಸಿದ್ಧನಾಗಿದ್ದ.

ಊಟವಾಗಿ ಗುಂಡಪ್ಪ ಹಜಾರಕ್ಕೆ ಬಂದು ಕುಳಿತುಕೊಳ್ಳುತ್ತಲೂ ಗೋವಿಂದರಾಯ ತಾನಾಗಿ ಬಂದು ಹೇಳಿದ.

"ಗುಂಡಪ್ಪನವರೇ ! ತಮ್ಮ ಮಗಳು ಪ್ರಮೀಳೆಯನ್ನು ಮದುವೆಮಾಡಿಕೊಳ್ಳಬೇಕೆಂದು ಅತ್ತೆ ಹೇಳಿದ್ದಾರೆ. ನಾನು ಒಪ್ಪಿಕೊಂಡಿದ್ದೇನೆ. ಮುಂದಿನ ಏರ್ಪಾಟು ಏನು ಬೇಕೋ ಮಾಡಿಕೊಳ್ಳಿರಿ"

ಗುಂಡಪ್ಪನವರಿಗೆ ಆ ಮಾತು ಕೇಳಿ ಕಕ್ಕಾಬಿಕ್ಕಿಯಾಯಿತು. ಅವರು ಏನು ಮಾತನಾಡುವುದಕ್ಕೂ ತೋರದೇ ಹಿಂದೆ ಮುಂದೆ ನೋಡಿದರು. ಅಷ್ಟುಹೊತ್ತಿಗೆ ನಡುಮನೆಯಿಂದ ಬಂದ ತಂಗಿಯ ಮುಖವನ್ನು ಈಕ್ಷಿಸಿದರು.

ನಾಗರತ್ನಮ್ಮ "ಗುಂಡಣ್ಣಾ. ಗಂಡು ಒಂದು ವಿಧವಾಗಿ ಒಪ್ಪಿಕೊಂಡಿದ್ದಾನೆ. ಹುಡುಗಿಯನ್ನು ಕರೆಸು. ಅವನೊಂದುಬಾರಿ ನೋಡಲಿ" ಎಂದರು.

"ಅದೇನೂ ಬೇಕಾಗಿಲ್ಲ ಅತ್ತೆ. ನಾನು ಹುಡುಗಿಯನ್ನು ನೋಡ ಬೇಕಾಗಿಲ್ಲ. ಒಪ್ಪಿಕೊಂಡಿದ್ದೇನೆ"

"ಹಾಗೆಂದರೆ ಹೇಗೋ! ಮದುವೆ ಎಂದರೆ ಗಂಡು ಹುಡುಗಿಯನ್ನು ನೋಡಿ ಒಪ್ಪಿಕೊಳ್ಳಬೇಕು"

"ಬೇಕಾಗಿಲ್ಲ. ಈಗ ಒಪ್ಪುವ ಬಿಡುವ ಪ್ರಶ್ನೆಯಿಲ್ಲ. ನೀವು ಮದುವೆ ಮಾಡಿಕೊಳ್ಳಬೇಕು ಎಂದಿರಿ. ಮಾಡಿಕೊಳ್ಳುತ್ತೇನೆ. ಹುಡುಗಿಯನ್ನು ನೀವು ಒಪ್ಪಿಕೊಂಡಿದ್ದರಾಯಿತು"

ನಾಗರತ್ನಮ್ಮ "ಅದು ಸರಿ. ಹುಡುಗಿ ನಿನ್ನನ್ನು ನೋಡಿ ಒಪ್ಪಬೇಕೋ ಬೇಡವೋ ?" ಎಂದರು.

"ಹಾಗಾದರೆ ಆಗಬಹುದು. ಆ ಹುಡುಗಿಯನ್ನು ಕರೆಸಿ. ಆದರೆ ಅವಳು ನನ್ನನ್ನು ಒಪ್ಪದಿದ್ದರೆ ನನ್ನ ಮೇಲೆ ಮಾತಿಲ್ಲ"

"ಇಲ್ಲ, ಗೋವಿಂದು. ನಿನ್ನ ಮೇಲೆ ಮಾತಿಲ್ಲ" ಎಂದು ಹೇಳಿ ನಾಗ ರತ್ನಮ್ಮ ನಕ್ಕರು.

ಆಕೆಯ ಮುಖದ ಮೇಲೆ ನಗು ವನ್ನು ಕಂಡು ಗೋವಿಂದರಾಯನ ಮನಸ್ಸಿಗೆ ಎಷ್ಟೋ ತೃಪ್ತಿಯಾಯಿತು.

ಗೋವಿಂದರಾಯ ಆಗಲಿ ಎಂದರೆ ಆಯಿತು ಎಂಬಂತೆ ಯಾವುದೂ ಆವಸರವಾಗಿ ನಡೆಯಲಿಲ್ಲ. ಪ್ರತಿಯೊಂದು ಕೆಲಸವೂ ಸಾಂಗೋಪಾಂಗವಾ ಗಿಯೇ ನೆರವೇರಿತು. ನಾಗರತ್ನಮ್ಮನವರು ಮಾರನೆಯ ದಿನ ಸ್ಕೂಲಿಗೆ ರಜಾ ತೆಗೆದುಕೊಂಡು ಮಧ್ಯಾಹ್ನ ಜೋಯಿಸರನ್ನು ಕರೆಸಿ ವಧೂವರರ ಜಾತಕ ತೋರಿಸಿದರು.

ಜೋಯಿಸರು ಎರಡು ಗಳಿಗೆಗಳ ಕಾಲ ಜಾತಕವನ್ನು ನೋಡಿ "ಎಲ್ಲಾ ಸರಿಯಾಗಿದೆ" ಎಂದು ಹೇಳಿದರು.

ಹಾಗೆ ಹೇಳಿದರೂ ಅವರ ಧ್ವನಿಯಲ್ಲಿ ಏನೋ ವ್ಯತ್ಯಾಸವಿತ್ತು.

"ಏನು ಜೋಯಿಸರೇ. ಏನೋ ಹೇಳುವುದಕ್ಕೆ ಹಿಂದೆಮುಂದೆ ನೋಡು ತ್ತಿರುವಂತಿದೆ. ಸಂಕೋಚಪಡ ಬೇಕಾಗಿಲ್ಲ. ಏನಿದ್ದರೂ ಹೇಳಿರಿ. ಜಾತಕ ಗಳಲ್ಲಿ ದೋಷವೇನಾದರೂ ಇದೆಯೆ ?"

"ಹರಿಹರಿ. ಜಾತಕಗಳು ಪ್ರಾಶಸ್ತ್ಯವಾಗಿವೆ. ಆದರೆ ಒಂದು ವಿಷಯದಲ್ಲಿ ಮಾತ್ರ ಯಾರಾರವರೂ ನೋಡಿದರೆ ಏನು ಹೇಳುತ್ತಾರೆಯೋ ಎಂದು ನೋಡು ತ್ತಿದ್ದೇನೆ"

ಗುಂಡಪ್ಪನವರು ಗಾಬರಿಯಾಗಿ "ಏನು, ಆ ಒಂದು ವಿಷಯ?" ಎಂದರು.

"ಅದೇನು ಪ್ರಮಾದದ ವಿಷಯವಲ್ಲ. ಇಬ್ಬರದೂ ಏಕನಕ್ಷತ್ರವಾಗು ತ್ತದೆ"

"ಅದೇನು ದೋಷವೋ?"

"ಮೊದಲೇ ಹೇಳಿದೆನಲ್ಲಾ. ದೋಷವಲ್ಲ. ಪತಿಪತ್ನಿಯರದು ವಿಭಿನ್ನ ನಕ್ಷತ್ರಗಳಾದರೆ ಒಬ್ಬರಿಗೆ ಚೆನ್ನಾಗಿಲ್ಲದ ಕಾಲದಲ್ಲಿ ಮತ್ತೊಬ್ಬರ ನಕ್ಷತ್ರಬಲ ದಿಂದ ಅನುಕೂಲವಾಗಿರುತ್ತದೆ. ಏಕನಕ್ಷತ್ರವಾದರೆ ಇಬ್ಬರಿಗೂ ಕಷ್ಟಸುಖ ಗಳು ಏಕಕಾಲದಲ್ಲಿ ಬರುತ್ತವೆ"

ನಾಗರತ್ನಮ್ಮನವರು "ಹಾಗಿದ್ದರೇನು ಮದುವೆ ಮಾಡಬಾರದೇ, ಜೋಯಿಸರೇ?" ಎಂದರು.

"ಯಾಕೆ ಮಾಡಬಾರದು. ಭೇಷಕ್ಕಾಗಿ ಮಾಡಬಹುದು. ಏಕ ನಕ್ಷತ್ರವಾದರೂ ಪಾದಗಳಲ್ಲಿ ವ್ಯತ್ಯಾಸವಿದೆ. ಅನಾನುಕೂಲವೇನೂ ಆಗು ವುದಿಲ್ಲ. ಯಾರಾದರೂ ಇದನ್ನೇ ಒಂದು ದೋಷವೆಂದು ಹೇಳಬಹುದಲ್ಲ– ಎಂದು ನೋಡುತ್ತಿದ್ದೇನೆ"

ಗುಂಡಪ್ಪನವರು ಹತಾಶರಾಗಿ "ಈಗೇನು ಮದುವೆ ಮಾಡುವುದು ಸಾಗು" ಎಂದರು.

"ಅದಕ್ಕೇನು ಪರವಾಯಿಲ್ಲ, ಗುಂಡು. ಏಕನಕ್ಷತ್ರವಾದರೆ ಪರವಾ ಯಿಲ್ಲ ಎನ್ನುತ್ತಿದ್ದಾರೆ, ಜೋಯಿಸರು"

"ಹೌದಮ್ಮ. ಏನೂ ಪರವಾಯಿಲ್ಲ. ನೀವೇನೂ ಯೋಚನೆಮಾಡ ಬೇಕಾಗಿಲ್ಲ. ನಾನು ಬೇಕಾದರೆ ಹತ್ತಾರು ಜ್ಯೋತಿಷ್ಯ ಗ್ರಂಥಗಳಿಂದ ಆಧಾರ ಗಳನ್ನು ತೆಗೆದು ಹೇಳಬಲ್ಲೆ"

"ತಾವು ಅಷ್ಟೇನೂ ಶ್ರಮ ತೆಗೆದುಕೊಳ್ಳಬೇಕಾಗಿಲ್ಲ, ಜೋಯಿಸರೇ,

ಆ ಹುಡುಗಿಯ ಜಾತಕವಲ್ಲಿ ಸ್ವಲ್ಪ ಬದಲಾವಣೆ ಮಾಡಿ ತಂದುಕೊಟ್ಟುಬಿಡಿ"

ಜೋಯಿಸರಿಗೆ ಇವೆಲ್ಲಾ ಮಾಮೂಲು ಕೆಲಸ. ನೂರು ಸುಳ್ಳುಗಳನ್ನು ಹೇಳಿ ಒಂದು ಮದುವೆ ಮಾಡಬಹುದು ಎಂದು ಶಾಸ್ತ್ರವಿರುವಾಗ ಒಂದು ಸುಳ್ಳು ಹೇಳಿವರೆಂತಹ ದೋಷ.

"ಓಹೋ! ಅದಕ್ಕೇನು. ನಾಳೇ ಬೆಳಗಾಗ ತಂದುಬಿಡುತ್ತೇನೆ" ಎಂದು ಹೇಳಿ ಜೋಯಿಸರು ಬೀಳ್ಕೊಂಡರು.

ಅದೇದಿನ ನಾಗರತ್ನಮ್ಮ ಗೋವಿಂದರಾಯನಿಗೆ ಮದುವೆ ಗೊತ್ತಾಗಿದೆ ಎಂದೂ ಕೂಡಲೇ ಬರಬೇಕೆಂದೂ ಅವನ ತಾಯಿತಂದೆಗಳಿಗೆ ಕಾಗದ ಬರೆದರು. ಹಾಗೆಯೇ ಪ್ರಮಿಳೆಯನ್ನು ಕರೆದುಕೊಂಡು ಕೂಡಲೇ ಹೊರಟು ಬರಬೇಕೆಂದು ಕುಮುದೆಗೆ ಕಾಗದ ಬರೆಯಲಾಯಿತು. ಒಂದೆರಡು ದಿನಗಳಲ್ಲಿಯೇ ಎಲ್ಲರೂ ಬಂದಿಳಿದರು.

ಹುಡುಗಿಯ ವಿಷಯದಲ್ಲಿ ಯಾರೂ ಏನು ಆಕ್ಷೇಪಣೆಯನ್ನೂ ಹೇಳುವಂತೆ ಇರಲಿಲ್ಲ. ಜೋಯಿಸರು ತಯಾರುಮಾಡಿದ ಜಾತಕದ ವಿಷಯದಲ್ಲಿಯೂ ಅಷ್ಟೇ. ಯಾರೂ ಏನೂ ಹೇಳುವಂತೆ ಇಲ್ಲರಲಿಲ್ಲ.

ಅದೇ ವಾರದಲ್ಲಿ ಲಗ್ನಪತ್ರಿಕೆಯೂ ಆಯಿತು.

## ೭

ಎಲ್ಲ ಮದುವೆಯಾದ ಹೆಣ್ಣುಗಳಿಗೂ ಅತ್ತೆಯ ಮನೆಗೆ ಹೋಗುವ ಹೊಸದರಲ್ಲಿ ಬರುವಂತಹ ಅಕಾರಣವಾದ ಭಯ ಸಂಕೋಚಗಳು ಪ್ರಮಿಳೆಗೆ ಬರಲೇ ಇಲ್ಲ. ನಾಗರತ್ನಮ್ಮನವರ ಮನೆಯೇ ಅವಳ ಅತ್ತೆಯ ಮನೆ. ಒಂದೇ ಮನೆಯ ಒಂದು ಕೋಣೆಯಿಂದ ಮತ್ತೊಂದು ಕೋಣೆಗೆ ಬಂದ ಹಾಗಿತ್ತು ಅವಳು ಅತ್ತೆಯ ಮನೆಗೆ ಬಂದುದು.

ನಾಲ್ಕುದಿನದ ಮದುವೆ ಮುಗಿಸಿಕೊಂಡು ನಾಗರತ್ನಮ್ಮ ನಗುತ್ತಾ ''ನಮ್ಮ ಹುಡುಗಿಯನ್ನು ನನ್ನೊಡನೆ ಕಳುಹಿಸಿ ಬಿಡಿ" ಎಂದು ಹೇಳಿದರು.

ಗುಂಡಪ್ಪನವರು ''ಮದುವೆಮಾಡಿಸಿ ಮಗಳ ಕನ್ಯಾಸೆರೆ ಬಿಡಿಸಿದೆ. ಮಹರಾಯಳಾಗಿ ಕರೆದುಕೊಂಡು ಹೋಗಮ್ಮ. ಅವಳು ಇನ್ನು ಮುಂದೆ ನಮ್ಮ ಮಗಳಲ್ಲ. ನಿನ್ನ ಮಗಳು" ಎಂದರು.

ಮಗಳನ್ನು ಗಂಡನ ಮನೆಗೆ ಕಳುಹಿಸಲು ಪ್ರಮಿಳೆಯ ತಾಯಿ ತಂದೆ ಗಳು ಸಿದ್ಧವಾಗಿಯೇ ಇದ್ದರು. ಒಂದು ಆತಂಕವಿತ್ತು. ಮೊದಲಿನ ಕಾಲ ವಾಗಿದ್ದರೆ ಮೂರು ತಿಂಗಳಲ್ಲ, ಆರು ತಿಂಗಳು ಬೇಕಾದರೂ ಕಳಿಸಬಹುದಾ ಗಿತ್ತು. ಈಗ ಹಾಗೆ ಆಗುತ್ತದೆಯೇ? ವಯಸ್ಸಾದವರು. ಬುದ್ಧಿ ತಿಳಿದ ಹುಡುಗರು. ಯಾವ ಗಳಿಗೆಯಲ್ಲಿ ಏನೋ? ಕಳಿಸುವಾಗ ಒಳ್ಳೆಯ ದಿನ

ನೋಡಿ, ಪುನಸ್ಸಂಧಾನ ಮುಗಿಸಿಯೇ ಕಳಿಸಬೇಕು. ಸಂಪ್ರದಾಯಸ್ಥರಾದ ಅವರಿಗೆ ಮದುವೆಯಾಗುತ್ತಿದ್ದ ಹಾಗೆಯೇ ಪುನಸ್ಸಂಧಾನದ ಏರ್ಪಾಟುಗಳನ್ನು ಮಾಡುವುದು ಸರಿತೋರಲಿಲ್ಲ. ಆದರೆ ಹೂವಿನ ಸರವೆತ್ತಿದಂತೆ ಎಲ್ಲಾ ಸುಸೂತ್ರವಾಗಿ ನಡೆಯುತ್ತಿದೆ. ಇದೂ ನಡೆದುಹೋಗಲಿ ಎಂದು ಒಪ್ಪಿಕೊಂಡು ನೆರವೇರಿಸಿದರು.

ಅನಂತರ ಎಲ್ಲರೂ ಶಿವನಸಮುದ್ರದಿಂದ ಹೊರಟರು. ಮಗಳನ್ನು ಬಿಟ್ಟು ಬರಲು ಗುಂಡಪ್ಪನವರೂ ಪಾರ್ವತಮ್ಮನವರೂ ಬೆಂಗಳೂರಿಗೆ ಬರಬೇಕಾಗಿತ್ತು. ಶಿವಮೊಗ್ಗೆಗೆ ಹೊರಡುವ ಕುಮುದೆ ಅವಳ ಮಕ್ಕಳು ಪತಿರಾಮು, ದೇವನಹಳ್ಳಿಗೆ ಹೋಗಬೇಕಾಗಿದ್ದ ಗೋವಿಂದರಾಯನ ತಂದೆ ಶಾಮರಾಯರೂ ಶಾಂತಮ್ಮನವರೂ, ಬಳ್ಳಾರಿಗೆ ಹೋಗಬೇಕಾಗಿದ್ದ ಗೋವಿಂದರಾಯನ ತಂಗಿ ಸುಶೀಲಾ ಅವಳ ಮಕ್ಕಳೂ, ಗಂಡ ಬೆಂಗಳೂರಿಗೆ ಬಂದೇ ಹೋಗಬೇಕಾಗಿತ್ತು. ನಾಗರತ್ನಮ್ಮ ಬಲಾತ್ಕಾರವಾಡಿ ಮುಂದೆ ಹೋಗುವವರನ್ನು ಎರಡು ದಿನ ತಮ್ಮ ಮನೆಯಲ್ಲಿದ್ದುಕೊಂಡೇ ಹೋಗಬೇಕೆಂದು ಬಲಾತ್ಕಾರಮಾಡಿ ಉಳಿಸಿಕೊಂಡರು.

ಎರಡು ದಿನಗಳಲ್ಲಿಯೇ ಅವರನ್ನೆಲ್ಲಾ ಕಳಿಸಿಬಿಡಲು ನಾಗರತ್ನಮ್ಮ ಒಪ್ಪಲಿಲ್ಲ. ಅವರೆ ರಜಾ ಇಲ್ಲವೆಂದು ಕುಮುದೆಯ ಗಂಡ ಶಿವಸ್ವಾಮಿ ಹೆಂಡತಿ ಮಕ್ಕಳನ್ನು ಕರೆದುಕೊಂಡು ಶಿವಮೊಗ್ಗೆಗೆ ಹೊರಟುಹೋದ. ವಾಸ್ತವವಾಗಿ ಅವನಿಗೆ ರಜಾ ಇರಲೂ ಇಲ್ಲ.

ಪ್ರಮೀಳೆಗೆ ಸುಶೀಲೆಯು ಹೊಸಪರಿಚಯ. ಆದರೂ ಅವರಿಬ್ಬರೂ ಆ ಆರೇಳು ದಿನಗಳಲ್ಲಿಯೇ ಅಕ್ಕತಂಗಿಯರಂತಾಗಿ ಹೋಗಿದ್ದರು. ಅಣ್ಣ ಮದುವೆಯಾಗುವುದಿಲ್ಲವೆಂದು ಹಟಹಿಡಿದಿದ್ದು ಸುಶೀಲೆಗೂ ಗೊತ್ತಿತ್ತು. ಅನಂತರ ಮದುವೆಯು ಗೊತ್ತಾಗಿ ಅವಳಿಗೆ ಕಾಗದ ಹೋಗುತ್ತಲೇ ಅವಳ ಮನಸ್ಸಿಗಾದ ಸಂತೋಷ ಅಷ್ಟಿಷ್ಟಲ್ಲ. ಅವಳ ಗಂಡ ವಾಸುದೇವಯ್ಯ "ಮಕ್ಕಳನ್ನು ಕರೆದುಕೊಂಡು ನೀನೇ ಹೋಗಿಬಾ" ಎಂದು ಹೆಂಡತಿಗೆ ಹೇಳಿದ್ದ ಇರುವ ಒಬ್ಬನೇ ಒಬ್ಬ ಅಣ್ಣನಿಗೆ ಮದುವೆಯಾಗುವಾಗ ತಾನು ಒಂಟಿಯಾಗಿ

ಹೋಗಿ ನಿಂತುಕೊಳ್ಳುವುದು ಅವಳಿಗೆ ಒಪ್ಪಿಗೆಯಾಗಲಿಲ್ಲ. ಹಟಹಿಡಿದು ಗಂಡನನ್ನು ಕರೆದುಕೊಂಡೇ ಬಂದಿದ್ದಳು.

ಸುಶೀಲೆ ನಾಗರತ್ನಮ್ಮನವರನ್ನು ಚೆನ್ನಾಗಿ ಅರಿಯಳು. ಅಣ್ಣನು ಬೆಂಗಳೂರಿನಲ್ಲಿ ಯಾರೋ ಸಂಬಂಧೀಪರ ಮನೆಯಲ್ಲಿದ್ದಾನೆಂಬುದಷ್ಟು ಗೊತ್ತಿತ್ತು. ಮದುವೆಗೆ ಒಪ್ಪದೇ ಕುಳಿತಿದ್ದ ಅಣ್ಣ ನಾಗರತ್ನಮ್ಮನವರ ಸೋದರ ಸೊಸೆಯನ್ನು ಮದುವೆಯಾಗುತ್ತಾನೆಂದು ತಿಳಿದು ಅವಳ ಮನಸ್ಸಿಗೆ ಹಲವಾರು ಬಗೆಯ ಸಂದೇಹಗಳು ಬಂದುವು. ಆತನಿಗೆ ಉಪಕಾರಮಾಡಿದ ದಾಕ್ಷಿಣ್ಯಕ್ಕೆ ಅವರ ಸಂಬಂಧದಲ್ಲಿ ಯಾರನ್ನೋ ಮದುವೆಯಾಗಲು ಒಪ್ಪಿಕೊಂಡಿದ್ದಾನೆಂದು ಕೊಂಡಿದ್ದಳು. ಅಣ್ಣನಿಗೆ ಮದುವೆ ಎಂಬುದು ಸಂತೋಷಕರವಾಗಿದ್ದರೂ ಬಲಾತ್ಕಾರದಿಂದ ಯಾವಳೋ ಹುಡುಗಿಯನ್ನು ಮದುವೆ ಮಾಡಿಕೊಳ್ಳಬೇಕಾಗಿ ಬಂತಲ್ಲ ಎಂಬ ಭಾವನೆ ತಾನು ನೋಡದೇ ಇದ್ದ ಹುಡುಗಿಯಲ್ಲಿಯೂ ತುಸ ಅಸಮಾಧಾನವನ್ನು ಉಂಟುಮಾಡಿತ್ತು.

ಆದರೆ ಪ್ರಮೀಳೆಯನ್ನು ನೋಡಿದೊಡನೆಯೇ ಅವಳ ಅಸಮಾಧಾನವು ಮಾಯವಾಗಿ ಹೋಯಿತು. ಅಂತಹ ಒಳ್ಳೆಯ ಅತ್ತಿಗೆ ಸಿಕ್ಕಿದ್ದು ಪುಣ್ಯವೆಂದು ಸಂತೋಷಭರಿತಳಾದಳು. ಮದವೆಯ ಎರಡು ದಿನಗಳ ಮೊದಲಿನಿಂದಲೂ ಆರಂಭವಾದ ಅವರ ಗೆಳೆತನ ಮದುವೆಯ ಕಾಲದಲ್ಲಿಯೂ ಮುಂದುವರಿದು ನಾಗರತ್ನಮ್ಮನವರ ಮನೆಯಲ್ಲಿ ಮೊಕ್ಕಾಂ ಮಾಡಿದ್ದಾಗಲೂ ಬೆಳೆದುಕೊಂಡು ಬರುತ್ತಿತ್ತು.

ವಿಧಿಯಿಲ್ಲದೇ ಸುಶೀಲೆಯು ಬಳ್ಳಾರಿಗೆ ಹೋಗಲೇಬೇಕಾಗಿ ಬಂದಾಗ ಆ ಅಗಲಿಕೆ ಅವರಿಬ್ಬರಿಗೂ ಕಷ್ಟವಾಯಿತು.

ನಾಲ್ಕಾರು ದಿನಗಳಲ್ಲಿ ಗುಂಡಪ್ಪನವರೂ ಪತ್ನೀಸಮೇತರಾಗಿ ಹೊರಟು ಹೋದರು. ವೃದ್ಧ ದಂಪತಿಗಳಾದ ಶಾಮರಾಯ ಶಾಂತಮ್ಮನವರುಗಳು ಯಾವ ನೆಪವನ್ನೂ ಹೇಳಲಾಗಲಿಲ್ಲ. ಅವರು ಹದಿನೈದು ದಿನಗಳು ಅಲ್ಲಿಯೇ ಇರಬೇಕಾಯಿತು.

ಕಡೆಗೆ ಮನೇಕಡೆ ಯಾರೂ ನೋಡಿಕೊಳ್ಳುವವರಿಲ್ಲವೆಂದು ಅವರೂ ಹೊರಡಲುದ್ಯುಕ್ತರಾದರು. ತಮ್ಮ ಮಗನಿಗೆ ಹೇಳಿ ಒಪ್ಪಿಸಿದರು. ಅದು

ಅವರಿಗೇನೂ ಕಷ್ಟವಾಗಲಿಲ್ಲ. ನಾಗರತ್ನಮ್ಮನವರನ್ನು ಒಪ್ಪಿಸಿದರೆ ಎಲ್ಲರನ್ನೂ ಒಪ್ಪಿಸಿದಂತೆಯೇ ಆಗುತ್ತಿತ್ತು.

ಒಂದು ಸಂಧ್ಯಾಕಾಲದಲ್ಲಿ ಶಾಮರಾಯರು ''ನಾಗರತ್ನಮ್ಮನವರೇ. ನಾವು ನಾಳೆ ಬೆಳಗ್ಗಿನ ಬಸ್ಸಿನಲ್ಲಿ ಪ್ರಯಾಣ ಮಾಡುತ್ತೇವೆ" ಎಂದರು.

''ಅವರುಗಳಂತೂ ರಜಾಗಳಿಲ್ಲ. ನಿಮಗೇನು ಅವಸರ ?"

''ನನಗೆ ಕಚೇರಿಯ್ಯೇ ಕೊತ್ವಾಲಿಯೇ ಏನೂ ಇಲ್ಲ. ಆದರೆ ನಿಮ್ಮ ಕಾಗದ ನೋಡಿದವರೇ ಬಂದುಬಿಟ್ಟೆವು. ಈಗಾಗಲೇ ತಿಂಗಳ ಮೇಲಾಯಿತು. ಮನೆಗೆ ಬೀಗಹಾಕಿಕೊಂಡು ಬಂದುಬಿಟ್ಟಿದ್ದೇವೆ. ಬೀಗವೇನು ನಂಬಿಕೆ ? ಈಗಿನ ಕಾಲದಲ್ಲಿ ಹಗಲುಹೊತ್ತೇ ಬೀಗಗಳನ್ನು ಒಡೆದು ಇರುವುದನ್ನು ದೋಚಿಕೊಂಡು ಹೋಗುತ್ತಾರೆ. ಇರುವ ನಾಲ್ಕು ಪಾತ್ರೆ ಪಡಗಗಳೂ ಹೋದರೇನು ಗತಿ"

ಆ ಮಾತುಗಳು ನಡೆಯುತ್ತಿದ್ದಾಗ ಗೋವಿಂದರಾಯನೂ ಅಲ್ಲಿಯೇ ಇದ್ದ.

ಅವನು ನಗುತ್ತಾ "ಅಲ್ಲಿರುವ ಪಾತ್ರೆಪಡಗಗಳು ಹೋಗುತ್ತವೆಂದು ಯೋಚನೆ ಮಾಡಬೇಕಾಗಿಲ್ಲ" ಎಂದ.

ಮಗನ ಮಾತು ಕೇಳಿ ಆ ಮುದುಕರಿಗೆ ಕೋಪ ಬಂದಿತು.

"ನಿನಗೇನಪ್ಪ. ನೂರಾರು ರೂಪಾಯಿ ಸಂಬಳ ಬರುವ ಸರದಾರ. ನಮಗೆ ಮುರುಕಲು ಪಾತ್ರೆ ಪಡಗಗಳೇ ಹೆಚ್ಚು"

ಗೋವಿಂದರಾಯನಿಗೆ ಮನಸ್ಸು ಚುಚ್ಚಿದಂತಾಯಿತು. ತಾನು ಆ ಮಾತು ಹೇಳಬಾರದಾಗಿದ್ದಿತೆಂದುಕೊಂಡ.

"ನಾನು ಹೇಳಿದ್ದು ಆ ಅರ್ಥದಲ್ಲಲ್ಲಪ್ಪ. ನೀವು ಇನ್ನೂ ನಾಲ್ಕು ದಿನ ಜೊತೆಯಲ್ಲಿದ್ದುಕೊಂಡು ಹೋಗಬೇಕೆಂಬ ಅಪೇಕ್ಷೆಯಿಂದ ಹೇಳಿದೆ"

ತಪ್ಪು ಮಾತಾಡಿದೆ ಎಂದು ಪರಿತಾಪ ಪಟ್ಟುಕೊಂಡ ಭಾವವನ್ನು ಮಗನ ಮಾತಿನಿಂದ ಗ್ರಹಿಸಿದ ಶಾಮರಾಯರು ''ನೀನು ಹೇಳುವುದು ಸರಿ. ಆದರೆ ಈಗ ತಾನೇ ಶುಭಕಾರ್ಯವಾಗಿದೆ. ಈ ಸಮಯದಲ್ಲಿ ಕಳ್ಳತನಗಳ

ತನಗಳಾದರೆ ಅಪಶಕುನ. ಹಾಗಾಗಬಾರದು. ಆದರಿಂದಲೇ ನಾನು ಹೋಗಬೇಕು ಎನ್ನುವುದು" ಎಂದರು.

ಅವರು ಶುಭಕಾರ್ಯವಾದ ಮೇಲೆ ಅಪಶಕುನವಾಗಬಾರದು ಎಂದು ಹೇಳಿದ ಮೇಲೆ ಆ ಮಾತಿಗೆ ಪ್ರತಿ ಹೇಳಲು ಯಾರಿಗೂ ಬಾಯಿ ಬರಲಿಲ್ಲ.

ಅದೇ ದಿನ ಶಾಂತಮ್ಮನವರು ನಾಗರತ್ನಮ್ಮನವರನ್ನು ಪ್ರತ್ಯೇಕವಾಗಿ ನೋಡಿ "ನೀವು ತಪ್ಪು ತಿಳಿದುಕೊಳ್ಳದಿದ್ದರೆ ನನ್ನದೊಂದು ಆಸೆಯಿದೆ, ಹೇಳುತ್ತೇನೆ" ಎಂದರು.

"ಅದಕ್ಕೇನು, ಹೇಳಿ ಶಾಂತಮ್ಮನವರೇ"

"ನಾಲ್ಕು ದಿನ ಪ್ರಮಿಳೆಯನ್ನು ಕರೆದುಕೊಂಡು ಹೋಗಿ ಮನೆಯಲ್ಲಿ ಇಟ್ಟುಕೊಳ್ಳಬೇಕೆಂದಿದೆ"

"ಓಹೋ ! ಅಗತ್ಯವಾಗಿ ಕರೆದುಕೊಂಡು ಹೋಗಿ. ನನ್ನನ್ನು ಕೇಳಿ ಅದಕ್ಕೆ ಒಪ್ಪಿಗೆ ತೆಗೆದುಕೊಳ್ಳಬೇಕೆ ? ಹೊಸದಾಗಿ ಮದುವೆ ಮಾಡಿದ ತಾಯಿ ತಂದೆಗಳಿಗೆ, ಅದರಲ್ಲಿಯೂ ತಾಯಿಗೆ ಮಗ ಸೊಸೆ ನಾಲ್ಕು ದಿನ ಕಣ್ಣೆದುರಿಗೆ ಓಡಿಯಾಡಿಕೊಂಡಿರಲಿ ಎಂದು ಆಸೆಯಿರುತ್ತದೆ. ಗೋವಿಂದನಿಗೆ ರಜಾ ಸಿಕ್ಕುವುದಿಲ್ಲ. ಬಾಯಿಬಿಟ್ಟು ಹೇಳಲಿಲ್ಲವೇ ಹೊರತು ಆದರಿಂದಲೇ ನಿಮ್ಮಗಳನ್ನು ಇಷ್ಟು ದಿನ ಇಲ್ಲಿಟ್ಟುಕೊಂಡೆ. ಇನ್ನೂ ನಾಲ್ಕು ದಿನ ಇರಿ ಎಂದು ನಿಮ್ಮ ಯಜಮಾನರಿಗೆ ಹೇಳಿದ್ದು ಅದೇ ಕಾರಣದಿಂದಲೇ"

"ಆದರೆ ಇನ್ನೊಂದು ವಿನಂತಿಯಿದೆ. ನಾನು ಈ ಮಾತು ಕೇಳಿದ್ದು ನಮ್ಮ ಯಜಮಾನರಿಗೆ ತಿಳಿಯಕೂಡದು. ನೀವೇ ಬಲಾತ್ಕಾರ ಮಾಡಿ ಕಳಿಸಿಕೊಡುವಂತೆ ಕಳಿಸಿಕೊಡಬೇಕು"

ನಾಗರತ್ನಮ್ಮನವರು ನಕ್ಕರು. ಆ ನಗುವಿನಲ್ಲಿ ಒಪ್ಪಿಗೆ ಬೆರೆತಿತ್ತು.

"ಇನ್ನೊಂದು ಮಾತು, ಶಾಂತಮ್ಮನವರೇ ! ಮೊದಲಿನಂತಲ್ಲ ಈಗ ನಿಮ್ಮ ಮಗನಿಗೆ ಕೈ ತುಂಬಾ ಸಂಬಳ ಬರುತ್ತದೆ. ಮದುವೆಯೂ ಆಗಿ ಹೆಂಡತಿ ಮನೆಗೆ ಬಂದಿದ್ದಾಳೆ. ನೀವು ಆ ಹಳ್ಳಿಯ ಕೊಂಪೆಯಲ್ಲಿ ಯಾಕೆ ಇರಬೇಕು ? ಇಲ್ಲಿಯೇ ಒಂದು ಮನೆ ಮಾಡಿಕೊಂಡು ಮಗ ಸೊಸೆಯೊಂದಿಗೆ ಯಾಕೆ ಸಂಸಾರ ಮಾಡಿಕೊಂಡಿರಬಾರದು"

ಶಾಂತಮ್ಮ ನಿರಾಸೆಯಿಂದ "ಅದಾಗುವುದಿಲ್ಲಮ್ಮ. ನಮ್ಮ ಯಜಮಾನರಿಗೆ ಯಾರ ಅಧೀನದಲ್ಲಿರುವುದೂ ಇಷ್ಟವಿಲ್ಲ" ಎಂದರು.

"ಚೆನ್ನಾಯಿತು. ಮಗನ ಮನೆಯಲ್ಲಿರುವುದು ಅಧೀನವೇ ? ವೃದ್ಧಾಪ್ಯದಲ್ಲಿ ತಾಯಿ ತಂದೆಗಳನ್ನು ಸಂರಕ್ಷಿಸುವುದು ಮಕ್ಕಳ ಕರ್ತವ್ಯವಲ್ಲವೇ ?"

"ನೀವು ಹೇಳುವುದು ವಾಸ್ತವ. ಆದರೆ ಅವರು ಬಹಳ ಅಭಿಮಾನಶಾಲಿಗಳು. ಒಂದೆ ಮನೆಯಲ್ಲಿ ಕಷ್ಟವಾಗಿ ಗೋವಿಂದನಿಗೆ ಓದು ಬಿಡಿಸಲಾಯಿತಷ್ಟೆ. ಮನೆಯ ತಾಪತ್ರಯ ನೋಡಲಾರದೇ ಅವನು ಮನೆಯನ್ನು ಬಿಟ್ಟು ಹೋದ ಅವರಿಂದಲ್ಲಾ ಅವರಿಗೆ ಅವಮಾನವಾದಂತಾಗಿದೆ. ಗೋವಿಂದ ಈ ಊರಿಗೆ ಬಂದು ಫ್ಯಾಕ್ಟರಿಗೆ ಕೆಲಸಕ್ಕೆ ಸೇರಿದ ಹೊಸದರಲ್ಲಿ ಮೊದಲನೆಯ ತಿಂಗಳು ಸ್ವಲ್ಪ ದುಡ್ಡು ಕಳುಹಿಸಿದ್ದ. ಅದನ್ನು ಅವರು ವಾಪ್ಸು ಮಾಡಿಬಿಟ್ಟರು. ಅನಂತರ ಬಂದು ಗೋಳು ಕರೆದ. ಅದಕ್ಕವರು "ಬೇಡ. ನನಗೆ ಬರುವ ಪೆನ್ಷನ್ನಿನಲ್ಲಿ ಉಪ್ಪೋ ಗಂಜಿಯೋ ತಿಂದುಕೊಂಡು ಬದುಕಿರುತ್ತೇನೆ. ನಮ್ಮ ಗಂಡ ಹೆಂಡತಿಗೆ ಇಷ್ಟು ಸಾಕು" ಎಂದು ಹಟ ಹಿಡಿದು ಬಿಟ್ಟರು. ಆ ಮೇಲೆ ಏನೇನೋ ಆಗಿ ನನ್ನ ಹೆಸರಿಗೆ ದುಡ್ಡು ಕಳುಹಿಸುತಿದ್ದಾನೆ. ಅದೂ ಅವರಿಗೆ ಇಷ್ಟವಿಲ್ಲ"

ನಾಗರತ್ನಮ್ಮ ಆಕೆಯನ್ನು ಸಮಾಧಾನ ಮಾಡುತ್ತಾ "ಸರಿ ಬಿಡಿ. ಇದೆಲ್ಲಾ ಇನ್ನೆಷ್ಟು ದಿನ ? ಮೊಮ್ಮೊಳಿಗೊಂದು ಮಗುವಾದರೆ ಮೊಮ್ಮಗನ ಮೇಲಿನ ಆಸೆಯಿಂದ ಮುದುಕ ಬಾಯಿ ಬಿಟ್ಟುಕೊಂಡು ಬರುತ್ತಾರೆ" ಎಂದರು.

ಆವಶ್ಯಕವಿಲ್ಲದಿದ್ದರೂ ಮಾರನೆಯ ದಿನ ಪ್ರಾತಃಕಾಲ ತಾಯಿ ತಂದೆಗಳನ್ನು ಕಳಿಸಿಕೊಡುವುದಕ್ಕಾಗಿ ಗೋವಿಂದರಾಯ ರಜಾ ತೆಗೆದುಕೊಂಡಿದ್ದ. ಬಸ್‌ಸ್ಟಾಂಡಿಗೆ ಹೋಗಲು ಗಾಡಿಗಳೆರಡು ಬಂದು ನಿಂತವು.

ತಮ್ಮ ಸೊಸೆಯೂ ಹೊರಡಲು ಸನ್ನದ್ಧಳಾಗಿರುವುದನ್ನು ನೋಡಿ ಶಾಮರಾಯರು "ಇವಳೂ ಹೊರಡುವಂತಿದೆ" ಎಂದರು.

ಗಂಡನ ಮಾತಿಗೆ "ನಾಗರತ್ನಮ್ಮ ಎರಡು ದಿನ ನಮ್ಮ ಮನೆಯಲ್ಲಿಟ್ಟುಕೊಂಡಿದ್ದು ಕಳಿಸಬೇಕೆಂದು ಹೇಳಿದರು" ಎಂದರು ಶಾಂತಮ್ಮ

“ಅದೊಂದೂ ಇಲ್ಲ, ಇದೆಲ್ಲಾ ನಿನ್ನ ಏರ್ಪಾಟೇ. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ನನಗೇನು ಗೊತ್ತಾಗುವುದಿಲ್ಲ ಎಂದಿದ್ದೀಯಾ ?”

“ನಾನೇನೂ ಹೇಳಲಿಲ್ಲಾಂದ್ರೆ”

ಅಷ್ಟರಲ್ಲಿ ನಾಗರತ್ನಮ್ಮ “ಶಾಂತಮ್ಮನವರು ಆ ಮಾತೇ ಆಡಲಿಲ್ಲ. ನಾನೇ ಹುಡುಗಿ ಅತ್ತೆ ಮನೇ ನೋಡಿಕೊಂಡು ಬರಲಿ ಎಂದು ಕಳಿಸುತ್ತಿದ್ದೇನೆ” ಎಂದರು.

“ಅವಳೇನು ಅತ್ತೇ ಮನೆಯಲ್ಲಿ ಬಾಳಬೇಕೇ ? ಅದನ್ನು ನೋಡಿ ಏನಾಗಬೇಕಾಗಿದೆ” ಅಂತ ಹೇಳಬೇಕು ಎಂದುಕೊಂಡರು. ಸೌಜನ್ಯದಲ್ಲಿ ಚೆನ್ನಾಗಿರುವುದಿಲ್ಲವೆಂದು ಅವರು ಆ ಮಾತು ಹೇಳಲಿಲ್ಲ.

ಪುನಃ ಶಾಂತಮ್ಮನವರೇ “ಮನೆ ಸೊಸೆ ಗೃಹಲಕ್ಷ್ಮಿಯಂತೆ ಮನೆಗೆ ಬರುತ್ತಾಳೆಂದರೆ ನೀವೇಕೆ ಅಡ್ಡೀ ಮಾತು ಹೇಳುತ್ತೀರಿ ?” ಎಂದರು.

ಶಾಮರಾಯರು “ನೀನು ಹೇಳುವುದು ಚೆನ್ನಾಗಿದೆ. ಆ ಹುಡುಗಿ ಬರಬೇಕೆಂದು ನೀವೆಲ್ಲರೂ ಹೇಳುತ್ತಿರುವಂತೆ, ನಾನೊಬ್ಬನು ಮಾತ್ರ ಬೇಡವೆಂದು ಹೇಳುತ್ತಿರುವಂತೆ ಮಾತನಾಡುತ್ತೀಯಲ್ಲಾ. ನಿಮ್ಮ ಮಾತು ಕೇಳಿ ಅವಳೇನೆಂದುಕೊಳ್ಳಬೇಕು ? ಏನು ವಿಷಯ ತಿಳಿದುಕೊಳ್ಳೋಣವೆಂದು ಕೇಳಿದೆ. ಮಗು ಬರುವುದು ನನಗೂ ಇಷ್ಟವೇ” ಎಂದರು.

ಪ್ರಮಿಳೆಯನ್ನು ಕರೆದುಕೊಂಡು ಅವಳ ಅತ್ತೆ ಮಾವ ದೇವನ ಹಳ್ಳಿಗೆ ಪ್ರಯಾಣ ಮಾಡಿದರು.

ದೇವನಹಳ್ಳಿಯಲ್ಲಿ ಶಾಮರಾಯರು ಸಣ್ಣದೊಂದು ಬಾಡಿಗೆ ಮನೆ ಮಾಡಿಕೊಂಡಿದ್ದರು. ಶಾಂತಮ್ಮ ಕೆಲಸ ಕಾರ್ಯದಲ್ಲಿ ಬಹಳ ಅಚ್ಚುಕಟ್ಟಾದ ಹೆಂಗಸು. ಇರುವ ಸಣ್ಣ ಮನೆಯನ್ನೇ ಗುಡಿಸಿ, ಸಾರಿಸಿ ಎಷ್ಟೋ ಒಪ್ಪವಾಗಿ ಇಟ್ಟುಕೊಂಡಿದ್ದರು.

ಮನೆಗಿಂತ ಗುಡಿಭದ್ರ ಎಂಬಂತೆ–ಶಿವನಸಮುದ್ರಕ್ಕಿಂತ, ಕುಮುದೆಯ ಮನೆಗಿಂತ ಈ ಅತ್ತೆ ಮನೆಯೇ ಪ್ರಮಿಳೆಗೆ ಎಷ್ಟೋ ಹಿತವಾಗಿತ್ತು.

ಅತ್ತೇ ಮನೆಗೆ ಹೋಗುತ್ತೇನೆಂದರೆ ಜೈಲಿಗೆ ಹೋಗುವುದು ಎಂದು ಅಂದುಕೊಂಡಿದ್ದ ಪ್ರಮಿಳೆ. ದೇವನಹಳ್ಳಿಗೆ ತನ್ನನ್ನು ಕಳುಹಿಸಲು ಒಳಗೊಳಗೇ ಏರ್ಪಾಟಾಗುತ್ತಿದ್ದುದು ಅವಳ ಕಿವಿಯಲ್ಲಿಯೂ ಬಿದ್ದಿತ್ತು. ನಾಗರತ್ನಮ್ಮನವರ ಮನೆಗೆ ಬಂದಾಗ ಅತ್ತೇ ಮನೆಗೆ ಹೋಗುತ್ತೇನೆಂಬ ಭಾವನೆ ಬರದಿದ್ದ ಪ್ರಮಿಳೆಗೆ ದೇವನ ಹಳ್ಳಿಗೆ ಹೊರಡುವುದೆಂದರೆ ಆ ಭಾವನೆಬಂದಿತು.

ಆದರೆ ಪ್ರಮಿಳೆಯ ಅತ್ತೇ ಮನೆ ಹಾಗಿರಲಿಲ್ಲ. ಸೊಸೆ ನಡೆದರೆ ಎಲ್ಲಿ ಸವೆದು ಹೋಗುತ್ತಾಳೆಯೋ ಎಂದು ವಿಶ್ವಾಸದಿಂದ ನೋಡಿಕೊಳ್ಳುತ್ತಿದ್ದರು. ಶಾಮರಾಯರ ಮನೆಯಲ್ಲಿ ಬೆಳಗಾಗ ಕಾಫೀ ಮಾಡಿಬಿಟ್ಟರೆ ಮಧ್ಯಾಹ್ನ ಊಟದವರೆವಿಗೆ ಇನ್ನೇನೂ ಮಾಡುತ್ತಿರಲಿಲ್ಲ. ಆದರೆ ಪ್ರಮಿಳೆಗೆ ಊಟದ ವರೆವಿಗೂ ತಡೆಯುವುದಕ್ಕಾಗುವುದಿಲ್ಲವೆಂದು ತಿಂಡೀ ಮಾಡಿ ಕೊಡುತ್ತಿದ್ದರು. ಆ ಕಡೇ ಪ್ರಸಿದ್ಧವಾದ ಚಕ್ಕೋತನ ಹಣ್ಣು, ಸೀಬೇ ಹಣ್ಣು, ಫರಂಗೀ ಹಣ್ಣು ಯಾವುದಾದರೊಂದನ್ನು ಸೊಸೆಗಾಗಿ ತೆಗೆದುಕೊಂಡಲ್ಲದೇ ಮಾವ ಮಧ್ಯಾಹ್ನ ಮನೆಗೆ ಹಿಂತಿರುಗುತ್ತಿರಲಿಲ್ಲ.

ಅತ್ತೇ ಮಾವ ಇಷ್ಟೊಂದು ವಿಶ್ವಾಸ ಮಾಡುತ್ತಾರೆಂದೂ, ಸೊಸೆಯನ್ನು ಮಗಳಿಗಿಂತ ಹೆಚ್ಚಾಗಿ ಪ್ರೀತಿಸುತ್ತಾರೆಂದೂ ಪ್ರಮಿಳೆಗೆ ಗೊತ್ತೇ ಇರಲಿಲ್ಲ. ಒಂದೊಂದು ಬಾರಿ "ಯಾರ ಮನೆಯಲ್ಲಿಯೋ ಹುಟ್ಟಿ ಬೆಳೆದ ಹುಡುಗಿಯನ್ನು ಗಂಡ ವಿಶ್ವಾಸ ಮಾಡುವುದಂತೂ ಸಹಜ. ಆದರೆ ಅತ್ತೆ ಮಾವಂದಿರಿಗೆ ಹೇಗೆ ಇಷ್ಟಕ್ಕಿದ್ದಂತೆಯೇ ವಿಶ್ವಾಸವುಂಟಾಗುತ್ತದೆ" ಎಂದು ಯೋಚನೆ ಮಾಡುವಳು. ಆ ಸಮಸ್ಯೆಯನ್ನು ಬಿಡಿಸುವುದು ಅವಳಿಗೆ ಅಸಾಧ್ಯವಾಯಿತು.

ಬೆಳಗಾಗ ಕಾಫೀ, ಸ್ನಾನವಾದ ಮೇಲೆ ತಿಂಡಿಗಳಾದರೆ ಮಧ್ಯಾಹ್ನ ಊಟವಾಗುವವರೆವಿಗೆ ಪ್ರಮಿಳೆಗೆ ಏನೂ ಕೆಲಸವಿರುತ್ತಿರಲಿಲ್ಲ. ಹೋದ ಎರಡು ದಿನ ಒಂದೆರಡು ಸಣ್ಣ ಕೆಲಸಗಳನ್ನು ಮಾಡಲು ಹೋದಳು. ಅದಕ್ಕೆ ಅವ ತ್ತೆ "ಇರುವ ಈ ಇಬ್ಬರಿಗೆ ಅಡಿಗೆ ಮಾಡುವ ನನಗೆ ಸಹಾಯ ಬೇರೇ ಬೇಕೇನಮ್ಮ. ಮುಂದೆ ನಾಲ್ಕು ಮಕ್ಕಳಾದರೆ ಕೈ ತೆರಪಿಲ್ಲದೇ ಕೆಲಸವಿರುತ್ತದೆ. ಅಲ್ಲಿಯವರೆವಿಗೆ ಹಾಯಾಗಿರು" ಎಂದು ಬಿಟ್ಟಿದ್ದರು.

ಪುನಃ ಊಟವಾದ ಮೇಲೂ ಅಷ್ಟೇ. ಕೆಲಸವಿಲ್ಲ. ಬೇಜಾರು. ಸೊಸೆಗೆ ಬೇಜಾರಾಗಿಬಹುದೆಂಬುದು ಅತ್ತೆಯ ಮನಸ್ಸಿಗೆ ಬರದೇ ಇರಲಿಲ್ಲ. ಅದನ್ನು ಕಳೆಯುವ ಯೋಚನೆ ಸಹ ಮಾಡಿದರು. ಅದೇ ಊರಿನ ಸತ್ಯ ನಾರಾಯಣನ ಗುಡಿಯಲ್ಲಿ ಪುರಾಣವಾಗುತ್ತಿತ್ತು. ಮದುವೆಯ ನಿಮಿತ್ತ ತಪ್ಪಿಹೋಗಿತ್ತು. ಈಗ ಊರಿಗೆ ಬಂದನಂತರ ಪುನಃ ಹೋಗುವುದು ಶುರುವಾಗಿತ್ತು.

ಮೊದಲೆರಡು ದಿನ ಪ್ರಮೀಳೆಯನ್ನು ಕರೆದುಕೊಂಡು ಹೋಗಿರಲಿಲ್ಲ.

"ಪ್ರಮೀಳಾ ! ಮನೆಯಲ್ಲಿ ಒಬ್ಬಳೇ ಕುಳಿತುಕೊಂಡು ಏನು ಮಾಡು ತ್ತೀಯೆ ? ಗುಡಿಯಲ್ಲಿ ರಾಮಾಯಣ ಪುರಾಣ ನಡೆಯುತ್ತಿದೆ. ಹೋಗಿ ಬರೋಣ ಬಾ" ಎಂದರು.

ಸಾಯಂಕಾಲ ಮನೆಯಲ್ಲಿಯೇ ಕುಳಿತು ಬೇಜಾರು ಮಾಡಿಕೊಳ್ಳುವು ದಕ್ಕಿಂತಲೂ ಕತೆಯಾದರೂ ಕೇಳಿಕೊಂಡು ಬರೋಣವೆಂದುಕೊಂಡು ಪ್ರಮೀಳೆ ಅವರ ಜೊತೆಯಲ್ಲಿ ಹೋದಳು.

ಪುರಾಣಕ್ಕೆ ಊರಿನ ಅನೇಕ ಮಂದಿ ಸ್ತ್ರೀಯರು ಬಂದಿದ್ದರು. ಸಾಧಾ ರಣವಾಗಿ ಎಲ್ಲರೂ ನಲವತ್ತು ವರ್ಷವನ್ನು ಮೀರಿದ ಹೆಂಗಸರೇ. ಅಲ್ಲಿದ್ದವ ರಲ್ಲಿ ಕಿರಿಯವಳೆಂದರೆ ಪ್ರಮೀಳೆಯೊಬ್ಬಳೇ. ಬಂದಿದ್ದವರಿಗೆಲ್ಲಾ ಶಾಂತಮ್ಮ ನವರ ಪರಿಚಯವಿತ್ತು. ಪುರಾಣದಲ್ಲಿ ಬಹಳ ಆಸಕ್ತರಾದ ಅವರು ಇಷ್ಟೊಂದು ದಿನ ಬರದೇ ತಪ್ಪಿಸಿಕೊಂಡ ಕಾರಣವೂ ಅವರೆಲ್ಲರಿಗೂ ಗೊತ್ತಿತ್ತು. ಪುನಃ ಬಂದ ಶಾಂತಮ್ಮ ಜೊತೆಯಲ್ಲಿ ಹರೆಯದ ಹುಡುಗಿಯನ್ನು ಕರೆತಂದಿರುವು ದನ್ನು ನೋಡಿ ಹೊಸಬಳಾರೆಂಬುದನ್ನು ಸಹ ಊಹೆ ಮಾಡಿದರು. ಆದರೂ ವಿಚಾರಿಸಿ ಶಾಂತಮ್ಮನವರ ಬಾಯಿಂದಲೇ ಅವಳು ಅವರ ಸೊಸೆಯೆಂಬು ದನ್ನು ಹೇಳಿಸಿದರು. ಹುಡುಗಿಯ ತಾಯಿ ತಂದೆ, ಅವರ ಕುಲಗೋತ್ರ, ಇಟ್ಟ ಒಡವೆ ವಸ್ತುಗಳು, ಕೊಂಡ ಸೀರೆಗಳು ಯಾವುದನ್ನೂ ಬಿಡದೇ ಒಂದೊಂದಾಗಿ ಕೇಳಿ ತಿಳಿದುಕೊಂಡರು.

ಮನೆಯಲ್ಲಿ ಬೇಜಾರೆಂದುಕೊಂಡು ಬಂದರೆ ಇಲ್ಲಿಯೂ ಈ ಹೆಂಗಸರು

ಬೇಜಾರು ಮಾಡುತ್ತಾರೆಯಲ್ಲಾ ಎನ್ನಿಸಿತು ಪ್ರಮಿಳೆಗೆ. ಆದರೆ ಅಷ್ಟು ಹೊತ್ತಿಗೆ ನಾರಾಯಣ ಪುರಾಣಿಕರು ಬಂದು ಆ ಮಾತು ನಿಂತಿತು.

ಆದರೆ ಆ ಹೆಂಗಸರು ನಿಲ್ಲಿಸಿದ್ದ ಮಾತು ಪುರಾಣಿಕರು ಆರಂಭಿಸಿದರು.

"ಏನು, ಶಾಂತಮ್ಮನವರೇ ! ಮಗನ ಮದುವೆ ತೀರಿಸಿಕೊಂಡು ಸೊಸೆಯನ್ನು ಕರೆದುಕೊಂಡು ಬಂದಹಾಗಿದೆ" ಎಂದರು ಆತ.

"ಹುಂ. ನಾಲ್ಕು ದಿನದ ಮಟ್ಟಿಗೆ ಬಂದಿದ್ದಾಳೆ"

"ಸರಿ. ಬರಬೇಕಾದ್ದೇ. ಸ್ವಲ್ಪ ತಡವಾದರೂ ಹುಡುಕಿ ಸಾಕ್ಷಾತ್ ಸೀತಾದೇವಿಯಂತಹ ಹುಡುಗಿಯನ್ನೇ ತಂದಿದ್ದೀರಿ" ಎಂದು ಹೇಳಿ ಪುರಾಣಿಕರು ನಿಸ್ಸಂಕೋಚದಿಂದ "ಎಲ್ಲಿ ಮಗು. ನಮಸ್ಕಾರ ಮಾಡು. ಬಾಯಿ ತುಂಬಾ ಆಶೀರ್ವಾದ ಮಾಡುತ್ತೇನೆ" ಎಂದರು.

ಪ್ರಮಿಳೆಯು ಎದ್ದು ನಮಸ್ಕಾರ ಮಾಡಿದಳು. ಪುರಾಣಿಕರು "ದೀರ್ಘ ಸುಮಂಗಲೀ ಭವ" ಎಂದು ಆಶೀರ್ವಾದ ಮಾಡಿದರು.

ಅನಂತರ ಪುರಾಣ ಆರಂಭವಾಯಿತು.

ನಾರಾಯಣ ಪುರಾಣಿಕರು ಪುರಾಣ ಆರಂಭಿಸಿ ತಿಂಗಳು ದಿನಗಳು ಮಾತ್ರ ಆಗಿದ್ದವು. ಉತ್ತರಕಾಂಡದಲ್ಲಿ ಸೀತಾ ಪರಿತ್ಯಾಗ ಪ್ರಸಂಗವನ್ನು ಹೇಳುತ್ತಿದ್ದರು. ಲೋಕಾಪವಾದದಿಂದ ಭೀತನಾದ ಶ್ರೀರಾಮಚಂದ್ರ ಜಾನಕಿಯನ್ನು ಲಕ್ಷ್ಮಣನೊಂದಿಗೆ ಕಾಡಿಗೆ ಕಳಿಸಿ ಬಿಡುತ್ತಾನೆ. ಲಕ್ಷ್ಮಣ ಅತ್ತಿಗೆಯನ್ನು ಬಿಟ್ಟು ಹೊರಟುಹೋಗುತ್ತಾನೆ. ಸೀತೆ ಕಾಡಿನಲ್ಲಿ ಗೋಳಾಡುತ್ತಿರುತ್ತಾಳೆ.

ಪುರಾಣಿಕರದು ಒಳ್ಳೆಯ ಕಂಠ. ವಾಲ್ಮೀಕಿ ರಾಮಾಯಣದ ಶ್ಲೋಕಗಳನ್ನು ಸುಶ್ರಾವ್ಯವಾಗಿ ಹೇಳುತ್ತಾ ಎಲ್ಲರಿಗೂ ತಿಳಿಯುವಂತೆ ಸರಳವಾಗಿ ಅರ್ಥವನ್ನು ಹೇಳುತ್ತಿದ್ದರು. ಅವರು ಹೇಳುತ್ತಿದ್ದ ತರಹದಲ್ಲಿ ದಿನಕ್ಕೆ ಇಪ್ಪತ್ತು ಶ್ಲೋಕಗಳಷ್ಟು ಸಹ ಮುಂದೆ ಹೋಗುತ್ತಿರಲಿಲ್ಲ. ಕೇಳುತ್ತಿದ್ದವರೆಲ್ಲರೂ ಸೀತೆಯ ಕಷ್ಟಕ್ಕಾಗಿ ಕಣ್ಣೀರಿಡುತ್ತಾ ಕುಳಿತಿದ್ದರು.

ಒಂದೂವರೆ ಗಂಟೆಗಳ ಕಾಲ ಪುರಾಣ ಹೇಳಿ, ವಾಲ್ಮೀಕಿಗಳು ಬಂದು ಸೀತೆಯನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋದರು–ಎಂಬ ಮುಂದಿನ ಭಾಗವನ್ನು ಸ್ವಲ್ಪ ಓದಿ ಹೇಳಿ ಮಂಗಳಾರತಿಯನ್ನು ಮಾಡಿ ಮುಗಿಸಿದರು.

ನೆರೆದಿದ್ದ ಹೆಂಗಸರು ಮೊದಲು ಬೇಜಾರಾಗುವಂತೆ ಮಾತನಾಡಿದರೂ ಪುರಾಣವು ಪ್ರಮಿಳೆಗೆ ಬಹಳ ಪ್ರಿಯವಾಯಿತು. ಅವಳದರಿಂದ ಪ್ರಭಾವಿತ ಳಾದಳು. ಪುರಾಣವೆಂದರೆ ಇಷ್ಟು ಚೆನ್ನಾಗಿರುತ್ತದೆ – ಎಂದು ಅವಳಿಗೆ ಗೊತ್ತೇ ಇರಲಿಲ್ಲ.

ಅತ್ತೆ ಸೊಸೆಯರು ಮನೆಗೆ ಬಂದು ಸೇರುವ ವೇಳೆಗೆ ಏಳು ಗಂಟೆಯಾ ಗಿತ್ತು. ಶಾಮರಾಯರು ಜಗುಲಿಯ ಮೇಲೆ ಕುಳಿತಿದ್ದರು. ಪ್ರಮಿಳೆ ಮುಂದೆಮುಂದೆ ನಡೆದು ಮೊದಲು ಮನೆಯನ್ನು ಪ್ರವೇಶಿಸಿದಳು.

ಹಿಂದಿನಿಂದ ನಿಧಾನವಾಗಿ ನಡೆದು ಬಂದ ತಮ್ಮ ಹೆಂಡತಿಯನ್ನು ಕುರಿತು ಶಾಮರಾಯರು "ಸ್ನೇಹಿತರಿಗೆಲ್ಲಾ ತೋರಿಸಿಕೊಂಡು ಬರಲು ಸೊಸೆ ಯನ್ನು ಕರೆದುಕೊಂಡು ಹೋಗಿದ್ದಂತೆ ಕಂಡು ಬರುವುದಲ್ಲಾ" ಎಂದು ನಗುತ್ತಾ ಕೇಳಿದರು.

"ನಿಮ್ಮದು ಯಾವಾಗಲೂ ಹೀಗೇ! ಇಲ್ಲದ ಅರ್ಥ ಮಾಡುತ್ತೀರಿ. ಏನೋ ಮನೆಯಲ್ಲಿ ಬೇಜಾರು ಎಂದು ಹೇಳಿದಳು. ದೇವರನಾಮ ಕಿವಿ ಯಲ್ಲಿ ಬಿದ್ದರೆ ಇಹಕ್ಕೂ ಪರಕ್ಕೂ ಒಳ್ಳೆಯದೆಂದು ಕರೆದುಕೊಂಡು ಹೋದೆ. ಬೇಕಾದವರು ತಾವೇ ಬಂದು ನೋಡಿಕೊಂಡು ಹೋಗುತ್ತಾರೆ. ನಾನು ಕರೆದುಕೊಂಡು ಹೋಗಿ ತೋರಿಸಿಕೊಂಡು ಬರಬೇಕೆನ್ನುವುದೇನು ?"

"ಏನೋ ಹಾಗೆನ್ನಿಸಿತು, ಕೇಳಿದೆ. ಅಷ್ಟೇ. ನೀವುಗಳು ಬಂದಿರಲ್ಲ. ಹಾಗೇ ದೇವಸ್ಥಾನದ ಕಡೆ ಹೋಗಿ ಬರುತ್ತೇನೆ" ಎಂದು ಹೇಳಿ ಅತ್ತ ಹೊರಟರು.

ಹೋಗುತ್ತಾ "ಅಬ್ಬಾ! ಈ ಶಾಂತಳಿಗೆ ಸಂಸಾರದಲ್ಲಿ ಎಷ್ಟೊಂದು ಆಸೆ" ಎಂದುಕೊಂಡರು.

ಮಾರನೆಯ ದಿನ ಶಾಂತಮ್ಮ ಪುರಾಣಕ್ಕೆ ಹೊರಡುವ ವೇಳೆಯಲ್ಲಿ ಶಾಮರಾಯರು ಹಜಾರದಲ್ಲಿಯೇ ಕುಳಿತಿದ್ದರು. ಹಿಂದಿನ ದಿನ ಗಂಡ ಹಾಗೆಂದ ಮೇಲೆ ಪ್ರಮಿಳೆಯನ್ನು ಕರೆದುಕೊಂಡು ಹೋಗಲು ಆಕೆಗೆ ಸಂಕೋಚವಾಯಿತು. ಶಾಂತಮ್ಮ ಹೊರಡುವಾಗ ಸೊಸೆಯನ್ನು ಕರೆಯ ಲಿಲ್ಲ.

ಪ್ರಮೀಳೆಗೆ ಪುರಾಣ ಕೇಳಲು ಆಸಕ್ತಿಯಿತ್ತು.

ಅವಳು ಮೆಲ್ಲನೆಯ ದನಿಯಲ್ಲಿ "ನಾನೂ ಬರುತ್ತೇನತ್ತೆ" ಎಂದಳು.

ಶಾಂತಮ್ಮ ಹೊರಗೆ ಕುಳಿತಿರುವ ಗಂಡನ ಕಿವಿಗೆ ಬೀಳುವಂತೆ "ಬೇಡಮ್ಮ, ನೀನು ಮನೆಯಲ್ಲಿಯೇ ಇರು. ನಿನ್ನೆಯ ದಿನ ನಿಮ್ಮ ಮಾವನವರು ಹೇಳಿದ್ದು ಕೇಳಿದೆಯೋ ಇಲ್ಲವೋ ?" ಎಂದರು.

ಹೊರಗಡೆ ಕುಳಿತಿದ್ದ ಶಾಮರಾಯರು "ನಾನು ತಮಾಷೆಗಾಗಿ ಅಂದುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಡ ಶಾಂತ. ಅವಳನ್ನು ಕರೆದುಕೊಂಡು ಹೋಗು. ಬೆಂಗಳೂರಿನಲ್ಲಿ ಪುರಾಣವೇ, ಪುಣ್ಯಕತೆಯೆ ?" ಎಂದರು.

ಅತ್ತೆ ಸೊಸೆಯರಿಬ್ಬರೂ ಹೊರಟರು. ಅಂದಿನಿಂದ ಸೊಸೆಯನ್ನು ಪುರಾಣಕ್ಕೆ ಕರೆದುಕೊಂಡು ಹೋಗಲು ಶಾಂತಮ್ಮನವರಿಗೆ ಸಂಕೋಚವಾಗುತ್ತಿರಲಿಲ್ಲ.

ಸೊಸೆ ಬಂದ ದಿನವೇ ಶಾಂತಮ್ಮನವರು ಬೆಳಗಾಗ ಸ್ನಾನವಾದ ಮೇಲೆ ತುಲಸೀ ಪೂಜೆಯನ್ನು ಮಾಡಬೇಕೆಂದು ಹೇಳಿದ್ದರು.

ಪ್ರಮೀಳೆ ದೇವನಹಳ್ಳಿಗೆ ಬಂದು ಐದಾರು ದಿನಗಳಾಗಿದ್ದವು. ಬೆಳಗಾಗ ಸ್ನಾನವಾದನಂತರ ತುಲಸೀ ಪೂಜೆ ಮಾಡುತ್ತಿದ್ದಳು. ತುಲಸಿಯ ಮುಂದೆ ಎರಡು ಸೊಡಿಲು ಹಚ್ಚಿಟ್ಟು, ಕಟ್ಟೆಗೆ ಅರಶಿನ ಕುಂಕುಮ ಹಚ್ಚಿ, ಗಿಡಕ್ಕೆ ಮಂಗಳಾರತಿ ಬೆಳಗಿ, ತುಲಸಿಯ ಬುಡದಲ್ಲಿನ ತೀರ್ಥ ತಲೆಯ ಮೇಲೆ ಪ್ರೋಕ್ಷಣೆ ಮಾಡಿಕೊಂಡು, ತೆಗೆದುಕೊಳ್ಳುವವರೆವಿಗೆ ಒಂದಾದ ಮೇಲೆ ಒಂದರಂತೆ ಯಾಂತ್ರಿಕವಾಗಿ ಮಾಡಲು ಬೇಜಾರಾಗಿ ದಿನವೂ ಕೂನುರಾಗದಲ್ಲಿ ಹಾಡು ಹೇಳುವುದು ಪದ್ಧತಿ. ಆ ದಿನ ಮಾವ ಮನೆಯಲ್ಲಿರಲಿಲ್ಲ. ಅತ್ತೆ ಎಲ್ಲಿಯೋ ಹೋಗಿದ್ದರು. ಅದರ ಮೇಲೆ ಆ ಮನೆಯು ಬಳಕೆಯಾಗಿತ್ತು. ಆದರಿಂದ ಹಾಡು ಸ್ವಲ್ಪ ಗಟ್ಟಿಯಾಗಿ ಬಾಯಲ್ಲಿ ಬಂದಿತು. ಏತಕ್ಕಾಗಿಯೋ ಹೊರಗಡೆ ಬಂದ ಶಾಂತಮ್ಮನವರ ಕಿವಿಯಲ್ಲಿ ಅದು ಬಿತ್ತು. ಅವರು ಕೇಳುತ್ತಾ ನಿಂತಿದ್ದರು.

ಅತ್ತೆ ತಾನು ಹೇಳುತ್ತಿದ್ದ ಹಾಡು ಕೇಳುತ್ತಾ ನಿಂತಿದ್ದಾರೆಂಬುದನ್ನು

ಪೂಜೆ ಮುಗಿಸಿಕೊಂಡು ಬಂದ ಪ್ರಮಿಳೆ ಗ್ರಹಿಸಿ ನಾಚಿಕೆಯಿಂದ ತಲೆ ತಗ್ಗಿಸಿದಳು.

ಆಗ ಶಾಂತಮ್ಮನವರು "ಪ್ರಮಿಳಾ. ಆ ದಿನ ನಾವು ನಿನ್ನ ಸೋದರತ್ತೆ ಮನೆಯಲ್ಲಿ ನೋಡಿದ ದಿನ ಕುಳಿತು ಹಾಡಿದೆಯಲ್ಲಾ. ಆಗಲೇ ನಿನ್ನ ಧ್ವನಿ ಚೆನ್ನಾಗಿದೆ ಎಂದುಕೊಂಡೆ. ನೀನು ಈಗಿನ ಕಾಲದವರಂತೆ ತಾತ್ಸಾರ ಮಾಡದಿದ್ದರೆ ತುಲಸೀ ಪೂಜೆಯ ಹಾಡು ಹೇಳಿಕೊಡುತ್ತೇನೆ" ಎಂದರು.

"ಆಗಲಿ ಅತ್ತೆ ಕಲಿತುಕೊಳ್ಳುತ್ತೇನೆ"

"ಆದರೆ ಒಂದು ಮಾತು. ನಿಮ್ಮ ಮಾವನವರಿಗೆ ತಿಳಿಯದಂತೆ ಗುಟ್ಟಾಗಿ ಕಲಿತುಕೊಳ್ಳಬೇಕು. ಅವರ ಕಿವಿಗೆ ಬಿದ್ದರೆ ಅವಮಾನ ಮಾಡುತ್ತಾರೆ"

ಪ್ರಮಿಳೆ "ಹೂಂ" ಎಂದಳು. ಆ ದಿನ ಮಧ್ಯಾಹ್ನದಿಂದಲೇ ಭೋಜನಾ ನಂತರದಲ್ಲಿ ಗಂಡ ಮಲಗಿಕೊಳ್ಳುತ್ತಲೇ ಶಾಂತಮ್ಮ ಸೊಸೆಗೆ ಹಾಡು ಹೇಳಿ ಕೊಡಲು ಆರಂಭಿಸಿದರು. ಆ ದಿನ ಒಂದು ಬಾರಿ ಸ್ವಲ್ಪ ಸ್ವಲ್ಪವಾಗಿ ತಾವು ಹೇಳಿ ಅವಳಿಂದ ಹೇಳಿಸಿದರು.

ಒಂದೇ ದಾಟಿಯಲ್ಲಿ ಹೇಳುವ ಹಳೆಯ ಕಾಲದ ಹಾಡು. ಬೀಕ್ಕಾಲಿ ಗೌಡಮ್ಮಂದಿರು ಹೇಳುವ ತರಹದ್ದು. ಆದರೆ ತುಲಸೀ ಪೂಜೆ ಮಾಡುತ್ತೇನೆಂಬ ಸಂಕಲ್ಪದಿಂದ ಹಿಡಿದು ನೋಡಲು ಹಚ್ಚುವುದು ಇತ್ಯಾದಿ ಪೂಜಾ ಕಾರ್ಯಗಳೆಲ್ಲವನ್ನೂ ಒಳಗೊಂಡು ತೀರ್ಥ ತೆಗೆದುಕೊಳ್ಳುವವರೆವಿಗೆ ಪ್ರತಿಯೊಂದೂ ಅದರಲ್ಲಿ ಅಡಕವಾಗಿತ್ತು. ಯಾರೋ ಚತುರೆಯಾದ ಹೆಂಗಸು ಕಟ್ಟಿದ ಹಾಡು.

ಶಾಂತಮ್ಮನವರು ನೆನಸಿದ್ದು ಒಂದಲ್ಲ, ಆದಾದದ್ದು ಒಂದಲ್ಲ. ಈ ವಿಷಯ ಶಾಮರಾಯರಿಗೆ ಗೊತ್ತೂ ಆಯಿತು. ಅವರು ತಮಾಷೆಮಾಡಿಯೂ ಮಾಡಿದರು.

"ಶಾಂತಾ ! ನಿನ್ನ ಹಾಡುಗಳು ನಿನ್ನೊಡನೆಯೇ ಹೋಗಬಾರದು, ಎಲ್ಲವನ್ನೂ ನಿನ್ನ ಸೊಸೆಗೆ ಹೇಳಿ ಕೊಟ್ಟುಬಿಡು" ಎಂದರು.

ಆಕೆ ಹುಸಿಕೋಪದಿಂದ "ಆಗಲಿ ಹೇಳಿಕೊಡುತ್ತೇನೆ. ನನ್ನ ಹಾಡು

ಗಳನ್ನು ಕಲಿತುಕೊಳ್ಳುವುದರಿಂದ ಅವಳಿಗೆ ಕೆಟ್ಟದ್ದೇನೂ ಆಗುವುದಿಲ್ಲ" ಎಂದು ಉತ್ತರ ಹೇಳಿದಳು.

ಪ್ರಮೀಳೆಗೆ ಅತ್ತೆಯ ಮನೆಯ ವಾಸವು ಬಹಳ ಪ್ರಿಯವಾಗಿತ್ತು. ಹೋಗಲು ಮನಸ್ಸಾಗುವಂತೆಯೇ ಇರಲಿಲ್ಲ. ಆದರೆ ಆಗಾಗ ಗಂಡನ ಜ್ಞಾಪಕ ಬರುತ್ತಿತ್ತು. ಆಗೆಲ್ಲಾ "ಅವರು ಇಲ್ಲಿಯೇ ಇದ್ದಿದ್ದರೆ ಅಥವಾ ಈ ಅತ್ತೆ ಮಾವಂದಿರು ಬೆಂಗಳೂರಿನಲ್ಲಿಯೇ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು" ಎಂದುಕೊಳ್ಳುತ್ತಿದ್ದಳು.

ಸುಮಾರು ಹದಿನೈದು ದಿನ ಕಳೆದ ಮೇಲೆ ಒಂದು ಮಧ್ಯಾಹ್ನ ಊಟ ಮಾಡುತ್ತಾ ಶಾಮರಾಯರು "ಪ್ರಮೀಳೆಯನ್ನು ಬೆಂಗಳೂರಿಗೆ ಕಳಿಸದೇ ಇಲ್ಲಿಯೇ ಇಲ್ಲಿಯೇ ಇಟ್ಟುಕೊಂಡಿರಬೇಕು ಎಂದಿದ್ದೀಯೋ" ಎಂದರು.

ಪ್ರಮೀಳೆಯನ್ನು ಬೆಂಗಳೂರಿಗೆ ಕಳಿಸಬೇಕು–ಎನ್ನುವ ಅಭಿಪ್ರಾಯ ಶಾಂತಮ್ಮನವರ ಮನಸ್ಸಿನಲ್ಲಿ ಬಂದೇ ಇರಲಿಲ್ಲ. ಅವಳು ಬೆಂಗಳೂರಿಗೆ ಹೋಗಬೇಕು ಎನ್ನುವ ಯೋಚನೆ ಬಂದಾಗ ಇನ್ನೆರಡು ದಿನ ಇರಲಿ ಎಂದುಕೊಳ್ಳುತ್ತಿದ್ದರು. ಅವರ ಮಗಳು ಗಂಡನ ಮನೆಗೆ ಹೋಗಿ ಹತ್ತು ವರ್ಷವಾಗಿತ್ತು. ಅವಳು ಬಳ್ಳಾರಿಯಲ್ಲಿದ್ದುದರಿಂದ ಮಗಳು ತವರುಮನೆಗೆ ಬರುವುದು ಅಪರೂಪ. ಮೊದಲ ಹೆರಿಗೆಗೆ ಬಂದಿದ್ದಳು. ಎರಡನೆಯ ಬಾಣಂತನ ಅಲ್ಲಿಯೇ ಮಾಡಿಕೊಳ್ಳುವುದಾಗಿ ಬರೆದು ಬಿಟ್ಟಿದ್ದಳು. ಈಗ ಪ್ರಮೀಳೆ ಬಂದಿದ್ದು ಶಾಂತಮ್ಮನವರಿಗೆ ಆಡುವುದಕ್ಕೆ ಒಂದು ಗೊಂಬೆ ಸಿಕ್ಕಿದ ಹಾಗಾಗಿತ್ತು. ತಾವು ಹೇಳಿದ್ದಕ್ಕೆಲ್ಲಕ್ಕೂ "ಹುಂ" ಎನ್ನುವ ಗೆಳತಿ ಸಿಕ್ಕಿದಂತಾಗಿತ್ತು.

"ಕಳಿಸಬೇಕು. ಇಲ್ಲಿಯೇ ಇಟ್ಟುಕೊಂಡರೆ ಆಗುತ್ತದೆಯೆ? ಇನ್ನೂ ಲವಕುಶರ ಯುದ್ಧ ನಡೆಯುತ್ತಿದೆ. ಸೀತೆ ತಪೋವನವಲ್ಲಿಯೇ ಇದ್ದಾಳೆ. ಅವರಮ್ಮ ಮಗಳನ್ನು ಒಪ್ಪಿಸಿಕೊಳ್ಳಲಿ. ಲವಕುಶರು ತಂದೆಯ ಬಳಿ ಸೇರಲಿ. ಅನಂತರ ಪ್ರಮೀಳೆಯನ್ನು ಕಳಿಸಿಬಿಡೋಣ ಎಂದಿದ್ದೇನೆ"

"ಬಿಡು ಬಿಡು, ಆ ನಾರಾಯಣನ ಪುರಾಣವನ್ನು ನೆಚ್ಚಿಕೊಂಡರೆ ಯಾವುದೂ ಆಗುವುದಿಲ್ಲ. ಅವನು ಸುಮ್ಮನೆ ಬೆಳೆಸಿಕೊಂಡು ಹೋಗುತ್ತಾನೆ"

"ಅವರನ್ನೇಕೆ ಅಂದು ಪಾಪ ಕಟ್ಟಿಕೊಳ್ಳುತ್ತೀರಿ. ಆ ಮಹಾ ತಾಯಿ ಕಷ್ಟದಲ್ಲಿರುವಾಗ ಪುರಾಣ ಕೇಳುವುದನ್ನು ನಿಲ್ಲಿಸಿದರೆ ಒಳ್ಳೆಯದಾಗುವುದಿಲ್ಲ"

"ಏನು ಮಾಡುತ್ತೀಯೋ ಮಾಡು. ಅಂತೂ ಆದಷ್ಟು ಬೇಗ ಕಳುಹಿದರೆ ಒಳ್ಳೆಯದು"

ಊಟವಾಗಿ ಮಾವನವರು ಹಜಾರದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದಾಗ ಪ್ರಮಿಳೆ ಕೇಳಿದಳು.

"ಅತ್ತೆಮ್ಮ, ಸೀತೆಯನ್ನು ಅವರಮ್ಮ ಒಪ್ಪಿಸಿಕೊಳ್ಳುವುದು ಎಂದಿರಲ್ಲಾ, ಹಾಗೆಂದರೇನು?

"ನಿನಗೆ ರಾಮಾಯಣವೇ ಗೊತ್ತಿಲ್ಲವೇನೇ?"

"ಗೊತ್ತಿದೆ. ಈ ವಿಷಯ ಗೊತ್ತಿಲ್ಲ.

"ಈಗಿನ ಕಾಲದವರು. ನಿಮಗೆಲ್ಲಿ ಗೊತ್ತಿರುತ್ತದೆ, ಬಿಡು. ಯಜ್ಞಾಶ್ವವನ್ನು ತೆಗೆದುಕೊಂಡು ಹೋದ ಶ್ರೀ ರಾಮಚಂದ್ರನು ಅಶ್ವಮೇಧ ಮಹಾ ಯಾಗವನ್ನು ಮಾಡುತ್ತಾನೆ. ಆ ಯಾಗಮಂಟಪಕ್ಕೆ ಲವಕುಶರು ಬಂದು ವಾಲ್ಮೀಕಿ ಮಹರ್ಷಿಗಳು ಬರೆದ ರಾಮಾಯಣದ ಶ್ಲೋಕಗಳನ್ನು ಹಾಡುತ್ತಾರೆ. ಆಶ್ಚರ್ಯಕರವಾಗಿ ತನ್ನ ಕತೆಯನ್ನೇ ಹೇಳುವ ಮುದ್ದು ಬಾಲಕರು ಯಾರೆಂದು ರಾಮ ಕೇಳುತ್ತಾನೆ. ಅವನು ತನ್ನ ಕುಮಾರಕರೆಂದು ತಿಳಿದು ಅವನಿಗೆ ಸಂತೋಷವಾಗುತ್ತದೆ. ಪುನಃ ಕಾಡಿಗೆ ಅಟ್ಟಿದ ತನ್ನ ಪತ್ನಿಯ ನೆನಪು ಬರುತ್ತದೆ. ಅವಳನ್ನು ಕರೆಸಬೇಕೆಂದು ಯಾಗಮಂಟಪಕ್ಕೆ ಕರೆಸುತ್ತಾನೆ ಆದರೆ ಸ್ವೀಕರಿಸಬೇಕೆಂದಿರುವಾಗ ಲೋಕಾಪವಾದಕ್ಕೆ ಹೆದರಿ ಪುನಃ ತಿರಸ್ಕರಿಸುತ್ತಾನೆ. ಸೀತೆ ಆಗ "ಅಮ್ಮಾ, ನನ್ನನ್ನು ಕರೆದುಕೋ" ಎಂದು ಕೂಗುತ್ತಾಳೆ. ಪ್ರಮಿಳಾ, ಸೀತೆಯು ಭೂಮಾತೆಯ ಮಗಳೆಂಬುದನ್ನು ಬಲ್ಲೆಯಷ್ಟೆ. ಭೂಮಿಯು ಬಿರಿದು ಇಬ್ಭಾಗವಾಗಿ ಒಳಗಿನಿಂದ ರತ್ನಸಿಂಹಾಸನವೊಂದು ಮೇಲೆದ್ದು ಬರುತ್ತದೆ. ಸೀತಾದೇವಿಯು ಅದರಲ್ಲಿ ಕುಳಿತುಕೊಳ್ಳುತ್ತಾಳೆ. ಸಿಂಹಾಸನ ಒಳಗೆ ಹೋಗಿ ಭೂಮಿಯು ಮುಚ್ಚಿಕೊಳ್ಳುತ್ತದೆ"

ಕತೆಯನ್ನು ಕೇಳುತ್ತಾ ಕೇಳುತ್ತಾ ಪ್ರಮಿಳೆಯು ನಿಶ್ಚೇಷ್ಟಿತೆಯಾಗಿ ಕುಳಿತುಕೊಂಡಳು ತಾವು ಇದುವರೆವಿಗೂ ಹೇಳಿದ ಕತೆಯನ್ನು ಅವಳು

ಕೇಳುತ್ತಿದ್ದಾಳೆಯೋ ಅಥವಾ ತೂಕಡಿಸುತ್ತಿದ್ದಾಳೆಯೋ ಎಂದು ಶಾಂತಮ್ಮನವರಿಗೆ ಸಂದೇಹವು ಬಂದಿತು.

ಅವರು "ನಾನು ಹೇಳಿದ್ದು ಕೇಳುತ್ತಿದ್ದೀಯಾ, ಪ್ರಮಿಳಾ" ಎಂದಳು.

ಪ್ರಮಿಳೆ ಎಚ್ಚೆತ್ತು "ಕೇಳುತ್ತಿದ್ದೇನೆ, ಅತ್ತೆಮ್ಮಾ" ಎಂದಳು.

"ಅಲ್ಲಾ. ಒಂದು ತರಹವಾಗಿ ಕುಳಿತುಕೊಂಡಿದ್ದೆಯಲ್ಲಾ. ತೂಕಡಿಕೆ ಏನೋ ಅಂದುಕೊಂಡೆ"

"ಚೆನ್ನಾಯಿತು. ನೀವು ಕತೆಯನ್ನು ಹೇಳುತ್ತಿದ್ದರೆ ತೂಕಡಿಸುವುದಕ್ಕೆ ನನಗೇನು ಸ್ವಲ್ಪವೂ ಜ್ಞಾನವಿಲ್ಲವೇ? ಲೋಕಮಾತೆಯಾದ ಸೀತಾದೇವಿಗೂ ಎಂತಹ ಕಷ್ಟ ಬಂದಿತೆಂದು ಯೋಚನೆ ಮಾಡುತ್ತಿದ್ದೇನೆ"

ಶಾಂತಮ್ಮನವರು ಲೋಕಾಭಿರಾಮವಾಗಿ "ಹೌದಮ್ಮ. ಲೋಕಾಪವಾದ ಯಾರಿಗೂ ತಪ್ಪಿದ್ದಲ್ಲ. ಎಲ್ಲರೂ ಅದಕ್ಕೆ ಭಯಪಡಲೇಬೇಕು" ಎಂದು ಹೇಳಿದರು.

ಲೋಕಮಾತೆಯ ಕಷ್ಟ ಕಳೆಯುವವರೆವಿಗೆ ಶಾಂತಮ್ಮನವರು ಸೊಸೆಯನ್ನು ಬೆಂಗಳೂರಿಗೆ ಕಳುಹಿಸುವ ವಿಷಯ ಮನಸ್ಸಿಗೆ ತಂದುಕೊಳ್ಳಲೇ ಇಲ್ಲ.

ನಾರಾಯಣ ಪುರಾಣಿಕರ ಪುರಾಣ ಯಥಾವತ್ತಾಗಿ ಸಾಗಿತ್ತು.

ಭೂಜಾತೆಯಾದ ಸೀತೆಯು ಭೂಮಿಯಲ್ಲಿಯೇ ಐಕ್ಯಳಾದಳು. ಎರಡು ಗಳಿಗೆಗಳ ಮೊದಲು ಶ್ರೀರಾಮ ಅವಳನ್ನು ತಿರಸ್ಕರಿಸಿದ್ದ. ರಾಘವನು ತಿರಸ್ಕರಿಸದೇ ಇದ್ದಿದ್ದರೆ ಸೀತೆಯು ತಾಯಿಯನ್ನು ಕೂಗುತ್ತಲೂ ಇರಲಿಲ್ಲ. ಅವಳು ಬಂದು ಮಗಳನ್ನು ಕರೆದುಕೊಂಡು ಹೊಗುತ್ತಲೂ ಇರಲಿಲ್ಲ. ಆದರೆ ಸೀತೆಯು ತಾಯಿಯನ್ನು ಕೂಡಿಕೊಂಡು ಹೊರಟು ಹೋದಕೂಡಲೇ ರಾಮನಿಗೆ ಕೆಂಡಾಮಂಡಲವಾಗಿ ಕೋಪಬಂದಿತು. "ನನ್ನ ಹೆಂಡತಿಯನ್ನು ಕರೆದುಕೊಂಡು ಹೋಗಲು ಈ ಭೂಮಿಗೆಷ್ಟು ಧೈರ್ಯ. ಈ ಭೂಮಿಯನ್ನು ಭೇಧಿಸಿ ನನ್ನ ಹೆಂಡತಿಯನ್ನು ವಾಪ್ಸು ಪಡೆಯುತ್ತೇನೆ" ಎಂದು ಸಂಕಲ್ಪಮಾಡಿ ಧನುಸ್ಸನ್ನು ಕೈಗೆತ್ತಿಕೊಂಡು ಬಾಣವನ್ನು ತೊಡುತ್ತಾನೆ. ಆಗ ದೇವಾಧಿದೇವತೆಗಳು ಬಂದು ರಾಮನಿಗೆ ಸಮಾಧಾನವನ್ನು ಹೇಳುತ್ತಾರೆ.

ಅನಂತರ ಅವನು ತನ್ನ ಮಕ್ಕಳನ್ನು ಪರಿಗ್ರಹಿಸುತ್ತಾನೆ. ಸಪುತ್ರ ಸಮೇತನಾಗಿ ಅಯೋಧ್ಯೆಗೆ ಹಿಂತಿರುಗುತ್ತಾನೆ.

ಹೀಗೆ ಪುರಾಣವು ಒಂದು ಸ್ಥಿತಿಗೆ ಬಂದನಂತರ ಶಾಂತಮ್ಮನವರು ಸೊಸೆಗೆ ಹೇಳಿ ಮಗನಿಗೆ ಕಾಗದ ಬರೆಸಿದರು. ಅವಳು ಬರೆದ ಕಾಗದವನ್ನು ಓದುವುದಕ್ಕೆ ಹೇಳಿದರು. ಹೊಸದಾಗಿ ಮದುವೆಯಾದ ಹೆಂಡತಿಯು ಗಂಡ ನಿಗೆ ಬರೆದ ಕಾಗದ. ಮೊದಲಿನಿಂದ ಕಡೆಯವರೆಗೆ ಓದಿ ಹೇಳುವಂತಿರಲಿಲ್ಲ. ಓದಬಹುದಾದಷ್ಟನ್ನು ಓದಿ ಹೇಳಿದಳು.

ಪೋಸ್ಟ್ ಮಾಡುವ ಮೊದಲು ಶಾಂತಮ್ಮನವರು ಮತ್ತೊಂದು ವಿಷ ಯವನ್ನು ನೆನೆಸಿಕೊಂಡು ಬರೆಯುವಂತೆ ಹೇಳಿದರು.

"ಪ್ರಮಿಳಾ. ಅವನಿಗೆ ಬರಿ. ಒಂದು ದಿನದಮಟ್ಟಿಗೆ ಬಂದು ಕರೆದು ಕೊಂಡು ಹೋಗುವುದಾದರೆ ಅವನು ಬರುವುದೇ ಬೇಡ. ನಾನೇ ಕರೆದು ಕೊಂಡು ಹೋಗಿ ಬಿಟ್ಟು ಬರುತ್ತೇನೆ. ಪುರಸೊತ್ತಾಗಿ ನಾಲ್ಕೈದು ದಿನಗಳು ಇರುವುದು ಸಾಧ್ಯವಾದರೆ ಬಾ ಎಂದು ಬರಿ"

ಹಾಗೆಯೇ ಬರೆದಳು ಪ್ರಮಿಳೆ.

ಆ ಕಾಗದವನ್ನು ಓದಿ ಗೋವಿಂದರಾಯನಿಗೆ ನಗುಬಂದಿತು. ನಾಲ್ಕು ದಿನ ರಜಾ ತೆಗೆದುಕೊಂಡು ದೇವನಹಳ್ಳಿಗೆ ಬಂದ.

ಮದುವೆಯಾಗುವುದೇ ಇಲ್ಲವೆಂದು ಮಗ ಹಿಡಿದಿದ್ದ ಹಟದಲ್ಲಿ ಹೀಗೆ ಮಗ ಸೊಸೆಯನ್ನು ಕಣ್ತುಂಬಾ ನೋಡುತ್ತೇನೆಂಬ ನಂಬಿಕೆಯೇ ಶಾಂತ ಮ್ಮನವರಿಗೆ ಇರಲಿಲ್ಲ. ಮಗ ಬಂದದ್ದು, ಅದರಲ್ಲಿಯೂ ತಾವು ಬರೆಸಿದಂತೆ ನಾಲ್ಕೈದು ದಿನಗಳು ಪುರಸೊತ್ತು ಮಾಡಿಕೊಂಡು ಬಂದುದು ಅವರಿಗೆಷ್ಟೋ ಸಂತೋಷವಾಯಿತು.

ಗೋವಿಂದರಾಯ ಬೆಳಗಾಗಿ ಬಸ್ಸಿಗೆ ಹೊರಟು ಹತ್ತು ಗಂಟೆಯ ವೇಳೆಗೆ ದೇವನಹಳ್ಳಿಗೆ ಬಂದು ಸೇರಿದ.

ತಂದೆ ಒಂದೆರಡು ಯೋಗಕ್ಷೇಮದ ಮಾತುಗಳನ್ನು ಕೇಳಿ "ಸಂತೋಷ" ಎಂದುಬಿಟ್ಟರು. ಅವನಿಗೆ ತಂದೆಯ ಬಳಿ ಯಾವಾಗಲೂ ಅಷ್ಟಷ್ಟೆ. ತಂದೆ

ಮಕ್ಕಳಿಗೆ ಹೆಚ್ಚು ಸಲಿಗೆ ಇರಲಿಲ್ಲ. ಬಟ್ಟೆಬರೆಗಳನ್ನು ಬಿಚ್ಚಿಟ್ಟು ಕೈಕಾಲುಗಳನ್ನು ತೊಳೆದುಕೊಂಡು ಅಡಿಗೆಯ ಮನೆಗೆ ಬಂದು ಕುಳಿತುಕೊಂಡ.

ಶಾಂತಮ್ಮ ಮಗನೊಂದಿಗೆ ಮಾತನಾಡುತ್ತಾ ಕಾಫೀಮಾಡಿ ಒಂದು ಬಟ್ಟಲಿನಲ್ಲಿ ಅವನ ಮುಂದಿಟ್ಟು "ತೆಗೆದುಕೋ" ಎಂದರು.

"ಇನ್ನೇನು ಊಟವಾಗುತ್ತದಲ್ಲ. ಈಗ ಕಾಫಿಯೇಕಮ್ಮಾ"

"ಕಾಫೀ ಇಲ್ಲದಿದ್ದರಾಗುತ್ತದೇನಪ್ಪ. ನೀನೇನು ಮೊದಲಿನ ಗೋವಿಂದನೇ. ಆಫೀಸರ್ ಗೋವಿಂದರಾಯ" ಎಂದರು ನಗುತ್ತಾ.

ತನ್ನ ತಾಯಿ ಎತ್ತಿಹಾಕುವ ಮಾತುಗಳನ್ನು ಆಡಿದರೆ ಗೋವಿಂದ ಅನ್ಯಥಾ ಭಾವಿಸುತ್ತಿರಲಿಲ್ಲ.

"ಆಫೀಸರಿಗೂ ಇದು ಕಾಫಿಯ ಹೊತ್ತಲ್ಲಮ್ಮಾ"

"ನಿನ್ನ ಹೆಂಡತಿಗೂ ಕೊಡುತ್ತೇನೆ, ತೆಗೆದುಕೋ"

ಅವನು ನಗುತ್ತಾ "ಅವಳಿಗೆ ಕೊಡು ಬಿಡು. ಅದು ನಿನ್ನ ಇಷ್ಟ. ಈಗೇನು ಕಾಫೀ ಬೇಕಾಗಿರಲಿಲ್ಲ. ಅವರೂ ಕೊಟ್ಟಿದ್ದು ಯಾಕೆ ಬೇಡವೆನ್ನಲಿ" ಎಂದು ಹೇಳಿ ತೆಗೆದುಕೊಂಡು ಕುಡಿಯತೊಡಗಿದ.

ಅತ್ತೆ ಸೊಸೆಗೂ ಕಾಫೀ ಕೊಟ್ಟರು. ಅವಳು ಮರೆಯಾಗಿ ಹೋಗಿ ಕುಳಿತುಕೊಂಡು ಕಾಫೀಕುಡಿದು ಮುಗಿಸಿದಳು.

ಕಾಫಿಯಾದ ಮೇಲೆ ತಾಯಿ ಮಕ್ಕಳು ಮಾತನಾಡತೊಡಗಿದರು. ನಾಗರತ್ನಮ್ಮನವರ ಮಾತು, ಮದುವೆಯ ಘಟನೆಗಳು, ಫ್ಯಾಕ್ಟರಿಯ ವಿಷಯ. ಒಂದಲ್ಲ, ಎರಡಲ್ಲ, ಸುಮ್ಮನೆ ಮಾತನಾಡುತ್ತಲೇ ಇದ್ದರು. ಅವರದು ಎಂದೆಂದಿಗೂ ಮುಗಿಯದಂತಹ ಮಾತು. ಆ ಮಾತುಗಳಲ್ಲಿ ಎಷ್ಟೋ ವರ್ಷಗಳಿಂದ ದಿನವೂ ಮಾಡುತ್ತಿದ್ದ ಅಡಿಗೆಯೇ ಅವರಿಗೆ ಜ್ಞಾಪಕವಿರಲಿಲ್ಲ. ಶಾಂತಮ್ಮ ಎರಡನೆಯ ಬಾರಿ ಉಪ್ಪಿನ ಮರಗೆಯನ್ನು ತೆಗೆದುಕೊಂಡಾಗ ಪ್ರಮಿಳೆ ಅತ್ತೆಯನ್ನು ಎಚ್ಚರಿಸದಿದ್ದರೆ ಯಾರೂ ಆ ದಿನ ಊಟಮಾಡುವುದಕ್ಕಾಗುತ್ತಲೇ ಇರಲಿಲ್ಲ

ಪ್ರಮಿಳೆ ನಡುಮನೆಯಲಿ ನಿಂತುಕೊಂಡು ತಾಯಿಮಕ್ಕಳು ಆಡುತ್ತಿದ್ದ ಮಾತುಗಳನು ಕೇಳುತಿದಳು. ಅವಳಿಗೂ ತನ ಗಂಡನೊಂದಿಗೆ ದಣಿವಾ

ಗುವವರೆವಿಗೆ ಮಾತನಾಡಬೇಕೆಂದು ಆಸೆಯಾಗುತ್ತಿತ್ತು. ಆದರೆ ದೊಡ್ಡವರಿರುವ ಮನೆಯಲ್ಲಿ ಮಾತನಾಡಲು ಸಂಕೋಚವಾಗುತ್ತಿತ್ತು. ಸಂಕೋಚ ಹಾಗಿರಲಿ, ಬಾಯೇ ಬರುತ್ತಿರಲಿಲ್ಲ. ಅವನೆತ್ತಲೋ ತಿರುಗಿಕೊಂಡಿರುವಾಗ ಕದ್ದು ನೋಡಿ ಅಷ್ಟರಿಂದಲೇ ತೃಪ್ತಿಪಟ್ಟುಕೊಳ್ಳುತ್ತಿದ್ದಳು.

ಶಾಮರಾಯರು ಮಾಧ್ಯಾಹ್ನಿಕವನ್ನು ತೀರಿಸಿಕೊಂಡು ಹಜಾರದಲ್ಲಿ ಕುಳಿತುಕೊಂಡರು. ಅಡಿಗೆಯಾಯಿತೇನೋ ತನ್ನನ್ನು ಊಟಕ್ಕೆ ಕರೆಯುತ್ತಾರೆಯೇನೋ ಎಂದು ಸ್ವಲ್ಪಹೊತ್ತು ನಿರೀಕ್ಷಿಸಿದರು. ಮಗ ಬಂದಿರುವ ಸಂಭ್ರಮದಲ್ಲಿ ಆ ತಾಯಿ ಅವರನ್ನು ಮರೆತೇಹೋದ ಹಾಗಿತ್ತು.

ಆತ ನಿಧಾನವಾಗಿ ಅಡಿಗೆಯ ಮನೆಯ ಬಾಗಿಲಲ್ಲಿ ಬಂದು ನಿಂತುಕೊಂಡು "ಏನು ಮಹರಾಯಿತಿ. ಈ ದಿನ ನನಗೇನು ಊಟ ಉಂಟೋ ಉಂಟೋ ಇಲ್ಲವೊ" ಎಂದು ಕೇಳಿದರು.

"ಆಗಿಹೋಯಿತು, ಬಂದ್ರೆ. ಹುಳಿ ಅಷ್ಟುಹಾಕಿ ಒಂದು ಕುದಿ ಕುದಿಯುತ್ತಲೇ ಒಂದಿಷ್ಟು ಒಗ್ಗರಣೆ ಹಾಕಿದರೆ ತೀರಿತು." ಎಂದು ಹೇಳಿ ನೀರಿನಲ್ಲಿ ನೆನೆಯುತ್ತಿದ್ದ ಹುಳಿಯನ್ನು ಕಿವುಚತೊಡಗಿದರು.

"ನಿಧಾನವಾಗಿ ಆಗಲಿ. ಊಟವಾಗಬೇಕೆಂಬ ವಿಷಯವನ್ನು ನಿನಗೆ ಜ್ಞಾಪಿಸೋಣವೆಂದುಕೊಂಡು ಹೇಳಿದೆ. ಅಷ್ಟೆ" ಎಂದುಹೇಳಿ ಶಾಮರಾಯರು ಪುನಃ ಹಜಾರದಲ್ಲಿ ಯಥಾಸ್ಥಿತರಾದರು.

ಶಾಂತಮ್ಮನವರು ಮಗನನ್ನು ಸ್ನಾನಕ್ಕೆ ಹೋಗುವಂತೆ ಹೇಳಿ ಅಡಿಗೆಯಲ್ಲಿ ಆಸಕ್ತರಾದರು.

ಗಂಡ ಏಳಲುದ್ಯುಕ್ತನಾದುದನ್ನು ನೋಡಿ ಪ್ರಮೀಳೆ ಬಚ್ಚಲು ಮನೆಗೆ ಹೋಗಿ ಬಿಸಿನೀರು ತೋಡಿ, ಸೋಪು ಟವಲುಗಳನ್ನು ತೆಗೆದುಕೊಂಡು ಹೋಗಿಟ್ಟಳು. ಅವನಿಂದ ಬೇಗದ ಕೈಕೇಳಿ ತೆಗೆದುಕೊಂಡು ಬೇರೇ ಪಂಚೆ ಅಂಗಿಗಗಳನ್ನು ತಂದಳು.

ಶಾಂತಮ್ಮನವರು ಅನ್ನವನ್ನಿಳಿಸಿ ಸಾರು ಪಲ್ಯಗಳಷ್ಟನ್ನೇ ಮಾಡಿದ್ದರು ಎಲೆಯ ಕೊನೆಗೆ ಉಪ್ಪಿನಕಾಯಿ ಹಾಕಿ ಬಡಿಸಿದ್ದರು.

ಎರಡನೆಯಬಾರಿ ಸಾರಿನಲ್ಲಿ ಕಲಸುತ್ತ, ಶಾಮರಾಯರು "ಅಡಿಗೆ

ಹೊತ್ತಾದುದನ್ನು ನೋಡಿ ಮಗನಿಗಾಗಿ ಏನೇನು ಮಾಡಿದ್ದಿಯೋ ಎಂದಿದ್ದೆ. ಇಷ್ಟೇನೇ" ಎಂದರು.

ಶಾಂತಮ್ಮ "ಅವನೇನು ಬೀಗನೇ. ಬಂದನೆಂದು ಏನೇನೋ ಮಾಡುವುದಕ್ಕೆ" ಎಂದು ಹೇಳಿ ನಕ್ಕರು.

ಊಟವಾಯಿತು. ಪ್ರಮೀಳೆ ಎಲೆಗಳನ್ನು ಎತ್ತಿಹಾಕಿ ಗೋಮಯ ಮಾಡಿ ಮಾವನವರು ಮಲಗಲು ಹಜಾರದಲ್ಲಿ ಚಾಪೆ ಹಾಕಿ ದಿಂಬು ಇಟ್ಟಳು. ಭಾನುವಾರ ಮಧ್ಯಾಹ್ನ ಮನೆಯಲ್ಲಿದ್ದಾಗ ಗೋವಿಂದರಾಯ ಸ್ವಲ್ಪಹೊತ್ತು ಮಲಗುವ ಅಭ್ಯಾಸವಿತ್ತು. ಆ ಮನೆಯಲ್ಲಿ ಮಲಗಲು ಅವನಿಗೆಲ್ಲಿ ಹಾಸಿಗೆ ಹಾಕೋಣವೆಂದು ಯೋಚಿಸಿ ಉಗ್ರಾಣದಂತೆ ಉಪಯೋಗಿಸುತ್ತಿದ್ದ ಕೋಣೆಯಲ್ಲಿಯೇ ಇದ್ದುದರಲ್ಲಿ ತೆರಪುಮಾಡಿ ಹಾಸಿಗೆ ಹಾಕಿದಳು.

ಗೋವಿಂದರಾಯ ಊಟವಾದ ಮೇಲೆ ಮಲಗುವುದಕ್ಕೆ ಹೋಗಲಿಲ್ಲ. ಊಟಮಾಡುತ್ತಿದ್ದಾಗ ತಾಯಿಯ ಜೊತೆಯಲ್ಲಿಯೇ ಕುಳಿತುಕೊಂಡಿದ್ದ. ಅದಾದ ಮೇಲೆ ನಡುಮನೆಯಲ್ಲಿ ಮಾತನಾಡುತ್ತಾ ಕುಳಿತುಕೊಂಡರು. ಮಾತನಾಡುತ್ತಾ ಆಡುತ್ತಾ ಶಾಂತಮ್ಮನವರಿಗೆ ತೂಕಡಿಕೆ ಬಂದಿತು.

"ನೀನು ಮಲಗಿಕೋಮ್ಮಾ" ಎಂದು ಗೋವಿಂದರಾಯ ಹೇಳಿದ್ದ.

ಪ್ರಮೀಳೆ ಗಂಡನನ್ನು ಕುರಿತು "ಮಲಗಲು ಸಿದ್ಧಮಾಡಿದ್ದೇನೆ" ಎಂದು ಹೇಳಿ ಅವನನ್ನು ಉಗ್ರಾಣಕ್ಕೆ ಕರೆದುಕೊಂಡು ಹೋದಳು. ಅವನು ಒಳಗೆ ಹೋಗುತ್ತಲೂ ತಾನು ಹೊರಗೆ ಬಂದಳು.

ಬೆಂಗಳೂರಿನಲ್ಲಿದ್ದಾಗ ಏರ್ಪಾಟು ಬೇರೊಂದು ವಿಧವಾಗಿತ್ತು. ನಾಗರತ್ನಮ್ಮನವರ ಮನೆ ದೊಡ್ಡದು. ಎರಡು ಮೂರು ಕೊಠಡಿಗಳಿರುತ್ತಿದ್ದವು. ಮದುವೆಗೆ ಬಂದಿದ್ದವರು ಇನ್ನೂ ಮನೆಯಲ್ಲಿಯೇ ಇದ್ದರೂ ಭಾನುವಾರ ದಿನ ಮಧ್ಯಾಹ್ನ ಗಂಡು ಮಲಗಿಕೊಳ್ಳಲು ಹೋದಾಗ ತಾನೂ ಹೋಗಿ ಅಲ್ಲಿಯೇ ಕುಳಿತಿರುತ್ತಿದ್ದಳು, ಪ್ರಮೀಳೆ. ಆಗಲೆ ಅದು ಯಾರಿಗೂ ಅಸಂಗತವಾಗಿ ಕಂಡುಬರುತ್ತಿರಲಿಲ್ಲ. ಅವಳಿಗೂ ಸಂಕೋಚವಾಗಿ ತೋರುತ್ತಿರಲಿಲ್ಲ.

ಆದರೆ ಇಲ್ಲಿ ಹಾಗಾಗಲಿಲ್ಲ. ತನ್ನನ್ನು ಕರೆದುಕೊಂಡು ಬಂದ ಹೆಂಡತಿಯು ನಿಲ್ಲುತ್ತಾಳೆಂದುಕೊಂಡನೋ ಏನೋ, ಗೋವಿಂದರಾಯ. ಅವಳ ಕಡೆಗೆ ತಿರುಗಿ ನೋಡಿದ. ಆದರೆ ಪ್ರಮೀಳೆಯು ಗಮನಿಸಿದರೂ ಗಮನಿಸದಂತೆ ಹೊರಗೆ ಬಂದುಬಿಟ್ಟಳು.

ಅತ್ತೆ ಎದ್ದು ಕಾಫಿಯ ಪ್ರಯತ್ನ ಮೊದಲು ಮಾಡುವ ವೇಳೆಗೆ ಸತ್ತು ಮನೆಯಲ್ಲಿ ಒಂದುಕಡೆ ಕುಳಿತಿದ್ದಳು. ಅವಳಿಗೂ ನಿದ್ದೆಬಂದು ತೂಕಡಿಸುತ್ತಿದ್ದಳೋ, ಇಲ್ಲ, ಕಣ್ಣು ಅರೆಮುಚ್ಚಿ ಯೋಚನೆಮಾಡುತ್ತಿದ್ದಳೋ ಹೇಳಲಾಗುವದಿಲ್ಲ.

ಯಥಾಪ್ರಕಾರವಾಗಿ ಆ ಮನೆಯ ಕಾರ್ಯಕ್ರಮಗಳು ಮುಂದುವರಿಯತೊಡಗಿದವು. ಗೋವಿಂದರಾಯ ಬಂದದ್ದು ಹರಿಯುತ್ತಿರುವ ಹೊಳೆಗೆ ಸಣ್ಣದೊಂದು ಹಳ್ಳ ಬಂದು ಸೇರಿದಹಾಗಿತ್ತು ಅಷ್ಟೇ.

ಸಂಧ್ಯಾಕಾಲ. ಪುರಾಣಕ್ಕೆ ಹೋಗುತ್ತಾ ಶಾಂತಮ್ಮನವರು "ಪ್ರಮೀಳಾ. ನಿನ್ನ ಗಂಡನೊಬ್ಬನೇ ಮನೆಯಲ್ಲಿರುತ್ತಾನೆ. ನೀನೂ ಇರಮ್ಮ. ಅವನಿಗೆ ಬೇಜಾರಾಗಬಹುದು" ಎಂದರು.

ಅತ್ತೆ ಪುರಾಣಕ್ಕೆ ಹೋಗುತ್ತಾರೆ. ಸಾಯಂಕಾಲದ ಹೊತ್ತು ಹಾಗೇ ಸುತ್ತಿಕೊಂಡು ಬರುವುದು ಮಾಪನವರಿಗೆ ರೂಢಿ. ಯಾರೂ ಮನೆಯಲ್ಲಿಲ್ಲದಿದ್ದರೆ ತಾನೇ ಇದ್ದು ಹೆಂಡತಿ ಪುರಾಣ ಮುಗಿಸಿಕೊಂಡು ಬಂದ ಮೇಲೆ ದೇವರ ದರ್ಶನದ ನೆವದಿಂದಲಾದರೂ ಸುತ್ತಾಡಿಕೊಂಡು ಬರುತ್ತಾರೆ. ತನ್ನ ಗಂಡನೊಬ್ಬನೇ ಮನೆಯಲ್ಲಿರುತ್ತಾನೆಂದರೆ ತಾನೂ ಇದ್ದುಬಿಡೋಣವೆಂದೇ ಪ್ರಮೀಳೆಗನ್ನಿಸಿತು. ಆದರೆ ಸಂಕೋಚವಾಯಿತು.

"ಇಲ್ಲ. ಅತ್ತಮ್ಮ. ಇನ್ನು ಇಲ್ಲಿರುವುದು ಮೂರು ದಿನವೋ, ನಾಲ್ಕೇ ದಿನವೋ. ಇರುವಷ್ಟು ದಿನ ಪುರಾಣ ಕೇಳಿಬಿಡುತ್ತೇನೆ"

"ಸರಿ. ಬಾಮ್ಮಾ. ಅದೂ ಒಳ್ಳೆಯದೇ"

ಶಾಂತಮ್ಮ ಸೊಸೆಯನ್ನು ಮನೆಯಲ್ಲಿರು ಎಂದ ಮೇಲೆ ಅವಳು ಇರುತ್ತಾಳೆಂದು ಗೋವಿಂದರಾಯ ನಿರೀಕ್ಷಣೆ ಮಾಡಿದ್ದ. ಆದರೆ ಅವಳು ಅವರನ್ನು ಬಿಡದೇ ಹೊರಟು ಹೋದುದನ್ನು ನೋಡಿ ಅವನಿಗೆ ನಿರಾಶೆಯಾ

ಯಿತು. ಆ ಹಳ್ಳಿ ಕೊಂಪೆಯಲ್ಲಿ ಅವನೆಲ್ಲಿ ಹೋಗುವುದು. ಯಾವುದೋ ನಾವೆಲ್ ಕೈಗೆತ್ತಿಕೊಂಡು ಓದತೊಡಗಿದ. ಅದನ್ನು ಓದುವುದಕ್ಕೂ ಮನಸ್ಸಿಲ್ಲ. ಅದು ರುಚಿಸಲಿಲ್ಲ ಆದರೂ ಮಾಡುವುದೇನು ? ಚಾರ್ಜಿಲ್ಲದೇ ರೈಲ್ವೆ ಕಂಬಿಯ ಪಕ್ಕದಲ್ಲಿಯೇ ನಡೆದುಕೊಂಡು ಹೊರಟವನು ಕಬ್ಬಿಣದ ಕಂಬಿಗಳ ಸಾಲನ್ನು ತದೇಕ ದೃಷ್ಟಿಯಿಂದ ನೋಡುವಂತೆ ಅಕ್ಷರದ ಸಾಲುಗಳನ್ನು ನೋಡುತ್ತಾ ಕುಳಿತಿದ್ದ.

ಪುರಾಣಮುಗಿಸಿಕೊಂಡು ಮನೆಗೆ ಬಂದ ಶಾಂತಮ್ಮನವರು ಅಡಿಗೆಗೆ ಮಡಿ ಉಟ್ಟುಕೊಳ್ಳುವ ಮೊದಲು ಇದ್ದ ಸಾಮಾನುಗಳನ್ನೆಲ್ಲಾ ತೆಗೆದು ನಡುಮನೆಯಲ್ಲಿಟ್ಟು ಉಗ್ರಾಣವನ್ನು ತೆರವು ಮಾಡಿದರು. ಅನಂತರ ಅದನ್ನು ಗುಡಿಸಿ ಒದ್ದೆ ಬಟ್ಟೆಯಲ್ಲಿ ಉಜ್ಜಿದರು.

ಅಷ್ಟು ಮಾಡಿ ಸೊಸೆಯನ್ನು ಕುರಿತು "ನಿನ್ನ ಗಂಡನಿಗೆ ಮಲಗಿಕೊಳ್ಳಲು ಇಲ್ಲಿ ಅಣಿಮಾಡು" ಎಂದು ಹೇಳಿ ಸ್ನಾನಕ್ಕೆ ಹೊರಟುಹೋದರು.

ಸಾಮಾನು ಸರಂಜಾಮುಗಳಿಂದ ತುಂಬಿದ ಉಗ್ರಾಣದಲ್ಲಿಯೇ ಮಲಗಿ ತನ್ನ ಗಂಡ ರಾತ್ರಿಯನ್ನು ಕಳೆಯಬೇಕೇನೋ ಎಂದು ಪ್ರಮೀಳೆ ಯೋಚನೆ ಮಾಡುತ್ತಿದ್ದಳು. ಉಗ್ರಾಣವಲ್ಲಿದ್ದ ಸಾಮಾನುಗಳನ್ನು ತೆಗೆದು ಮತ್ತೆಲ್ಲಿಯಾದರೂ ಇಡೋಣವೆಂದು ಅವಳಿಗೂ ತೋರಿತ್ತು. ಆದರೆ ಯಾರೇನು ತಿಳಿದುಕೊಳ್ಳುತ್ತಾರೆಯೋ ಎಂದು ಸುಮ್ಮನಾಗಿದ್ದಳು. ಈಗ ಆ ಸೊಸೆ ತೆರವು ಮಾಡಿದುದನ್ನು ನೋಡಿ "ಹಳೆಯ ಕಾಲದ ಹೆಂಗಸಾದರೂ ಪರವಾಯಿಲ್ಲ. ಬುದ್ಧಿವಂತರು" ಎಂದುಕೊಂಡಳು.

ಮಗನ ಪುನಸ್ಸಂಧಾನವಾಗಿ ಬಹಳ ದಿನಗಳಾಗಿದ್ದರೂ ಶಾಂತಮ್ಮನವರಿಗೆ ಮಗ ಸೊಸೆ ಮನೆಯಲ್ಲಿ ಬಂದಿರುವುದು ಮಕ್ಕಳಿಗೆ ಹೊಸ ಆಟ ಸಿಕ್ಕಿದಂತಾಗಿತ್ತು. ಊಟವಾದ ಮೇಲೆ ಅವರು ಬಂದು ಆ ಕೋಣೆಯನ್ನು ನೋಡಿದರು. ಬಣ್ಣದ ಚಾಪೆಯನ್ನು ಹಾಕಿ, ಹಾಸಿದ ಹಾಸಿಗೆಯನ್ನು ಸುತ್ತಿ ಒಪ್ಪವಾಗಿ ಬದಿಯಲ್ಲಿ ಇಡಲಾಗಿತ್ತು. ಗೂಡಿನಲ್ಲಿ ಸಣ್ಣದೊಂದು ಬೆಡ್‌ಲ್ಯಾಂಪ್ ಉರಿಯುತ್ತಿತ್ತು.

ಶಾಂತಮ್ಮ ಕೋಣೆಯನ್ನು ನೋಡಿದಂತೆಯೇ ಕೋಣೆಯ ಗೋಡೆಗಳನ್ನೂ ನೋಡಿದರು. ಆಕೆಗೇನು ತೋರಿತೋ ಏನೋ, ಒಳಗೆ ತೂಗು ಹಾಕಿದ್ದ ಶ್ರೀನಿವಾಸಕಲ್ಯಾಣದ ಪಟವನ್ನು ತಂದು ಮೊಳೆ ಹೊಡೆದು ತೂಗು ಹಾಕಿ ಸಂತೃಪ್ತರಾಗಿ ಒಳಗೆ ಬಂದರು.

ಶುಕ್ಲಪಕ್ಷ. ಮನೆಯ ಮುಂದೆ ಒಳ್ಳೆಯ ಬೆಳದಿಂಗಳು ಬಿದ್ದಿತ್ತು. ಶಾಂತಮ್ಮನವರೂ ಗೋವಿಂದರಾಯನೂ ಮಾತನಾಡುತ್ತ ಜಗುಲಿಯ ಮೇಲೆ ಕುಳಿತುಕೊಂಡಿದ್ದರು. ಮಾತು ಮುಗಿಯುತ್ತದೆಯೋ ಎಂದು ಕಾಯುತ್ತಾ ಪ್ರಮೀಳೆಯೂ ಒಂದು ಕಡೆ ಕುಳಿತಿದ್ದಳು. ಎಷ್ಟು ಹೊತ್ತಾದರೂ ಅವರ ಮಾತು ಮುಗಿಯಲಿಲ್ಲ.

ಹಜಾರದಲ್ಲಿದ್ದ ಹಳೆಯ ಗಡಿಯಾರ ಒಂದು ಬಾರಿ "ಠಣ್" ಎಂದು ಹೊಡೆದು ಹತ್ತೂವರೆಯಾಗಿದೆ ಎಂದು ಹೇಳಿತು.

ಶಾಮರಾಯರು ಕೂಗಿ ಹತ್ತೂವರೆ ಗಂಟೆ ಹೊಡೆಯಿತು. "ಮಲಗಿಕೊಳ್ಳಿ. ಇನ್ನೂ ಏನಾದರೂ ಉಳಿದಿದ್ದರೆ ನಾಳೆಯ ದಿನ ಮಾತನಾಡಿಕೊಳ್ಳುವಿರಂತೆ" ಎಂದು ಹೇಳಿದರು.

ಅನಂತರ ಎಲ್ಲರೂ ಮಲಗಿಕೊಳ್ಳುವುದಕ್ಕೆ ಹೋದರು.

ಕೋಣೆಯೊಳಗೆ ಹೋಗಿದ್ದ ಸೊಸೆಯನ್ನು ಕರೆದು ಶಾಂತಮ್ಮ ಸಣ್ಣ ಬೆತ್ತದ ತಟ್ಟೆಯಲ್ಲಿ ಎಲೆ ಅಡಿಕೆ ಸುಣ್ಣಗಳನ್ನಿಟ್ಟು ಎರಡು ಲೋಟಾಗಳಲ್ಲಿ ಹಾಲು ತೆಗೆದಿಟ್ಟು ತೆಗೆದುಕೊಂಡು ಹೋಗುವಂತೆ ಹೇಳಿದರು.

ಪ್ರಮೀಳೆ ಮೊದಲು ಹಾಲಿನ ಬಟ್ಟಲುಗಳನ್ನು ಎರಡು ಕೈಗಳಲ್ಲಿಯೂ ಹಿಡಿದುಕೊಂಡು ಹೋದಳು. ಪುನಃ ಬಂದು ತಾಂಬೂಲವನ್ನು ತೆಗೆದುಕೊಂಡು ಹೋಗಬೇಕಾಗಿತ್ತು.

ಅಲ್ಲಿಯೇ ಇದ್ದ ಶಾಂತಮ್ಮನವರು ತಾಂಬೂಲದ ತಟ್ಟೆಯ ಕಡೆಗೆ ನೋಡಿದರು. ಅದು ಸುಮಾರು ನಲವತ್ತು ವರ್ಷದ ಹಿಂದಿನದು. ಈಗಲೂ ಚೆನ್ನಾಗಿ ಜ್ಞಾಪಕವಿದೆ. ಅದು ವೀಳೆಯದೆಲೆಯ ಆಕಾರವಾಗಿತ್ತು. ಯಾರ ಮನೆಯಲ್ಲಿಯೂ ಅಂತಹ ತಟ್ಟೆಯಲ್ಲಿಯೇ ತಾಂಬೂಲವಿಟ್ಟದ್ದು ದನ್ನು ನೋಡಿ

ಅಂತಹ ತಟ್ಟೆ ಬೇಕೆನ್ನಿಸಿತು. ತಾವು ಗಂಡನ ಮನೆಗೆ ಬಂದ ಹೊಸದರಲ್ಲಿ ಅಂತಹದೊಂದು ತಟ್ಟೆ ಬೇಕೆಂದು ಕೇಳಿದ್ದರು. ಶಾಮರಾಯರಿಗೆ ಆಗ ಅನುಕೂಲವಾದ ಕಾಲವೇ. ಅವರು "ಮನೆಯಲ್ಲಿ ಎರಡು ಮೂರು ಬೆಳ್ಳಿಯ ತಟ್ಟೆಗಳಿರುವಾಗ ಬೆತ್ತದ ತಟ್ಟೆ ಯಾಕೆ"ಂದು ಉಪೇಕ್ಷೆ ಮಾಡಿದ್ದರು. ಶಾಂತಮ್ಮನವರು ಹಟ ಹಿಡಿಯುತ್ತಲೂ ಬೆಂಗಳೂರಿಗೆ ಹೋಗಿ ತಂದುಕೊಡುವುದಾಗಿ ಹೇಳಿದ್ದರು. ಅವರೇ ಹೋಗಿ ಯಾವುದೋ ತೆಗೆದುಕೊಂಡು ಬಂದುಬಿಟ್ಟರೆ ಪುನಃ ಬೇರೊಂದು ತರಿಸಿಕೊಳ್ಳುವುದು ಕಷ್ಟವಾಗುತ್ತದೆಂದು ಆಕೆ ಗಂಡನೊಡನೆ ತಾವೂ ಬೆಂಗಳೂರಿಗೆ ಹೋಗಿ ಇದನ್ನೇ ಆರಿಸಿ ತಂದಿದ್ದರು. ಅಂದಿನಿಂದ ಎಲೆ ಅಡಿಕೆ ಹಾಕಿಕೊಳ್ಳುವಾಗಲೆಲ್ಲಾ ಅದನ್ನೇ ಉಪಯೋಗಿಸುತ್ತಿದ್ದರು.

ಆ ಬೆತ್ತದ ತಟ್ಟೆಯ ಮೇಲೆ ಶಾಂತಮ್ಮನವರಿಗೆ ಬಹಳ ಅಭಿಮಾನ.

ಹಾಲು ಒಳಗಿಟ್ಟು ಬಂದ ಪ್ರಮೀಳೆ ತಾಂಬೂಲವಿದ್ದ ಬೆತ್ತದ ತಟ್ಟೆಯನ್ನು ತೆಗೆದುಕೊಂಡು ಹೋದಳು.

ಆ ತಟ್ಟೆ ತಂದ ದಿನಗಳ ನೆನಪು ಶಾಂತಮ್ಮನವರ ಮನಸ್ಸಿನಲ್ಲಿಯೇ ಸುಳಿಯುತ್ತಿದ್ದವು.

ನಾಲ್ಕು ದಿನಗಳ ತರುವಾಯ ಪ್ರಮೀಳೆ ಗಂಡನೊಂದಿಗೆ ಬೆಂಗಳೂರು ಬಂದು ಸೇರಿದಳು.

ಬೆಂಗಳೂರಿನಲ್ಲಿ ಹೊತ್ತು ಹೋಗುವುದು ಕಷ್ಟ ಎಂಬುದೊಂದುವಿನಾ ಮಿಕ್ಕ ಯಾವ ವಿಷಯದಲ್ಲಿಯೂ ಲೋಪವಿರಲಿಲ್ಲ. ಬೆಳಗಾಗ ಏಳುತ್ತಿದ್ದ ಹಾಗೆಯೇ ಗಂಡ ಫ್ಯಾಕ್ಟರಿಗೆ ಹೊರಟು ಹೋಗುತ್ತಿದ್ದ. ಪುನಃ ಅವನು ಬರುತ್ತಿದ್ದುದು ಸಾಯಂಕಾಲ. ನಾಗರತ್ನಮ್ಮನವರೂ ಅಷ್ಟೇ. ಬೆಳಗಾಗುತ್ತಲೇ ಅವರು ಮನೆಬಿಟ್ಟು ಹೋಗದಿದ್ದರೂ ಕಾಫೀ ಕುಡಿದವರು ಸ್ಕೂಲಿನ ಕೆಲಸ ಮಾಡುತ್ತಲೋ ಪುಸ್ತಕ ನೋಡುತ್ತಲೋ ಕುಳಿತುಕೊಳ್ಳುವರು.

ಬೆಳಗಾಗ ಎದ್ದ ಪ್ರಮೀಳೆ ಕಾಫೀ ತೆಗೆದುಕೊಂಡು ಸ್ವಲ್ಪ ಹೊತ್ತು ಪೇಪರ್ ನೋಡುತ್ತಾ ಕುಳಿತುಕೊಳ್ಳುವಳು. ಹಾಗೇ ಹೀಗೆ ಓಡಿಯಾಡುತ್ತಿದ್ದು ಸ್ನಾನ ಮುಗಿಯುವ ವೇಳೆಗೆ ಊಟ ಸಿದ್ಧವಾಗುತ್ತದೆ. ಸೋದ

ತ್ತ್ರಿಯ ಜೊತೆಗುಲ್ಲಿಯೇ ಕುಳಿತು ಊಟ ಮಾಡಿಬಿಡುವಳು. ಅನಂತರ ಅವರೂ ಸ್ಕೂಲಿಗೆ ಹೊರಟು ಹೋಗುವರು.

ಆ ಮೇಲೆ ಸಾಯಂಕಾಲದವರೆವಿಗೂ ಹೊತ್ತು ಕಳೆಯುವುದು ಬಹಳ ಕಷ್ಟ. ಅಷ್ಟುಹೊತ್ತು ಓದುವುದಕ್ಕೆ ಅಭ್ಯಾಸವಿಲ್ಲ. ನಿದ್ದೆ ಬರುವುದಿಲ್ಲ. ಅಂತೂ ಇಡೀ ದಿನವನ್ನು ಕಳೆದರೆ ಆ ಮೇಲೆ ಪರವಾಯಿಲ್ಲ. ಗಂಡನೂ ಸೋದರತ್ತೆಯೂ ಮನೆಗೆ ಬರುವರು. ಟಿಫಿನ್ ತೆಗೆದುಕೊಂಡು ಮೂರು ಮಂದಿಯೂ ಎಲ್ಲಿಯಾದರೂ ವಾಕಿಂಗ್ ಹೋಗುವರು. ವಾಕಿಂಗ್ ಬೇಜಾರಾದಾಗ ಯಾವುದಾದರೂ ಸಿನಿಮಾಗೆ ಹೊರಟು ಹೋಗುತ್ತಿದ್ದರು.

ಪ್ರಮಿಳಾ ವಾರವೂ ಭಾನುವಾರಕ್ಕಾಗಿ ಕಾಯುತ್ತಿರುತ್ತಾಳೆ. ಭಾನುವಾರ ಬಂದರಂತೂ ಅವಳಿಗೆ ಎಲ್ಲಿಲ್ಲದ ಸಂಭ್ರಮ. ಆ ದಿನ ಎಲ್ಲರಿಗೂ ಭಿನ್ನವಾದ ಕಾರ್ಯಕ್ರಮ. ದಿನವೂ ಸ್ಕೂಲಿಗೆ ಹೋಗುತ್ತಿದ್ದ ನಾಗರತ್ನಮ್ಮನವರಿಗೆ ಸ್ಕೂಲಿಲ್ಲ. ಗೋವಿಂದರಾಯನಿಗೆ ಫ್ಯಾಕ್ಟರಿಯಿಲ್ಲ. ದಿನವೂ ಒಂದೇ ಕೆಲಸ ಮಾಡಿ ಅಭ್ಯಾಸವಾಗಿ ಹೋಗಿದ್ದ ಅವರುಗಳಿಗೆ ಆ ಹೊತ್ತು ದಿನದ ಕೆಲಸವಿಲ್ಲದೇ ಏನೋ ಒಂದು ತರಹವಾಗಿರುತ್ತಾರೆ. ಮನೆಯಲ್ಲಿ ಅವರಿಬ್ಬರಿಗೂ ಪ್ರಮಿಳೆಯೊಬ್ಬಳೇ ಕಿರಿಯವಳು. ಆದರಿಂದ ಅವಳನ್ನು ಕರೆದು ಏನಾದರೊಂದ ಕೆಲಸವನ್ನು ಹೇಳುತ್ತಾಳೆ. ಪ್ರಮಿಳೆ ಸಡಗರದಿಂದ ಓಡಿಯಾಡುತ್ತಿರುತ್ತಾಳೆ.

ಆ ದಿನ ಈ ಕೆಲಸಗಳ ಜೊತೆಗೆ ಭಾನುವಾರ ಪ್ರಮಿಳೆಗೆ ಕ್ಲಿಪ್ತವಾದ ಕೆಲವು ಕಾರ್ಯ ಕ್ರಮಗಳಿರುತ್ತವೆ. ಒಂಬತ್ತು ಒಂಬತ್ತೂವರೆ ಗಂಟೆಯಾದ ಮೇಲೆ ಗೋವಿಂದರಾಯನಿಗೆ ಮನೆಯಲ್ಲಿರಲು ಸಾಧ್ಯವಾಗುತ್ತಿರಲಿಲ್ಲ. ಅವನು ಅವನು ಎಲ್ಲಿಯಾದರೂ ಹೋಗಬೇಕು. ಮೊದಲು ಯಾರಾದರೂ ಸ್ನೇಹಿತರೊಡನೆ ತಿರುಗಾಡಿಕೊಂಡು ಬರಲು ಹೋಗುತ್ತಿದ್ದ. ಈಗ ಹೊಸದಾಗಿ ಮದುವೆಯಾದ ಹೆಂಡತಿಗಿಂತಲೂ ಅವನಿಗೆ ಸ್ನೇಹಿತರು ಪ್ರಿಯವಾಗಿ ಕಂಡು ಬರುತ್ತಲಿರಲಿಲ್ಲ.

ಹೆಂಡತಿಯನ್ನು ಕರೆದುಕೊಂಡು ಬಸ್‌ನಲ್ಲಿ ಕಬ್ಬನ್‌ಪಾರ್ಕಿಗೆ ಹೋಗು ವನು. ಅಲ್ಲಿ ಹನ್ನೊಂದು ಹನ್ನೆರಡೂವರೆಯವರೆವಿಗೆ ಅಲೆಯುತ್ತಿರುವರು. ಅನಂತರ ಅವಳನ್ನು ಸೌತ್ ಪರೇಡಿಗೆ ಕರೆದುಕೊಂಡು ಬಂದು ಐಸ್‌ಕ್ರೀಂ ಕೊಡಿಸುತ್ತಿದ್ದ. ಗೋವಿಂದರಾಯನಿಗೆ ಐಸ್‌ಕ್ರೀಂ ತಿನ್ನುವುದು ಪ್ರಿಯವಲ್ಲ. ಆದರೆ ತಾನು ತೆಗೆದುಕೊಳ್ಳದಿದ್ದರೆ ಹೆಂಡತಿ ತೆಗೆದುಕೊಳ್ಳುವುದಿಲ್ಲವಲ್ಲ ಎಂದು ತಿನ್ನುತ್ತಿದ್ದ.

ಪ್ರಮೀಳೆಗೆ ಐಸ್‌ಕ್ರೀಂ ಎಂದರೆ ಬಹಳ ಇಷ್ಟವೆಂದು ಗೋವಿಂದರಾಯ ನಿಗೆ ಗೊತ್ತಾದುದು ಸ್ವಾರಸ್ಯವಾದ ಪ್ರಸಂಗ. ಆ ದಿನವೂ ಭಾನುವಾರ. ಗಂಡ ಮನೆಯಲ್ಲಿಯೇ ಇದ್ದ. ಗಂಡ ಹೆಂಡಿರಿಬ್ಬರಿಗೂ ನಿದ್ದೆ ಬಂದಿತ್ತು. ಪ್ರಮೀಳೆಗೆ ಒಂದು ಹೊತ್ತಿನಲ್ಲಿ ಎಚ್ಚರವಾಯಿತು. ಹಾಗೆಯೇ ಮಲಗಿದ್ದಳು. ಹೊರಗಡೆ ಐಸ್‌ಕ್ರೀಂ ಮಾರುವವನು ಕೂಗಿಕೊಂಡು ಹೋದ ಶಬ್ದ ಕೇಳಿ ಸಿತು. ಗಂಡ ಏನಾದರೂ ತಿಳಿದುಕೊಳ್ಳಬಹುದೆಂದು ಸುಮ್ಮನಾದಳು. ತಿರುಗಿ ನೋಡಿದಳು. ಅವನಿನ್ನೂ ನಿದ್ದೆ ಮಾಡುತ್ತಲೇ ಇದ್ದ. ಹೊರಗಡೆ ಕೂಗುತ್ತಿದ್ದ ಐಸ್‌ಕ್ರೀಂ ಎಂಬ ಶಬ್ದ ಕೇಳಿ ಬರುತ್ತಲೇ ಇತ್ತು. ಶಿವನಸಮು ದ್ರದಲ್ಲಿ ಸ್ಕೂಲಿನ ಬಳಿ ಇದೇರೀತಿ ಐಸ್‌ಕ್ರೀಂನವನೂ ಬರುತ್ತಿದ್ದುದು ತಾನು ಹೋಗಿ ನಿಂತುಕೊಳ್ಳುತ್ತಿದ್ದೂದ್ದು ಜ್ಞಾಪಕಕ್ಕೆ ಬಂದಿತು. ಕೂಡಲೇ ಗೂಡಿ ನಲ್ಲಿ ಬಿದ್ದಿದ್ದ ಚಿಲ್ಲರೆ ತೆಗೆದುಕೊಂಡು ಹೊರಗೆ ಹೋದಳು. ಐಸ್‌ಕ್ರೀಂನ ವನು ಬೀದಿಯಲ್ಲಿ ಹುಡುಗರಿಗೆ ಐಸ್‌ಕ್ರೀಂ ಮಾರುತ್ತಿದ್ದ. ಪ್ರಮೀಳೆಯೂ ಆರುಕಾಸು ಕೊಟ್ಟು ಒಂದನ್ನು ತೆಗೆದುಕೊಂಡಳು. 'ಐಸ್‌ಕ್ರೀಂ ಬೀದಿಯಲ್ಲಿ ಮಾರಿದರೂ ಐಸ್‌ಕ್ರೀಮೇ. ಯಾರೇ ತಿನ್ನಲಿ, ಆ ತಿಂಡಿ ಸಾಹೇಬರು ತಿನ್ನು ವಂತಹದು. ಬೆಲೆ ಆರುಕಾಸಾದರೂ ಅದನ್ನು ಕೊಡುವ ರೀತಿ ಸೊಗ ಸಾಗಿತ್ತು. ಯಾವುದೋ ಹಸುರೆಲೆಯನ್ನು ಚಚ್ಚೌಕವಾಗಿ ಕತ್ತರಿಸಿ ಅದರ ಮೇಲೆ ಐಸ್‌ಕ್ರೀಂ ಇಟ್ಟು ಕೊಡುತ್ತಿದ್ದ. ತಿನ್ನುವುದಕ್ಕೆ ಚಮಚ ಬೇರೆ. ತಾಳೇಗರಿಯ ಚೂರು.

ಗೋವಿಂದರಾಯ ಎಚ್ಚರಗೊಂಡು ಪಕ್ಕದಲ್ಲಿ ಹೆಂಡತಿ ಇಲ್ಲದ್ದನ್ನು

ಗಮನಿಸಿದ. ಎಲ್ಲಿ ಹೋದಳು ಎಂದುಕೊಂಡವನು ಹುಡುಕಿಕೊಂಡು ಬಂದ. ಹುಡುಗರಂತೆ ಐಸ್ ಕ್ರೀಂ ತಿನ್ನುತ್ತಿದ್ದ ಹೆಂಡತಿಯನ್ನು ಜಗುಲಿಯ ಮೇಲೆ ನೋಡಿದ. ಪ್ರಮಿಳೆಗೆ ನಾಚಿಕೆಯಾಗಿ ಐಸ್ ಕ್ರೀಂ ತಿನ್ನುವುದನ್ನು ನಿಲ್ಲಿಸಿದಳು.

ಅವನು ಹೆಂಡತಿಯನ್ನು ಗಮನಿಸದಂತೆ ಐಸ್ ಕ್ರೀಂನವನನ್ನು ಕರೆದು ಇನ್ನೆರಡು ಐಸ್ ಕ್ರೀಂ ಕೇಳಿದ. ಅವನು ತಂದುಕೊಟ್ಟ. ಗಂಡನೂ ಐಸ್ ಕ್ರೀಂ ತೆಗೆದುಕೊಂಡುದನ್ನು ನೋಡಿ ಪ್ರಮಿಳೆಗೆ ನಾಚಿಕೆಯಾಯಿತು. ಗಂಡನ ಬಳಿ ಇರಲಿಲ್ಲ. ಅವಳೇ ಚಿಲ್ಲರೆ ತೆಗೆದುಕೊಟ್ಟಳು.

ಇಬ್ಬರೂ ಒಳಗೆ ಬಂದರು. ಕೋಣೆಗೆ ಬಂದ ಮೇಲೆಯೂ ಗಂಡ ಐಸ್ ಕ್ರೀಂ ತೆಗೆದುಕೊಳ್ಳದುದನ್ನು ನೋಡಿ ಪ್ರಮಿಳೆಗೆ ಆಶ್ಚರ್ಯವಾಯಿತು.

"ಯಾಕೆ ಐಸ್ ಕ್ರೀಂ ತಿನ್ನುವುದಿಲ್ಲ"

"ಇಲ್ಲ. ನನಗೆ ಸೇರುವುದಿಲ್ಲ"

"ಹಾಗಾದರೆ ಯಾಕೆ ತೆಗೆದುಕೊಂಡಿರಿ"

"ತೆಗೆದುಕೊಂಡುದು ನಿನಗೆ ಸಾಕಾಗುವುದಿಲ್ಲವಲ್ಲ – ಎಂದು ತೆಗೆದು ಕೊಂಡೆ"

ಗೋವಿಂದರಾಯ ಉಪಚಾರೋಕ್ತಿಗಳನ್ನು ಹೇಳಿ ಉಪಾಯದಿಂದ ಪ್ರಮಿಳೆ ಅದನ್ನೂ ತಿನ್ನುವಂತೆ ಮಾಡಿದ.

ಪ್ರಮಿಳೆಯು ತಿಂದು ಮುಗಿಸಿದನಂತರ ಗೋವಿಂದರಾಯ ಮೆಲ್ಲನೆ ಅವಳ ಕೆನ್ನೆಯ ಮೇಲೆ ಹೊಡೆದು "ಹುಚ್ಚು ಹುಡುಗಿ. ಬೀದಿಯಲ್ಲಿ ಮಾರುವ ಐಸ್ ಕ್ರೀಂ ತೆಗೆದು ತಿನ್ನುತ್ತಾರೆಯೇನೇ ?" ಎಂದ.

ಅವಳು ಹುಸಿ ಮುನಿಸನ್ನು ತಂದುಕೊಂಡು "ಕೆನ್ನೆಗೆ ಹೊಡೆದು ಈ ಮಾತು ಹೇಳುವುದಕ್ಕೆ ನನ್ನಿಂದ ಐಸ್ ಕ್ರೀಂ ತಿನ್ನಿಸಿದಿರಾ ?" ಎಂದು ಕೇಳಿದಳು.

ಅದೇ ದಿನ ಸಾಯಂಕಾಲ ವಾಕಿಂಗ್ ಹೊರಟಾಗ "ಕಂಟೋನ್‌ಮೆಂಟ್‌ನಲ್ಲಿ ಸ್ವಲ್ಪ ಕೆಲಸವಿದೆ. ಹೋಗಿ ಬರೋಣವೇ, ಅತ್ತೆ" ಎಂದ.

ಎಲ್ಲ ಕಡೆ ಹೋಗುವುದಕ್ಕೂ ನಾಗರತ್ನಮ್ಮನವರಿಗೆ ಅಡ್ಡಿ ಇರಲಿಲ್ಲ.

ಅಲ್ಲಿ ಹೋಗಿ ಹೋಟಲೊಂದರಲ್ಲಿ ಕುಳಿತು ಮೂರು ಐಸ್‌ಕ್ರೀಂಗಳಿಗೆ ಆರ್ಡರ್ ಮಾಡುತ್ತಲೂ ಆಕೆಗೆ ಆಶ್ಚರ್ಯವಾಯಿತು.

"ಇದೇನೇ, ಗೋವಿಂದ. ಕಂಟೋನ್ಮೆಂಟಿನಲ್ಲಿ ನಿನಗೆ ಇದ್ದ ಕೆಲಸ"

ಅವನು ನಗುತ್ತಾ ಹೂದೆಂದ.

ನಾಗರತ್ನಮ್ಮನವರಿಗೆ ಮತ್ತೂ ಆಶ್ಚರ್ಯವಾಗಿ ಅವನ ಕಡೆ ನೋಡಿದರು.

"ಹೌದು ಅತ್ತೆ. ಈ ದಿನವೇಕೋ ಐಸ್‌ಕ್ರೀಂ ತಿನ್ನಬೇಕೆಂದು ಆಸೆಯಾಯಿತು. ಆದರಿಂದ ಕರೆದುಕೊಂಡು ಬಂದೆ. ನೀವು ಬೇಡವೆನ್ನುತ್ತೀರಿ—ಎಂದು ಅಲ್ಲಿ ಹೇಳಲಿಲ್ಲ. ಅಷ್ಟೆ" ಎಂದು ಹೇಳುತ್ತಾ ತನ್ನ ಹೆಂಡತಿಯ ಕಡೆ ನೋಡಿದ.

ಪ್ರಮಿಳೆಗೆ ಕೋಪ ಬಂದು ಅವಳು ದುರದುರನೆ ನೋಡಿದಳು.

ಅವರಿಬ್ಬರೂ ತೆಗೆದುಕೊಂಡರು. ಪ್ರಮಿಳೆ ತೆಗೆದುಕೊಳ್ಳಲಿಲ್ಲ. ತನಗೆ ಸೇರುವುದಿಲ್ಲವೆಂದಳು.

ನಾಗರತ್ನಮ್ಮ ಹಾಗೆ ಮಾಡಬಾರದೆಂದೂ ತೆಗೆದುಕೊಳ್ಳಬೇಕೆಂದೂ ಹೇಳಿದನಂತರ ತಿನ್ನುವುದಕ್ಕೆ ತೊಡಗಿದಳು.

ಗೋವಿಂದರಾಯ ತನ್ನ ಹೆಂಡತಿಗೆ ಇನ್ನೊಂದು ಐಸ್‌ಕ್ರೀಂ ಆರ್ಡರ್ ಮಾಡಿದ.

"ಅದೇ ಬೇಡವೆಂದು ಕುಳಿತಿದ್ದಳು. ಇನ್ನೊಂದೇಕೆ ? ಹಲ್ಲುಗಳು ಗಿಟುಕರಿಸಿಕೊಂಡು ಬರುತ್ತಿವೆ"

ಹೋಟಲಿನವನು ಐಸ್‌ಕ್ರೀಂ ತರುವುದಂತೂ ತಂದಿಟ್ಟ.

"ನನಗೆ ಬೇಡ. ನಾನು ತಿನ್ನುವುದಿಲ್ಲ"

ಹೆಂಡತಿಯ ಮಾತನ್ನು ಕೇಳಿಸಿಕೊಳ್ಳದಂತೆ ಗೋವಿಂದರಾಯ ಅತ್ತೆಯನ್ನು ಉದ್ದೇಶ ಮಾಡಿ ಹೇಳಿದ.

"ವಿಷಯ ನಿಮಗೆ ಪೂರಾ ಗೊತ್ತಿಲ್ಲ. ನಾನು ಈ ದಿನ ಐಸ್‌ಕ್ರೀಂ ತಿನ್ನಲು ಬಂದದ್ದು ನನಗಾಗಿ ಅಲ್ಲ. ಈ ಪ್ರಮಿಳೆಗಾಗಿ. ಇವಳಿಗೆ ಐಸ್‌ಕ್ರೀಂ ತಿನ್ನಿಸಬೇಕೆಂದೇ ಕರೆದುಕೊಂಡು ಬಂದೆ. ಒಳ್ಳೇ ಮಾತಿನಲ್ಲಿ ಇವಳು ತಿಂದರೆ

ಸರಿ. ಇಲ್ಲದೇ ಇದ್ದರೆ ಈ ದಿನ ಇವಳಿಗೆ ಐಸ್‌ಕ್ರೀಂ ಯಾಕೆ ತಿನ್ನಿಸಬೇಕಾಗಿ ಬಂದಿತೆಂಬುದನ್ನೆಲ್ಲಾ ನಿಮ್ಮೊಡನೆ ಹೇಳಿ ಪಂಚಾಯಿತಿ ಮಾಡಬೇಕಾಗುತ್ತದೆ"

ಪ್ರಮಿಳೆ ಮೂತೀ ಮುಂದೆ ಮಾಡಿಕೊಂಡು ಎರಡನೆಯ ಬಾರಿ ಬಂದ ಐಸ್‌ಕ್ರೀಮನ್ನೂ ತಿನ್ನಲು ಮೊದಲು ಮಾಡಿದಳು.

ನಾಗರತ್ನಮ್ಮನವರು "ಹುಡುಗರು. ನೀವು ಹೀಗೆಲ್ಲಾ ಲೀಲಂಕಗಳಾ ಡುವುದು ನ್ಯಾಯವಾಗಿಯೇ ಇದೆ. ಆದರೆ ಅದಕ್ಕೂ ಹೆತ್ತುಗೊತ್ತು ಬೇಡವೆ? ಇಲ್ಲಿ ಈ ಹೋಟಲಿನಲ್ಲಿ ಇವೆಲ್ಲಾ ಏನು" ಎಂದರು.

ಗೋವಿಂದರಾಯ ನಗುತ್ತಾ "ಅತ್ತೆ ಹೇಳಿದುದನ್ನು ಕೇಳಿದೆಯೋ ಇಲ್ಲವೋ ಪ್ರಮಿಳೆ. ಇಲ್ಲಿ ನಿನ್ನ ಲೀಲಂಕಗಳೊಂದೂ ಬೇಡ. ಬೇಗ ತಿಂದು ಮುಗಿಸು, ನಾವು ಹೊರಡಬೇಕು" ಎಂದ.

ಪ್ರಮಿಳೆ ಟೆನ್ನಿಸ್ ಚೆಂಡುಗಾತ್ರದ ಎರಡು ಐಸ್‌ಕ್ರೀಂ ತಿಂದುಕೊಂಡು ಹೋಟಲಿನಿಂದ ಹೊರಗೆ ಬರುವ ವೇಳೆಗೆ ಅವಳ ಹಲ್ಲುಗಳು ಗಟಕರಿಸುತ್ತಿದ್ದವು.

ಆ ದಿನ ಐಸ್‌ಕ್ರೀಂ ತಿನ್ನಿಸಿದ್ದು ಪ್ರಮಿಳೆಗೆ ಕಷ್ಟಕ್ಕಿಟ್ಟುಕೊಂಡರೂ ಪ್ರತಿ ಭಾನುವಾರವೂ ಗಂಡ ಸೌತ್‌ಪೆರೇಡಿಗೆ ಕರೆದುಕೊಂಡು ಹೋಗಿ ಐಸ್‌ಕ್ರೀಂ ಕೊಡಿಸುತ್ತಿದ್ದುದು ಬಹಳ ಪ್ರಿಯವಾಗಿರುತಿತ್ತು.

ಭಾನುವಾರ ಬೆಳಗಾಗ ಕಬ್ಬನ್‌ಪಾರ್ಕು ಸೌತ್‌ಪೆರೇಡುಗಳಲ್ಲಿ ತಿರುಗಿ ಕೊಂಡು ಬಂದರೆ ಸಾಯಂಕಾಲ ತಪ್ಪದೇ ಸಿನಿಮಾಗೆ ಹೋಗಿ ಬರುತ್ತಿದ್ದರು. ಅಂತೂ ಭಾನುವಾರ ಸ್ವಲ್ಪವೂ ಬೇಜಾರಿಲ್ಲದೇ ಕಳೆದುಹೋಗುತ್ತಿತ್ತು.

ಪ್ರತಿ ದಿನವೂ ಭಾನುವಾರವಾಗಬಾರದಾಗಿತ್ತೇ - ಎನ್ನಿಸುತ್ತಿತ್ತು ಪ್ರಮಿಳೆಗೆ.

ಗಾಳಿಯಲ್ಲಿ ಬಿದ್ದ ಪುಸ್ತಕದ ಹಾಳೆಗಳು ಪಟಪಟನೆ ಹಾರಿಹೋದಂತೆ ದಿನಗಳು ಹಾರಿ ಹೋಗುತ್ತಿದ್ದವು.

ಪ್ರಮಿಳೆಯ ಮದುವೆಯಾದದ್ದು ಶಿಶಿರದಲ್ಲಿ. ಆಗ ಚಳಿಯಿತ್ತು. ಮೆಲ್ಲಮೆಲ್ಲನೆ ಚಳಿಯು ಕಳೆದು ಸೆಕೆಯು ಆರಂಭವಾಯಿತು.

ಕೇವಲ ವಾತಾವರಣದಲ್ಲಿ ಮಾತ್ರವೇ ಅಲ್ಲ. ಸುತ್ತಮುತ್ತಲ ವಾತಾವರಣದಲ್ಲಿಯೂ ಬದಲಾವಣೆಗಳು ಕಂಡು ಬಂದುವು. ಮರಗಳು ಒಣಗಿದೆಲೆಗಳನ್ನು ಕೊಡವಿ ಬಿಟ್ಟವು. ಹೊಸ ಚಿಗುರುಗಳು ಕಾಣಿಸಿಕೊಳ್ಳತೊಡಗಿದವು.

ವಾತಾವರಣ, ಸುತ್ತಮುತ್ತ ವಸ್ತುಗಳಂತೆಯೇ ಪ್ರಮಿಳೆ ಹಳೆಯದೆಲ್ಲವನ್ನು ಮರೆದು ಹೊಸ ಜಗತ್ತಿನಲ್ಲಿ ಪದಾರ್ಪಣ ಮಾಡಿದ್ದಳು.

# ೭

ಉಗಾದಿಯೊಂದಿಗೆ ಹೊಸ ವರ್ಷವೂ ಬಂದಿತು.

ಹೊಸ ವರ್ಷ ಮುಂದಡಿಯಿಟ್ಟು ಹೊರಡುತ್ತಿದಂತೆಯೇ ರಾಮನವಮಿಯು ಸಮೀಪವಾಯಿತು. ಊರಿನ ನಾನಾ ಭಾಗಗಳಲ್ಲಿ ದೊಡ್ಡ ಪುಟ್ಟ ಚಪ್ಪರಗಳೇರ್ಪಟ್ಟು, ತಳಿರು ತೋರಣಗಳಿಂದ ಅಲಂಕೃತವಾದವು. ಸಂಗೀತ ಕಚೇರಿಗಳು ಆರಂಭವಾದವು. ಸಂಧ್ಯಾಕಾಲವಾದರೆ ಅಲ್ಲಿಂದೆಲ್ಲಾ ರಾಗ ಲಹರಿಗಳು ಹೊರಟು ಬಲು ದೂರದವರೆವಿಗೆ ಕೇಳಿ ಬರುತ್ತಿದ್ದವು. ಒಂದೊಂದು ದಿನ ಒಂದೊಂದು ಕಡೆ ಒಬ್ಬೊಬ್ಬರ ಕಚೇರಿ. ನಗರದ ಸಂಗೀತ ಪ್ರಿಯರಿಗೆಲ್ಲಾ ದೊಡ್ಡದೊಂದು ಹಬ್ಬವು ಬಂದಂತೆಯೇ ಆಗಿತ್ತು.

ಇದರಿಂದ ಪ್ರಮೀಳೆಯ ಮನೆಯವರ ಕಾರ್ಯಕ್ರಮಗಳಲ್ಲಿಯೂ ಬದಲಾವಣೆಯಾಯಿತು. ಸಾಯಂಕಾಲದ ವಾಕಿಂಗ್ ತಪ್ಪಿಹೋಯಿತು. ಆರೂವರೆ ಏಳು ಗಂಟೆಯ ಸಮಯದಲ್ಲಿ ಮನೆಬಿಟ್ಟು ಹೊರಟು ಚಾಮರಾಜಪೇಟೆಗೆ ಬರುತ್ತಿದ್ದರು. ಅಲ್ಲಿ ಭಾರೀ ಸಂಗೀತಗಳು ನಡೆಯುತ್ತಿದ್ದವು. ಅದಕ್ಕೆ ತಕ್ಕಂತೆಯೇ ದೊಡ್ಡ ಚಪ್ಪರ. ಸುತ್ತಮುತ್ತಲೂ ಬೇಕಾದಷ್ಟು ಜನಗಳು ಕುಳಿತುಕೊಳ್ಳುವುದಕ್ಕೆ ವಿಶಾಲವಾದ ಮೈದಾನಗಳು.

ಮೊದಲ ದಿನ ಮೈದಾನದಲ್ಲಿ ಒಣಗಿದ ಹುಲ್ಲಿನ ಮೇಲೆ ಕುಳಿತು ಕುಳಿತುಕೊಂಡಿದ್ದಾಗ ಗೋವಿಂದರಾಯ ತಮಾಷೆ ಮಾಡುತಾ ಹೇಳಿದ.

"ನಿನಗೆ ಬೇಕಾದರೆ ಒಳಗೆ ಹೋಗಿ ಕುಳಿತುಕೋ, ಪ್ರಮಿಳಾ"

"ಯಾಕೆ, ಇಲ್ಲಿಯೇ ಕುಳಿತುಕೊಳ್ಳಬಾರದೇ ?"

"ಇಲ್ಲಿಯೇ ಕುಳಿತುಕೊಳ್ಳಲು ನನಗಿಷ್ಟ. ನೀನು ಗಳಿಗೆಗೆ ನಾಲ್ಕು ರೀತಿ ಬದಲಾಯಿಸಿ ಕುಳಿತುಕೊಳ್ಳುತ್ತೀಯಲ್ಲಾ. ಇಲ್ಲಿ ಕುಳಿತುಕೊಳ್ಳಲು ಸಂಕೋಚವೋ ಅಂತ"

"ಸಂಕೋಚವೇನೂ ಇಲ್ಲ ಅಂದ್ರೆ. ಇಲ್ಲೆಲ್ಲಾ ಪುಟ್ಟಪುಟ್ಟ ನೊರಜು ಕಲ್ಲುಗಳೂ, ಒಣಗಿದ ಹುಲ್ಲೂ ಇದೆ. ಚುಚ್ಚಿಕೊಂಡಂತೆ ಆಗುತ್ತದೆ"

ಅದು ನಿಜ. ಗೋವಿಂದರಾಯನೂ ಅದನ್ನು ಅನುಭವ ಮಾಡುತ್ತಿದ್ದ.

"ಅದಕ್ಕೇ ನಾನು ಹೇಳಿದ್ದು. ಒಳಗಡೆಯಾದರೆ ಕುಳಿತುಕೊಳ್ಳಲು ಜಮುಖಾನ ಹಾಸಿರುತ್ತಾರೆ"

ಜಮುಖಾನ ಹಾಕಿರಬಹುದಾದ ಆ ಪ್ರದೇಶವನ್ನು ಮನಸ್ಸಿನಲ್ಲಿಯೇ ಊಹಿಸಿಕೊಳ್ಳುತ್ತಾ ಪ್ರಮಿಳೆ ಹೇಳಿದಳು.

"ಉಹುಂ. ಆದರೂ ಅಲ್ಲಿ ಸುಖವಿಲ್ಲ. ಹತ್ತಿರ ಹತ್ತಿರ ಜನ ಕುಳಿತುಕೊಂಡಿರುತ್ತಾರೆ. ಸೆಕೆ. ಕೆಮ್ಮುವುದಕ್ಕಿಲ್ಲ, ಗಟ್ಟಿಯಾಗಿ ಉಸಿರುಬಿಡುವುದಕ್ಕಿಲ್ಲ. ಇದೇಸರಿ. ಬೇಕಾದಾಗ ಸಂಗೀತ ಕೇಳಬಹುದು. ಬೇಡವಾದಾಗ ನಿರಾಳವಾಗಿ ಮಾತನಾಡಿಕೊಳ್ಳಬಹುದು. ಸೊಗಸಾದ ಗಾಳಿ. ಇದೇ ಚೆನ್ನಾಗಿದೆ"

"ಆದರೆ ಇಲ್ಲಿ ಒಣಗಿದ ಹುಲ್ಲು, ನೊರಜು ಕಲ್ಲುಗಳು ಚುಚ್ಚಿಕೊಳುತ್ತವೆಯಲ್ಲ"

"ಅವೂ ಚುಚ್ಚಿಕೊಳ್ಳಬಾರದು. ಹೀಗೂ ಇರಬೇಕು"

"ಆಗಲಿ. ಅದಕ್ಕೇನಾದರೂ ಏರ್ಪಾಟು ಮಾಡೋಣವಂತ'

"ಅದೇನು ಅಷ್ಟು ಪ್ರಯಾಸಪಡಬೇಕಾಗಿಲ್ಲ ಅಂದ್ರೆ. ನೋಡಿ. ಎಷ್ಟು ಜನ ಚಾಪೆ, ಜಮುಖಾನಗಳನ್ನು ತಂದುಕೊಂಡಿದ್ದಾರೆ. ನಾವೂ ಒಂದು ಹ್ಯಾಂಡ್‌ಬ್ಯಾಗ್‌ನಲ್ಲಿ ಹಾಕಿಕೊಂಡು ಬಂದರಾಯಿತು"

ಜಮುಖಾನ ಹಾಕಿ ಕುಳಿತುಕೊಳ್ಳುವುದು ಹಿತಕರವೆನ್ನಿಸಿದರೂ ಪ್ರಮಿಳೆ ಹೇಳಿದಂತೆ ಹ್ಯಾಂಡ್‌ಬ್ಯಾಗ್‌ನಲ್ಲಿ ಜಮುಖಾನ ಹಾಕಿಕೊಂಡು ಬರುವುದು ಶಂ

ತೋರಲಿಲ್ಲ. ಗೋವಿಂದರಾಯ ಸ್ವಲ್ಪದೂರದಲ್ಲಿ ಬಂದು ಕುಳಿತಿದ್ದ ಸಂಸಾರವನ್ನು ನೋಡಿದ. ಅವರು ಕಾರ್‌ನಲ್ಲಿ ಬಂದಿದ್ದರು. ಕಾರ್‌ನ ಪಕ್ಕದಲ್ಲಿ ದೊಡ್ಡದೊಂದು ಜಮಖಾನ ಹಾಕಿಕೊಂಡು ಕುಳಿತಿದ್ದರು. ತಾನಗೂ ಹಾಗೆ ಕಾರಿದ್ದರೆ ಅತ್ತೆ, ಹೆಂಡತಿಯೊಡನೆ ಬರಬಹುದು, ಜಮಖಾನವನ್ನು ಬೇಕಾದರೂ ತಂದುಕೊಳ್ಳಬಹುದು ಎಂದು ಮನಸ್ಸಿನಲ್ಲಿಯೇ ಯೋಚನೆಮಾಡುತ್ತಿದ್ದ.

ಗಂಡ ಏನೋ ಯೋಚನಾಮಗ್ನನಾಗಿದ್ದಾನೆಂದು ಗ್ರಹಿಸಿದ ಪ್ರಮಿಳೆ ಕೇಳಿದಳು.

"ಏನೊಂದ್ರೆ. ಏನೋ ಯೋಚನೆ ಮಾಡುತ್ತಿದ್ದೀರಿ ?"

ತನ್ನ ಮನಸ್ಸಿನಲ್ಲಿ ಬಂದ ಭಾವನೆಯನ್ನು ಹೇಳುವುದಕ್ಕೆ ಸಂಕೋಚವಾಗಿ ಅವನು ಸುಮ್ಮನೆ ಕುಳಿತುಕೊಂಡ.

"ಏನೋ ಯೋಚನೆ ಮಾಡುತ್ತಿದ್ದೀರಿ. ಹೇಳಬಾರದೇ"

"ಇಲ್ಲ. ಸಂಗೀತ ಕೇಳುತ್ತಿದ್ದೇನೆ"

ಅವನು ಸಂಗೀತ ಕೇಳುತ್ತಿಲ್ಲವೆಂದೂ ಏನೋ ಯೋಚಿಸುತ್ತಿದ್ದಾನೆಂದೂ ಅವಳಿಗೆ ಸ್ಪಷ್ಟವಾಗಿ ಅನ್ನಿಸಿತು. ಆದರೆ ಅದನ್ನು ಒತ್ತಾಯಮಾಡಿ ಅದೇನು ಎಂದು ಕೇಳುವುದಕ್ಕೆ ಅವಕಾಶವಿರಲಿಲ್ಲ. ಯಾರೊಂದಿಗೋ ಕುಳಿತು ಮಾತನಾಡುತ್ತಿದ್ದ ನಾಗರತ್ನಮ್ಮನವರು ಬಂದುಬಿಟ್ಟರು.

ಸಂಗೀತ ಆರಂಭವಾಗಿ ಇನ್ನೂ ಸ್ವಲ್ಪಹೊತ್ತು ಮಾತ್ರವೇ ಆಗಿತ್ತು. ಅವರು ಕುಳಿತುಕೊಂಡೇ ಇದ್ದರು.

ಮತ್ತೂ ಸ್ವಲ್ಪಹೊತ್ತು ಕಳೆದನಂತರ ದೂರದಲ್ಲಿ ಯಾರೋ ಪರಿಚಯವಾದ ಒಂದು ಮುಖವನ್ನು ನೋಡಿದಂತಾಯಿತು ಪ್ರಮಿಳೆಗೆ. ಮುಖ ತೀರ ಪರಿಚಯವಾದುದು. ಮೊದಲು ನೋಡಿದೊಡನೆಯೇ ಗುರುತು ಸಿಕ್ಕದಿದ್ದರೂ ಎರಡನೆಯ ಗಳಿಗೆಯಲ್ಲಿಯೇ ಗೊತ್ತಾಯಿತು. ಹಾಗೆ ಬರುತ್ತಿದ್ದವಳು ಶಾರದೆ. ಸಂದೇಹವೇ ಇಲ್ಲ. ಅವಳ ಜೊತೆಯಲ್ಲಿ ಹಳೇ ಸ್ನಾತ

ಳನ್ನು ಹಾಕಿಕೊಂಡು ಬರುತ್ತಿರುವ ಮಕ್ಕಳನ್ನು ನೋಡಿದನಂತರವಂತೂ ಅವಳು ಶಾರದೆಯೆಂಬುದರಲ್ಲಿ ಸಂದೇಹವೇ ಇಲ್ಲ.

ಶಾರದೆ ದೂರದಲ್ಲಿ ಬರುತ್ತಿದ್ದಳು. ಅವಳು ಎತ್ತಕಡೆಯೋ ಹೋಗುತ್ತಿದ್ದಾಳೆ. ಕತ್ತಲಲ್ಲಿ ಕುಳಿತಿರುವ ತನ್ನನ್ನು ನೋಡಲಿಲ್ಲ ಅಂದುಕೊಂಡಳು. ಹಾಗೆಂದುಕೊಳ್ಳುವುದೇ ಪ್ರಮಿಳೆಗೆ ಹಿತಕರವಾಗಿತ್ತು.

ಉಹುಂ. ಅದು ಹಾಗಾಗಲೇ ಇಲ್ಲ. ದೂರದಲ್ಲಿ ಕುಳಿತಿದ್ದ ಶಾರದಾ ಪ್ರಮಿಳೆಯನ್ನು ಕಂಡಿದ್ದಳು. ಅವಳನ್ನು ನೋಡಿ ಮಾತನಾಡಿಸಿಕೊಂಡು ಹೋಗಬೇಕೆಂದೇ ಎದ್ದು ಹತ್ತಿರಕ್ಕೆ ಬಂದಿದ್ದಳು.

ಅವಳು ಸಮೀಪಗತವಾಗುತ್ತಲೇ ಬರುತ್ತಿರುವುದು ತನ್ನ ಬಳಿಗೇ ಎಂದು ಪ್ರಮಿಳೆಗೆ ತೋರಿತು. ಅವಳೇಕೆ ಬರುತ್ತಾಳೆ? ಪ್ರಮಿಳೆ ಪ್ರಯತ್ನ ಪುರಸ್ಸರವಾಗಿ ಮಾಧವರಾಯನನ್ನು ಮರೆತು ಬಿಟ್ಟಿದ್ದಳು. ಅವನನ್ನಾಗಲೀ, ಅವನ ಕಡೆಯವರನ್ನಾಗಲೀ, ಹಿಂದಿನ ಯಾವುದೇ ಘಟನೆಗಳನ್ನಾಗಲೀ ಜ್ಞಾಪಕಮಾಡಿಕೊಳ್ಳುವುದು ಪ್ರಮಿಳಗೆ ಬೇಡವಾಗಿತ್ತು.

ಶಾರದೇ ಸಮೀಪಗತಳಾಗಿ ಬಂದು ನಿಂತುಕೊಂಡು "ಏನು ಪ್ರಮಿಳಾ. ಜ್ಞಾಪಕವಿದೆಯೇ ?" ಎಂದಳು.

ಬಲಾತ್ಕಾರವಾಗಿ ಮುಖದ ಮೇಲೆ ನಗುವನ್ನು ತಂದುಕೊಂಡು "ಚೆನ್ನಾಯಿತು. ಜ್ಞಾಪಕವಿಲ್ಲದೇ ಇರುತ್ತದೆಯೆ ? ಚೆನ್ನಾಗಿದ್ದೀರಾ ?" ಎಂದಳು.

ಪ್ರಮಿಳೆ ತನ್ನನ್ನು ಕುಳಿತುಕೊಳ್ಳಲು ಹೇಳುತ್ತಾಳೆ ಎಂದು ಶಾರದೆ ಅಲ್ಲಿಯೇ ನಿಂತುಕೊಂಡಳು. ಹೇಳಲಿಲ್ಲ. ಅವಳೊಂದಿಗೆ ಕುಳಿತುಕೊಂಡಿರುವವರು ಯಾರಾಗಿರಬಹುದೆಂದು ಊಹೆಮಾಡಿಯೂ ಮಾಡಿದಳು. ಆ ಗಂಡಸಂತೂ ಅವಳ ಗಂಡ. ವೃದ್ಧೆಯಾದ ಹೆಂಗಸು ಅತ್ತೆ ಎಂದುಕೊಂಡಳು. ಗಂಡ ಮತ್ತು ಅತ್ತೆಯ ಎದುರಿಗೆ ಗೆಳತಿಯಾದ ತನ್ನನ್ನು ಕುಳಿತುಕೋ ಎಂದು ಹೇಳಲು ಸಂಕೋಚವೆಂದು ಭಾವನೆ ಮಾಡಿದಳು.

ಶಾರದೆಗೆ ಅಲ್ಲಿಯೇ ಕುಳಿತುಕೊಂಡು ಪ್ರಮಿಳೆಯ ಯೋಗಕ್ಷೇಮವನ್ನು ವಿಚಾರಿಸಿ ತಿಳಿದುಕೊಳ್ಳಬೇಕೆಂದು ಇಷ್ಟ. ಆದರೆ ಅವಳು ಕುಳಿತುಕೋ

ಎಂದು ಹೇಳದಿದ್ದರೂ ಕುಳಿತುಕೊಳ್ಳುವುದು ಹೇಗೆಂದು ಸಂಕೋಚ. ಆದರಿಂದ ಏನೂ ಮಾಡುವುದಕ್ಕೂ ತೋರದೇ ನಿಂತುಕೊಂಡಿದ್ದಳು.

ಅವಳ ಸ್ಥಿತಿಯು ಪ್ರಮಿಳೆಗೂ ಅರ್ಥವಾಯಿತು. ಅವಳೊಡನೆ ಯಾವ ಸಂಬಂಧವನ್ನೂ ಇಟ್ಟುಕೊಳ್ಳಲು ಇಷ್ಟವಿಲ್ಲದಿದ್ದ ಪ್ರಮಿಳಾ ಒಂದು ಗಳಿಗೆ ಹಾಗೆಯೇ ನಿಂತಿರಲಿ. ಆಮೇಲೆ ಅವಳೇ ಹೊರಟು ಹೋಗುತ್ತಾಳೆ–ಎಂದು ಸುಮ್ಮನಾದಳು.

ಅವಳೆಂದುಕೊಂಡಂತೆಯೇ ಆಗುತ್ತಿದ್ದಿತೋ ಏನೋ ? ಆದರೆ ಹಾಗಾಗಲಿಲ್ಲ. ಪ್ರಮಿಳೆಯ ಗೆಳತಿ ಕುಳಿತುಕೊಳ್ಳಲು ಸಂಕೋಚದಿಂದ ನಿಂತಿರುವುದನ್ನು ನಾಗರತ್ನಮ್ಮನವರೂ ಗ್ರಹಿಸಿದರು. ತಮ್ಮೆದುರಿಗೆ ಅವಳನ್ನು ಕುಳಿತುಕೊಳ್ಳುವುದಕ್ಕೆ ಹೇಳಲು ಪ್ರಮಿಳೆಗೆ ಸಂಕೋಚವೆಂದುಕೊಂಡರು.

ಅವರು "ಯಾಕೆ ನಿಂತಿದ್ದೀಯೆ. ಕುಳಿತುಕೋಮ್ಮ" ಎಂದರು.

ಶಾರದೆಗೂ ಅದೇ ಬೇಕಾಗಿತ್ತು. ಅವಳು ಮಕ್ಕಳನ್ನೂ ಕುಳ್ಳಿರಿಸಿಕೊಂಡು ತಾನೂ ಕುಳಿತಳು.

ಪ್ರಮಿಳೆಯೂ ಅವಳ ಗೆಳತಿಯೂ ಮಾತನಾಡುತ್ತಾರೆಂದು ನಾಗರತ್ನಮ್ಮ ನಿರೀಕ್ಷೆ ಮಾಡಿದರು. ಅವಳು ಮಾತನಾಡದಿರಲು ತಾವಿರುವುದರಿಂದ ಸಂಕೋಚ ಎಂದುಕೊಂಡರು. ಸಾಧ್ಯವಿದ್ದಿದ್ದರೆ ಗೋವಿಂದರಾಯನನ್ನು ಕರೆದುಕೊಂಡು ಅವರು ಹೊರಟುಹೋಗಿ ಆ ಹುಡುಗಿಯರಿಬ್ಬರೂ ಮಾತನಾಡುವುದಕ್ಕೆ ಅವಕಾಶಮಾಡಿ ಕೊಡುತ್ತಿದ್ದರು. ಹಾಗೆ ಹೋಗುವುದು ಚೆನ್ನಾಗಿರುವುದಿಲ್ಲ. ಅದರಿಂದ ತಾವೇ ಮಾತನಾಡಿಸಲು ಮೊದಲು ಮಾಡಿದರು.

"ನಿನ್ನ ಹೆಸರೇನಮ್ಮ"

"ಶಾರದಮ್ಮ"

"ಒಳ್ಳೆಯದು. ನೀನು ನಮ್ಮ ಪ್ರಮಿಳೆಯ ಫ್ರೆಂಡ್ ಎಂದು ಕಾಣುತ್ತದೆ."

ನಾಗರತ್ನಮ್ಮ ಆ ಮಾತು ಹೇಳುತ್ತಲೇ ಪ್ರಮಿಳೆಯ ಹೃದಯ ಪಟಪಟನೆ ಹೊಡೆದುಕೊಳ್ಳಲು ಆರಂಭವಾಯಿತು. ತನ್ನ ಸೋದರತ್ತೆ ಏನಾದ

ವನ್ನು ಅಷ್ಟಕ್ಕೇ ಬಿಡುವುದಿಲ್ಲ. ಪ್ರತಿಯೊಂದು ವಿವರವನ್ನೂ ವಿಚಾರಿಸುತ್ತಾರೆ. ಇಲ್ಲದ ಮಾತುಗಳನ್ನೆಲ್ಲಾ ಆಡುತ್ತಾರೆ. ಅವಳ ವಿಷಯವೆಲ್ಲಾ ಕೇಳಿ ತಿಳಿದುಕೊಂಡ ನಾಗರತ್ನಮ್ಮ "ಇವಳು ನಿನಗೆ ಹೇಗೆ ಗುರುತು?" ಎಂದರೇ? ಈ ಆಲೋಚನೆಗಳೆಲ್ಲವೂ ಕ್ಷಣಾರ್ಧದಲ್ಲಿ ಪ್ರಮಿಳೆಯ ಮನಸ್ಸಿಗೆ ಬಂದುವು. ಶಾರದೇ ಮಾತನಾಡುವ ಮೊದಲು ಅವಳು ಬಾಯಿ ಹಾಕಿದಳು.

"ಇವರು ಫ್ರೆಂಡ್! ಅಂದರೆ ಫ್ರೆಂಡ್ ಅಂತ ಫ್ರೆಂಡ್ ಅಲ್ಲ. ಇವರ ತಂಗಿಯೂ ನಾನೂ ಫ್ರೆಂಡ್ಸ್. ಹಾಗೆ ಇವರಿಗೂ ನನಗೂ ಫ್ರೆಂಡ್‌ಶಿಪ್. ಇವರೂ ಶಿವನಸಮುದ್ರದಲ್ಲಿಯೇ ಇದ್ದರು"

ಆ ಮಾತುಗಳನ್ನು ಕೇಳಿ ಶಾರದೆಗೆ ನಗು ಬಂದುಬಿಟ್ಟಿತು. ಅವಳು ನಕ್ಕುಬಿಟ್ಟಳು.

ನಾಗರತ್ನಮ್ಮ ಲೋಕಾಭಿರಾಮವಾಗಿ "ಹಾಗೇಕೆ ನಗುತ್ತೀರಿ, ಶಾರದಮ್ಮ" ಎಂದು ಕೇಳಿದರು.

ತನ್ನ ಮಾತಿಗೆ ಅವಳು ನಕ್ಕುದು, ಅದಕ್ಕೆ ಸರಿಯಾಗಿ ನಾಗರತ್ನಮ್ಮ ಕೇಳಿದುದು ಇವುಗಳನ್ನು ಗಮನಿಸಿದ ಪ್ರಮಿಳೆಗೆ ದಿಗಿಲಾಗತೊಡಗಿತು.

"ಈ ಪ್ರಮಿಳ ಇತ್ತೀಚೆಗೆ ಎಷ್ಟು ಗಂಭೀರವಾಗಿ ಹೋದಳು. ಅದನ್ನು ನೋಡಿದರೆ ನಗುಬರುತ್ತದೆ"

ಶಾರದಾ ಇರುವ ವಿಷಯವನ್ನು ಹೇಳಲಿಲ್ಲವಲ್ಲ. ಬೆಟ್ಟದಂತೆ ಬಂದದು ಮೋಡದಂತೆ ತೇಲಿಹೋದ ಹಾಗೆ ಆಯಿತು ಪ್ರಮಿಳೆಗೆ.

ಸ್ವಲ್ಪಹೊತ್ತು ಲೋಕಾಭಿರಾಮವಾಗಿ ಮಾತನಾಡುತ್ತಾ ಕುಳಿತಿದ್ದು, "ನಾನು ಬರುತ್ತೇನಮ್ಮ. ಇನ್ನೂ ಬಹಳ ದೂರ ಹೋಗಬೇಕು" ಎಂದಳು ಶಾರದೆ.

"ಎಲ್ಲಿ ನಿಮ್ಮ ಮನೆ"

"ಚಾಮರಾಜಪೇಟೆ ಕೊನೆಯಲ್ಲಿ"

"ಯಾವಾಗಲಾದರೂ ನಮ್ಮ ಮನೆಕಡೇ ಬರುತ್ತಿರಿ. ನಾನು ಸ್ಕೂಲಿಗೆ, ನಮ್ಮ ಹುಡುಗ ಫ್ಯಾಕ್ಟರಿಗೆ ಹೋದರೆ ಪ್ರಮಿಳೆ ಒಬ್ಬಳೇ ಮನೆಯಲ್ಲಿರುತ್ತಾಳೆ"

"ಅಂದಹಾಗೆ. ನಿಮ್ಮ ಮನೆ ಎಲ್ಲಿ ಕೇಳಬೇಕು ಅಂತ ಇದ್ದವಳು ಮರೆತೇ ಹೋದೆ"

"ನಮ್ಮ ಮನೆ ಬಾಂದಿನವರ ಬೀದಿಯಲ್ಲಿ" ಎಂದು ಹೇಳಿ ನಾಗರತ್ನಮ್ಮನವರು ಮನೆಯ ನಂಬರು ಗುರುತುಗಳನ್ನು ಹೇಳಿದರು.

ನೋದರತ್ತಿ ಬರಬೇಕೆಂದು ಯಾಕೆ ಕರೆದರು, ಅವಳೇಕೆ ಬರುತ್ತಾಳೆ-ಮುಂತಾಗಿ ಮನಸ್ಸಿನಲ್ಲಿಯೇ ದುಮುಗುಟ್ಟುತ್ತಾ ಪ್ರಮಿಳೆ ಕುಳಿತಿದ್ದಳು.

ಶಾರದೆ ಅಲ್ಲಿಂದ ಹೋಗುತ್ತಾ "ಬರುತ್ತೇನೆ ಪ್ರಮಿಳಾ. ಸಾಧ್ಯವಾದಾಗ ಮನೆಯ ಕಡೆ ಬಂದು ನೋಡುತ್ತೇನೆ" ಎಂದಳು.

ಮಾರನೆಯ ದಿನ ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿನಲ್ಲಿ ಗೌರಮ್ಮನವರು ಪ್ರಮಿಳೆಯ ಕೋಣೆಗೆ ಹೋಗಿ ಮಂಚದ ಬಳಿ ನಿಂತು "ಪ್ರಮಿಳಮ್ಮ. ಪ್ರಮಿಳಮ್ಮ" ಎಂದು ಕೂಗಿದರು.

ಅವಳಿಗೆ ಎಚ್ಚರವಾದನಂತರ "ಯಾರೋ ನಿಮ್ಮ ಸ್ನೇಹಿತರಂತೆ, ಹುಡುಕಿಕೊಂಡು ಬಂದಿದ್ದಾರೆ" ಎಂದರು.

ಪ್ರಮಿಳೆ ಬೆಂಗಳೂರಿನಲ್ಲಿ ಗಂಡನ ಮನೆಯಲ್ಲಿ ಬಾಳಿದುವುದಕ್ಕೆ ಮೊದಲುಮಾಡಿದನಂತರ ಅವಳಿಗೆ ಸ್ನೇಹಿತರಾರೂ ಇರಲಿಲ್ಲ. ಅವಳನ್ನು ಹುಡುಕಿಕೊಂಡು ಯಾರೂ ಬರುತ್ತಿರಲಿಲ್ಲ. ಅವರೂ ನಿಮ್ಮ ಸ್ನೇಹಿತರಂತೆ ಎಂದ ಕೂಡಲೇ ಬಂದವಳು ಶಾರದೆಯೇ ಇರಬೇಕೆಂದುಕೊಂಡಳು. ನ್ಯಾಯೆಲ್ಲಾ ಉರಿದುಕೊಂಡು ಬಂದಿತು. ವಿಧಿಯಿಲ್ಲದೇ ಹೊರಗೆ ಬಂದಳು.

ಸರಿ. ಬಂದವಳು ಶಾರದೆಯೇ. ಜೊತೆಯಲ್ಲಿ ಅವಳೆರಡು ಮಕ್ಕಳೂ ಬಂದಿದ್ದವು.

ಅಯ್ಯೋ! ದೇವರೇ. ಯಾಕೆ ಹೀಗೆ ಬಂದು ಗೋಳು ಹೊಯ್ದುಕೊಳ್ಳುತ್ತಾಳೆಯೋ!

ಖಂಡಿತ ಶಾರದೇ ತನ್ನನ್ನು ನೋಡಲು ಬರುವುದು, ಅವಳೊಡನೆ ಮಾತನಾಡುವುದು ಒಂದೂ ಪ್ರಮೀಳೆಗೆ ಬೇಕಾಗಿರಲಿಲ್ಲ, ಮುಖಕೊಟ್ಟು ಮಾತನಾಡದೇ ಕಳಿಸಿಬಿಡೋಣವೆಂದು ತೋರಿತು. ಆದರೆ ಮರುಕ್ಷಣದಲ್ಲಿಯೇ ಬೇರೊಂದು ಆಲೋಚನೆಯು ಬಂದಿತು.

ಇಲ್ಲ. ಹಾಗೆ ಮಾಡಬಾರದು. ಶಾರದೆಯೊಂದಿಗೆ ನಿಷ್ಠುರ ಕಟ್ಟಿಕೊಳ್ಳಬಾರದು. ಅವಳ ಸ್ನೇಹ ವಿಶ್ವಾಸಗಳೇ ಬಹಳ ಆವಶ್ಯಕ.

ಮುಖದಲ್ಲಿ ಇಲ್ಲದ ನಗುವನ್ನು ತಂದುಕೊಂಡು ಆದರ ವಿಶ್ವಾಸಗಳಿಂದ ಮಾತನಾಡಿಸಿ ಶಾರದಮ್ಮನನ್ನು ಬಳಿಗೆ ಕರೆದುಕೊಂಡು ಹೋಗಿ ಕೂರಿಸಿದಳು.

ಪ್ರಮಿಳೆಯು ತೋರಿದ ಆದರವಿಶ್ವಾಸಗಳನ್ನು ನೋಡಿ ಶಾರದೆಗೂ ಸಮಾಧಾನವಾಯಿತು.

ಹಿಂದಿನ ದಿನ ಸಂಜೆ ದುಮುಗುಟ್ಟುತ್ತಾ ಕುಳಿತಿದ್ದುದನ್ನು ನೋಡಿ ಅವಳಿಗೆ ತನನ್ನು ನೋಡುವುದಕ್ಕೂ ಮಾತನಾಡುವುದಕ್ಕೂ ಇಷ್ಟವಿಲ್ಲವೇನೋ ಎನ್ನಿಸಿಯೂ ಇತ್ತು. ಪ್ರಮಿಳೆ ತನ್ನೊಂದಿಗೆ ಯಾಕೆ ಏನೋ ಒಂದು ತರಹವಾಗಿದ್ದಾಳೆ. ತಾನು ಅವಳಿಗೆ ಮಾಡಬಾರದ್ದೇನು ಮಾಡಿದ್ದೇನೆ. ಒಂದು ವಿಧವಾಗಿ ನೋಡಿದರೆ ತಾನು ಪ್ರಮಿಳೆಗೆ ಮಾಡಿದಷ್ಟು ಉಪಕಾರ ಮತ್ತಾರೂ ಮಾಡಿರಲಾರರು. ದಾರಿತಪ್ಪಿ ಹೋಗುತ್ತಿದ್ದವಳಿಗೆ ಬುದ್ಧಿಹೇಳಿ ಕಳುಹಿಸಿದ್ದಾಳೆ. ಆದರ ಮೇಲೆಯೇ ಬಂದು ಮದುವೆಮಾಡಿಕೊಂಡು ಸುಖವಾಗಿದ್ದಾಳೆ.

ಹಾಗಿರುವಾಗ ಪ್ರಮಿಳೆ ತನ್ನ ವಿಷಯದಲ್ಲಿ ಏನೋ ಒಂದು ತರಹವಾಗಿರುವುದೇಕೆ ?

ಯೋಚನೆಮಾಡುತ್ತಾ ನೂಡುತ್ತಾ ತನ್ನ ವಿಷಯದಲ್ಲಿ ಪ್ರಮಿಳೆ ಅನ್ಯಥಾ ಭಾವಿಸುವುದಕ್ಕೆ ಕಾರಣವೇ ಇಲ್ಲವೆಂದು ತೋರುವುದು. ಗಂಡ ಅತ್ತೆಯರು ಕುಳಿತಿದ್ದುದರಿಂದ ಅವಳು ಹಾಗೆ ನಡೆದುಕೊಂಡಳೆಂದೆನಿಸಿತು.

ಯಾವುದನ್ನೂ ನೋಡಿಕೊಂಡು ಹೋಗೋಣವೆಂದವಳು ಬಂದಿದ್ದಳು. ಪ್ರಮಿಳೆ ವಿಶ್ವಾಸವಾಗಿ ಕಂಡು ಮಾತನಾಡಿಸಿದುದರಿಂದ ಅವಳಿಗೆ ಸಮಾಧಾನವಾಯಿತು.

ಆದರೂ ತಾನು ಬಂದುದಕ್ಕೆ ಕಾರಣವನ್ನು ಒಪ್ಪಿಸುವಂತೆ ಹೇಳಿದಳು.

"ಪ್ರಮಿಳಾ ನಮ್ಮ ಹುಡುಗರಿಗೂ ಮನೆಯಲ್ಲಿದ್ದು ಇದ್ದು ಬೇಜಾರು. ಅವರನ್ನು ಯಾರು ಹೊರಗೆ ಕರೆದುಕೊಂಡು ಹೋಗಬೇಕು. ಅವರಪ್ಪ ಹೇಗೂ ಮಾತೇ ಆಡಿಸುವುದಿಲ್ಲ. ಎಲ್ಲಿಯಾದರೂ ಹೋಗಬೇಕು-ಎಂದು

ಆಸೆಪಡುತ್ತಾರೆ. ಬಹಳ ದಿನಗಳಿಂದ ನಿನ್ನನ್ನು ನೋಡಿ ಮಾತನಾಡ ಬೇಕು–ಎಂದೇ ಇದ್ದೆ. ನಿನ್ನೆ ನೋಡಿದೆನಲ್ಲಾ, ನಿಮ್ಮ ಅತ್ತೆಯವರು ಕರೆದ ಮೇಲೆ ಬಂದು ನೋಡಿಕೊಂಡು ಹೋಗಬೇಕೆನ್ನಿಸಿತು ಮಕ್ಕಳ ಬೇಜಾರೂ ತೀರಿದಂತಾಯಿತು. ನನ್ನ ಮನಸ್ಸಿನ ಇಚ್ಛೆಯೂ ನೆರವೇರಿದಂತಾಯಿತು. ಬಂದೆ"

ಪ್ರಮಿಳೆಯು ಬಂದು ಕುಳಿತವಳೊಡನೆ ಏನಾದರೂ ಮಾಡಬೇಕಲ್ಲ.

ನಗುತ್ತಾ "ಓಹೋ! ನಿನ್ನೆಯ ದಿನ ನಿಮ್ಮೊಂದಿಗೆ ಮಾತನಾಡಿದವರು ನಮ್ಮ ಅತ್ತೆ ಎಂದುಕೊಂಡಿರಾ ?" ಎಂದಳು.

"ಅಲ್ಲವೇನು ? ಹಾಗಾದರೆ ಅವರಾರು ?"

"ಅವರು ನಮ್ಮ ಸೋದರತ್ತೆ"

ಶಾರದೆ ಗೆಳತಿಯ ಕಡೆ ವಿಸ್ಮಯದಿಂದ ನೋಡಿದಳು.

ಅವಳಿಗೇನೋ ಹೇಳಬೇಕೆಂದುಕೊಂಡ ಪ್ರಮಿಳೆ ಅವಳ ಕಡೆಗೂ ಅವಳ ಮಕ್ಕಳ ಕಡೆಗೂ ನೋಡಿದಳು. ಮುಖಗಳಲ್ಲಿ ಬೆವರಿನ ಹನಿಗಳು ಕಂಡುವು. ಅವರು ದಣಿದಿದ್ದ ಹಾಗೆ ಕಂಡು ಬರುತಿದ್ದಿತು.

"ಇರಿ ಶಾರದಮ್ಮ. ನೋಡಿ. ನನ್ನ ಬುದ್ಧಿಯೇ ಕೆಟ್ಟುಹೋಗಿದೆ. ಮಕ್ಕಳು ಬಿಸಿಲಿನಲ್ಲಿ ಬಂದಿವೆ. ಅದನ್ನು ಗಮನಿಸದೆಯೇ ಮಾತನಾಡುತ್ತ ಕುಳಿತುಕೊಂಡುಬಿಟ್ಟೆ, ಸ್ವಲ್ಪ ತಡೆಯಿರಿ. ಬಂದುಬಿಟ್ಟೆ" ಎಂದವಳೇ ಒಳ ಗೆದ್ದು ಹೋದಳು.

ಗಳಿಗೆಯ ಹೊತ್ತು ಶಾರದಮ್ಮ ಕುಳಿತಿದ್ದ ಕಡೆಯೇ ಕುಳಿತಿದ್ದಳು. ಅನಂತರ ಒಳಗೆದ್ದು ಹೋದಳು. ಮಧ್ಯಾಹ್ನದ ಹೊತ್ತು ನಲ್ಲಿಯಲ್ಲಿ ನೀರಿರ ಲಿಲ್ಲ. ಅಂಗಳದಲ್ಲಿ ಕೊಳದಪ್ಪಲೆಯು ತುಂಬಾ ತಣ್ಣೀರಿತ್ತು. ಮಕ್ಕಳಿಗೆ ಕೈಕಾಲು ಮುಖಗಳನ್ನು ತೊಳೆದು ಸೀರೆಯ ಸೆರಗಿನಲ್ಲಿ ಒರಸಿ ತಾನೂ ತೊಳೆ ದುಕೊಂಡಳು.

ತನಗೆ ಬಾಗಿಲು ತೆರೆದ ಮುದುಕಿ ನಡುಮನೆಯಲ್ಲಿ ಮಲಗಿದ್ದುದನ್ನು ಒಳಗೆ ಬರುತ್ತಾ ನೋಡಿದಳು. ಪುನಃ ಹೊರಗೆ ಹೋಗಿ ಹಜಾರದಲ್ಲಿ ಕುಳಿ ತುಕೊಳ್ಳಬೇಕಾಗಿದ್ದ ಶಾರದೆಗೆ ಪ್ರಮಿಳೆ ಏನುಮಾಡುತ್ತಿದ್ದಾಳೆಯೋ ನೋಡ ಬೇಕೆನ್ನಿಸಿತು.

ಪ್ರಮಿಳೆ ಅಡಿಗೆಯ ಮನೆಯಲ್ಲಿ ಮೂರು ನಾಲ್ಕು ನಿಂಬೆಹಣ್ಣುಗಳನ್ನು ಹೆಚ್ಚಿಟ್ಟು ಬೆಳ್ಳಿಯ ಬಟ್ಟಲಿಗೆ ಹಿಂಡುತ್ತಿದ್ದಳು.

ಅದನ್ನು ನೋಡಿದ ಶಾರದೆ "ಇವೆಲ್ಲಾ ಯಾಕೆ, ಪ್ರಮಿಳಾ" ಎಂದಳು.

"ಚೆನ್ನಾಯಿತು. ನಿಮಗೆ ಬೇಡವಾದರೆ ಮಕ್ಕಳಿಗೆ ಬೇಡವೆ? ಸ್ವಲ್ಪ ಕುಳಿತುಕೊಳ್ಳಿ. ಆಗಿಹೋಯಿತು. ಬಂದುಬಿಟ್ಟೆ"

ಪ್ರಮಿಳೆ ಹೇಳಿದಂತೆ ಶಾರದೆ ಹಜಾರಕ್ಕೆ ಹೊರಟು ಹೋಗಲಿಲ್ಲ. ಅಲ್ಲಿಯೇ ಮಾತನಾಡುತ್ತಾ ಕುಳಿತುಕೊಂಡಳು. ಶಾರದೆ ತನ್ನ ಗೆಳತಿಗೂ ಅವಳ ಮಕ್ಕಳಿಗೂ ಪಾನಕವನ್ನು ಕೊಟ್ಟು ತಾನೂ ಕುಡಿದು ಅನಂತರ ಹೊರಗೆ ಬಂದಳು.

ಪ್ರಮಿಳೆ ಶಾರದೆಯರು ಮಾತನಾಡುತ್ತಾ ಕುಳಿತುಕೊಂಡರು. ಮಕ್ಕಳು ಹಜಾರದಲ್ಲಿ ಆಡುತ್ತಿದ್ದರು.

ಮನೆಯಲ್ಲಿ ಹಿರಿಯರಾರೂ ಇರಲಿಲ್ಲ. ಒದ್ದ ಗೌರಮ್ಮ ಮುದುಕಿ. ಮಧ್ಯಾಹ್ನದ ಉರಿ ಬಿಸಿಲಿಗೆ ಸಂತಪ್ತರಾಗಿ ನೆಲದ ಮೇಲೆ ಮಲಗಿ ನಿದ್ರೆ ಮಾಡುತ್ತಿದ್ದರು. ಅವರಿಬ್ಬರೂ ಬಲು ಹೊತ್ತು ಮಾತನಾಡುತ್ತಾ ಕುಳಿತು ಕೊಂಡಿದ್ದರು.

ಪ್ರಮಿಳೆ ಸೂಕ್ಷ್ಮವಾಗಿ ತನ್ನ ಮತ್ತು ನಾಗರತ್ನಮ್ಮನವರ ಸಂಬಂಧ ವನ್ನೂ ತನಗೆ ಮದುವೆಯಾದುದನ್ನೂ ಹೇಳಿದಳು.

ಅನಂತರ ಶಾರದೆಯ ಯೋಗಕ್ಷೇಮವನ್ನು ವಿಚಾರಿಸುತ್ತಾ "ನೀವು ಇಲ್ಲಿಗೆ ಬಂದು ಎಷ್ಟು ದಿನಗಳಾದುವು? ನಿಮ್ಮ ಯಜಮಾನರೇನು ಮಾಡು ತ್ತಿದ್ದಾರೆ?" ಎಂದು ವಿಚಾರಿಸಿದಳು.

"ಅಯ್ಯೋ! ನನ್ನ ವಿಷಯವನ್ನೇಕೆ ಕೇಳುತ್ತೀಯಮ್ಮ. ನಾನು ಬಾಣಸಂದ್ರದಲ್ಲಿ ಹೇಳಿದಂತೆ ನನ್ನ ಕಥೆ ಯಾವಾಗಲೂ ಒಂದೇ ಆಗಿದೆ. ನಮ್ಮ ಯಜಮಾನರೇನು ಮಾಡುತ್ತಾರೆ? ಮೊದಲಿನಂತೆಯೇ ಯಾವುದೋ ಹೋಟಲಿನಲ್ಲಿ ಕೆಲಸಕ್ಕಿದ್ದಾರೆ"

ಶಾರದೆ ತನ್ನ ವಿಷಯವೆಲ್ಲವನ್ನೂ ಹೇಳಿಕೊಂಡಳು. ಗಂಡ ಅವಳನ್ನು ಕರೆದುಕೊಂಡು ಬಂದು ಮೂರು ತಿಂಗಳಾಗಿತ್ತು. ಯಾವುದೋ ಸಂದರ್ಭ

ದಲ್ಲಿ ಅವಳ ಗಂಡ ಬಾಣಸಂದ್ರಕ್ಕೆ ಬಂದ. ತಾನು ಹೆಂಡತಿ ಮಕ್ಕಳನ್ನು ಹೀಗೆ ಬಿಟ್ಟಿರುವುದು ಅನ್ಯಾಯವೆಂದೂ ಕರೆದುಕೊಂಡು ಹೋಗುತ್ತೇನೆಂದೂ ಹೇಳಿದ. ಶಾರದೆ ಅದನ್ನು ನಿಜವೆಂದು ನಂಬಿದಳು.

"ಅವರು ಮಾತನಾಡಿದಾಗ ನನಗೆ ಅರ್ಥವಾಗಲಿಲ್ಲ. ಪ್ರಮಿಳಾ, ನಾನು ವಿಶ್ವಾಸದಿಂದ ಹಾಗೆ ಹೇಳುತ್ತಾರೆಂದು ಕೊಂಡೆ. ವಿಷಯ ಅದಲ್ಲ. ಬೆಂಗಳೂರಿಗೆ ಬಂದ ವಾರದ ಮೇಲೆ ನನಗೆ ವಿಷಯ ಗೊತ್ತಾಯಿತು. ನಾನು ಟೈಲರಿಂಗ್ ಮಿಷಿನ್ ಇಟ್ಟುಕೊಂಡು ಕೆಲಸ ಮಾಡುತ್ತಿದ್ದುದನ್ನು ನೋಡಿದ್ದ ರಷ್ಟೆ. ಅದರ ಮೇಲೆ ಅವರ ಕಣ್ಣು ಬಿತ್ತು. ನನ್ನನ್ನು ಉಪಾಯವಾಗಿ ಕರೆದುಕೊಂಡು ಬಂದರೆ ಟೈಲರಿಂಗ್ ಮಿಷಿನ್ ತಮ್ಮ ಕೈಗೆ ಸಿಕ್ಕುತ್ತದೆಂದು ಕೊಂಡರು. ನಾನು ಮಕ್ಕಳೊಡನೆ ಬೆಂಗಳೂರಿಗೆ ಬಂದು ಎಂಟು ದಿನವಿಲ್ಲ. ಯಾರದ್ದೋ ಹೊಲೆದ ಬಟ್ಟೆ ವಾಪ್ಸು ಕೊಡುವುದಕ್ಕೆ ಹೋಗಿದ್ದಾಗ ಸಮಯ ನೋಡಿಕೊಂಡಿದ್ದು ಅದನ್ನು ತೆಗೆದುಕೊಂಡು ಹೋಗಿ ಮಾರಿಬಿಟ್ಟರು. ಆ ಮೇಲೆ ನನ್ನಲ್ಲಿ ಅವರ ಆಸಕ್ತಿ ಕಡಿಮೆಯಾಗಿ ಹೋಯಿತು. ಈಗ ಮನೆಗೆ-ಬಂದರೆ ಬಂದರು, ಇಲ್ಲದಿದ್ದರೆ ಇಲ್ಲದಿದ್ದರೆ ಇಲ್ಲ"

ಶಾರದೆಯ ಮೇಲೆ ಪ್ರಮಿಳೆಗೆ ಕೋಪ ಅಸಮಾಧಾನಗಳಿದ್ದರೂ ಅವಳ ಕತೆಯನ್ನು ಕೇಳಿ ಸಂಕಟವಾಯಿತು.

"ನಾನು ಹೇಳುತ್ತೇನೆಂದು ತಪ್ಪು ತಿಳಿದುಕೊಳ್ಳಬೇಡಿ, ಶಾರದಮ್ಮ. ಈಗ ನೀವೇನು ಮಾಡುತ್ತಿದ್ದೀರಿ ?"

"ಏನು ಮಾಡಲಮ್ಮ. ಕಷ್ಟ ಪಡುವುದೇ ನನ್ನ ಹಣೆಯಲ್ಲಿ ಬರೆದಿದೆ. ಒಂದೇ ಸಮನೆ ಕಷ್ಟ ಪಡುತ್ತಿದ್ದೇನೆ. ಆದರೆ ಹೋದ ಸಲ ಬೆಂಗಳೂರಿನಲ್ಲಿ ದ್ದುದಕ್ಕಿಂತ ಈಗ ಇದ್ದುದರಲ್ಲಿ ಸ್ವಲ್ಪ ಅನುಕೂಲವಾಗಿದ್ದೇನೆಂದು ಹೇಳ ಬಹುದು. ಮೊದಲು ಜೀವನಕ್ಕೆ ಅವರ ಮೇಲೆಯೇ ಅವಲಂಬನೆ ಮಾಡು ತ್ತಿದ್ದೆ. ಈಗ ಹಾಗಿಲ್ಲ. ಏನೋ ಮಕ್ಕಳ ಬಟ್ಟೆಬರೆಗಳನ್ನೋ ಅಥವಾ ಕುಪ್ಪಸ ಜಾಕೆಟ್‌ಗಳನ್ನೋ ಹೊಲೆಯುತ್ತೇನೆ. ಏನೋ ಅಲ್ಪಸ್ವಲ್ಪ ಬರುತ್ತದೆ"

"ಮಿರ್ಷಿ ಇಲ್ಲವೆನ್ನುತ್ತೀರಿ ? ಹಾಗಿರುವಾಗ ಹೇಗೆ ಹೊಲೆಯುತ್ತೀರಿ ?"

"ಇಲ್ಲ. ಕೈಯಲ್ಲಿಯೇ ಎಷ್ಟು ಸಾಧ್ಯವಾಗುತ್ತದೋ ಅಷ್ಟು ಹೊಲೆಯುತ್ತೇನೆ"

"ಹಾಗಿರುವಾಗ ಇಲ್ಲಿ ಯಾಕೆ ಇರಬೇಕು ? ಬಾಣಸಂದ್ರಕ್ಕೇ ಹೋಗಿರಬಹುದಲ್ಲ"

"ಹೋಗಬಹುದು. ಎಷ್ಟೇ ಕೆಟ್ಟರೂ ಹೆತ್ತ ತಾಯಿ ಹೊರಗೆ ಹಾಕುವುದಿಲ್ಲ. ಆದರೆ ಇದ್ದ ಮಿರ್ಷಿ ಸಹ ಕಳೆದುಕೊಂಡು ಯಾವ ಮುಖ ಇಟ್ಟುಕೊಂಡು ಹೋಗಲಿ ಹೇಳು"

ಇಬ್ಬರೂ ಮಾತನಾಡುತ್ತ ಕುಳಿತುಕೊಂಡಿದ್ದರು. ಮೂರೂವರೆ ಗಂಟೆಯಾಯಿತು. ದಿನವೂ ಮಧ್ಯಾಹ್ನದ ಹೊತ್ತು ಗೌರಮ್ಮ ಪ್ರಮಿಳೆಗೆ ಟೀ ಮಾಡಿ ಕೊಡುವ ಪದ್ಧತಿ. ಅವಳಿಗೂ ಅವಳ ಅತಿಥಿಗಳಿಗೂ ಟೀ ಮಾಡಿ ತಂದು ಕೊಟ್ಟರು.

ಟೀ ಆದ ಮೇಲೆ ಶಾರದೆ ಹೊರಡೋಣವೆಂದುಕೊಂಡಳು.

"ನಾನಿನ್ನು ಹೊರಡುತ್ತೇನೆ"

"ಹುಂ. ಯಾವಾಗಲಾದರೂ ಬರುತ್ತಿರಿ"

ಶಾರದೆಗೆ ಆಶ್ಚರ್ಯವಾಯಿತು. ಇಷ್ಟು ಹೊತ್ತಾದರೂ ಮಾಧವರಾಯ ಬದುಕಿದ್ದಾನೆಯೋ ಸತ್ತನೋ ಎಂದು ಸಹ ಪ್ರಮಿಳೆ ಕೇಳಲಿಲ್ಲ. ಕಡೆಯಲ್ಲಿ ಹೊರಡುತ್ತೇನೆ – ಎಂದರೆ "ಹುಂ" ಎಂದು ಬಿಟ್ಟಳು.

ಹೊರಡಲನುವಾಗಿದ್ದ ಶಾರದೇ ಕುಳಿತುಕೊಂಡಳು. ಅದನ್ನು ನೋಡಿದ ಪ್ರಮಿಳೆಗೆ ಯಾಕಿವಳು ಪುನಃ ಕುಳಿತುಕೊಂಡಳು ಎಂದು ಆಶ್ಚರ್ಯವಾಯಿತು.

"ಪ್ರಮಿಳಾ. ನಿನಗೆ ಮಾಧುವಿನ ವಿಷಯವೇನಾದರೂ ಗೊತ್ತಾಯಿತೆ?"

ಪ್ರಮಿಳೆಯ ಎದೆ ಡವಡವನೆ ಹೊಡೆದುಕೊಳ್ಳಲು ಆರಂಭವಾಯಿತು. ಅವಳು ನಿಶ್ಚೇಷ್ಟಿತಳಾಗಿ ಕುಳಿತುಕೊಂಡಳು.

"ಇಲ್ಲಿಂದ ಹೋದನಲ್ಲ. ಅವರಪ್ಪ ಸತ್ತು ಹೋದರು. ಉಳಿದ ಆಸ್ತಿಯನ್ನೆಲ್ಲಾ ಆತ ತನ್ನ ಹೆಂಡತಿಯ ಹೆಸರಿಗೆ ಬರೆದಿದ್ದರಂತೆ. ಅದಷ್ಟೂ ಮಾಧುವಿಗೇ ಬಂದಿತು. ಮೊದಲು ಅವರ ತಂದೆಯ ಕಾಯಿಲೆ, ಅನಂತರ

ಅವರಮ್ಮನ ಕಾಯಿಲೆ ಮತ್ತು ಸಾವುಗಳಲ್ಲಿ ಅವನು ಅಲ್ಲಿಯೇ ಇರಬೇಕಾಗಿ ಬಂದಿತು. ಅದಷ್ಟೂ ತೀರಿಸಿಕೊಂಡು ಬಂದ. ನಿನಗೆ ಮದುವೆಯಾಗಿರುವ ವಿಷಯವನ್ನು ಹೇಗೋ ತಿಳಿದುಕೊಂಡಿದ್ದಾನೆ. ಅದನ್ನು ನಮಗೆ ಅವನೇ ಹೇಳಿದ"

ಪ್ರಮಿಳೆ ಅವಳು ಹೇಳುವುದನ್ನೆಲ್ಲಾ ಕೇಳಿದಳು. ಆದರೆ ಯಾವುದೊಂದು ಮಾತನ್ನೂ ಆಡಲಿಲ್ಲ. ಅದನ್ನು ನೋಡಿ ಶಾರದೆಗೆ ವಿಪರೀತ ಆಶ್ಚರ್ಯವಾಯಿತು. ಆದರೂ ಹೇಳಬೇಕೆಂದಿದ್ದ ಕಡೆಯ ಮಾತನ್ನೂ ಹೇಳಿಬಿಟ್ಟಳು.

"ಈಗ ಮಾಧುವಿಗೆ ಮೈ ಚೆನ್ನಾಗಿಲ್ಲ. ಅವನು ಬಂದು ಬಾಣಸಂದ್ರದಲ್ಲಿ ನಮ್ಮ ಮನೆಯಲ್ಲಿಯೇ ಇದ್ದಾನೆ"

ಅದಕ್ಕೂ ಪ್ರಮಿಳೆಯು ಏನೂ ಹೇಳಲಿಲ್ಲ. ತಲೆಯನ್ನು ತಗ್ಗಿಸಿಕೊಂಡು ಮೌನವಾಗಿ ಕುಳಿತುಕೊಂಡಳು. ಸ್ವಲ್ಪಹೊತ್ತು ಹಾಗೇ ಕುಳಿತಿದ್ದಳು.

ಶಾರದೆಗೆ ಏನು ಹೇಳಬೇಕೆಂಬುದೇ ತೋರಲಿಲ್ಲ. ಅವಳು ಮೇಲೆದ್ದು ಮಕ್ಕಳನ್ನು ಕರೆದುಕೊಂಡು ಹೋಗಲು ಉದ್ಯುಕ್ತಳಾದಳು.

ಬಾಗಿಲವರೆವಿಗೆ ಹೋಗಿದ್ದವಳನ್ನು ಕರೆದು ಪ್ರಮಿಳೆ ಗಳಿಗೆಯ ಕಾಲ ನಿಂತುಕೊಳ್ಳುವುದಕ್ಕೆ ಹೇಳಿದಳು. ಅನಂತರ ತಾನು ಕೋಣೆಗೆ ಹೋಗಿ ಬಂದು "ಶಾರದಮ್ಮನವರೇ ! ನಾನೂ ಬಸ್‌ಸ್ಟಾಂಡಿನವರೆವಿಗೆ ಬರುತ್ತೇನೆ. ಸ್ವಲ್ಪ ತಡೆಯಿರಿ" ಎಂದು ಹೇಳಿ ಗೌರಮ್ಮನವರಿಗೆ ತಿಳಿಸಿ ತಾನು ಶಾರದಮ್ಮನೊಡನೆ ಹೊರಟಳು.

ಹಾಗೆಯೇ ನಡೆದುಕೊಂಡು ಅವರು ಗಾಂಧೀಬಜಾರಿಗೆ ಬಂದರು. ಪ್ರಮಿಳೆ ಬಸ್‌ಸ್ಟಾಪ್‌ನ ಬಳಿಗೆ ಹೋಗಿ ಒಂದು ಅಂಗಡಿಯ ಕಡೆಗೆ ಹೋದಳು. ಅಲ್ಲಿ ಒಂದು ರೆಡೀಮೇಡ್ ಬಟ್ಟೆಯ ಅಂಗಡಿಗೆ ಹೋಗಿ ಶಾರದಮ್ಮನ ಮಕ್ಕಳಿಗೆ ಎರಡೆರಡು ಫ್ರಾಕ್‌ಗಳನ್ನು ಕೊಂಡುಕೊಂಡಳು.

ಶಾರದಮ್ಮ ಅಂಗಡಿಯಲ್ಲಿಯೇ "ಇದೇಕೆ ಪ್ರಮಿಳಾ. ಬೇಡ" ಎಂದಳು.

"ನಾನು ಮಕ್ಕಳಿಗೆ ತೆಗೆದುಕೊಟ್ಟರೆ ನೀವು ಬೇಡ ಎನ್ನ ಕೂಡದು. ಸುಮ್ಮನಿರಿ"

ಶಾರದಮ್ಮ ಎಷ್ಟೇ ಪ್ರತಿರೋಧ ಮಾಡಿದರೂ ಪ್ರಮಿಳೆ ಒಪ್ಪಲೇ ಇಲ್ಲ. ಮಕ್ಕಳಿಗಾಗಿ ಕಟ್ಟಿಸಿಕೊಂಡ ಬಟ್ಟೆಗಳನ್ನು ಪಟ್ಟಣಕಟ್ಟಿಸಿ ಅದನ್ನು ತಾನೇ ಹಿಡಿದುಕೊಂಡು ಹೊರಗೆ ಬಂದಳು.

ಬಸ್‌ಸ್ಟಾಪ್‌ನಲ್ಲಿ ಬಂದು ನಿಂತುಕೊಂಡ ಮೇಲೆ ಆ ಪಟ್ಟಣವನ್ನು ತೆಗೆದು ಶಾರದಮ್ಮನ ಕೈಗೆ ಕೊಟ್ಟಳು. ಅನಂತರ ಇಪ್ಪತ್ತೈದು ರೂಪಾಯಿ ನಷ್ಟು ನೋಟುಗಳನ್ನು ಮಡಚಿ ಶಾರದಮ್ಮನ ಕೈಗೆ ಕೊಟ್ಟು "ನೀವು ಖರ್ಚಿ ಗಿಟ್ಟುಕೊಳ್ಳಿ" ಎಂದು ಹೇಳಿದಳು.

ಪ್ರಮಿಳೆ ಶಾರದಮ್ಮನಿಗೆ ಕಡೆಯದಾಗಿ ಒಂದು ಮಾತು ಹೇಳಬೇಕೆಂದು ಮನೆಯನ್ನು ಬಿಟ್ಟಾಗಿನಿಂದ ಯೋಚಿಸುತ್ತಿದ್ದಳು. ಎಷ್ಟು ಪ್ರಯತ್ನಪಟ್ಟರೂ ಹೇಳಲಾಗಲಿಲ್ಲ.

ನಾಗಸಂದ್ರ ರಸ್ತೆಯ ಕಡೆಯಿಂದ ಬಂದ ಬಸ್ ಸೊಸೈಟಿಯ ಬಳಿ ತಿರುಗಿತು. ಇನ್ನಿರುವುದು ಆರ್ಧಗಳಿಗೆಯ ಅವಕಾಶ. ಈಗ ಹೇಳಿದರೆ ಉಂಟು. ಇಲ್ಲದಿದ್ದರೆ ಇಲ್ಲವೇ ಇಲ್ಲ.

ಶಾರದಮ್ಮನನ್ನು ಪಕ್ಕಕ್ಕೆ ಎಳೆದು ಕಿವಿಯಲ್ಲಿ ಹೇಳಿದಳು.

"ನಾನು ಮಾಧವರಾಯರನ್ನು ಪೂರ್ಣವಾಗಿ ಮರೆತುಬಿಟ್ಟಿದ್ದೇನೆ, ಶಾರದಮ್ಮ. ದಯಮಾಡಿ ನನ್ನೆದುರಿಗೇ ಆಗಲಿ, ಮತ್ತಾರ ಎದುರಿಗೇ ಆಗಲಿ ಅವರ ಮಾತನ್ನು ಎತ್ತಬೇಡಿ"

ಕೂಡಲೇ ಅದಕ್ಕೇನು ಉತ್ತರಕೊಡಬೇಕೆಂಬುದು ಶಾರದಮ್ಮನಿಗೆ ತೋರಲಿಲ್ಲ. ಅವಳು ವಿಸ್ಮಿತಳಾಗಿ ಪ್ರಮಿಳೆಯ ಕಡೆ ನೋಡಿದಳು. ಗಳಿಗೆಯ ಹೊತ್ತು ನೋಡಿ ಅವಳ ಮನೋಭಾವವನ್ನು ಗ್ರಹಿಸುವುದಕ್ಕೂ ಅವಕಾಶ ವಿರಲಿಲ್ಲ. ಬಸ್ ಬಂದು ನಿಂತಿತ್ತು. ತನ್ನ ಮಕ್ಕಳೊಡನೆ ಹತ್ತಿ ಹೊರಟು ಹೋದಳು.

ಬಸ್ ಕಣ್ಮರೆಯಾಗಿ ಹೊರಟು ಹೋಗುವವರೆವಿಗೆ ಪ್ರಮಿಳಾ ನೋಡುತ್ತಾ ನಿಂತಿದ್ದಳು.

# ೮

ಗಂಡನ ಮನೆಗೆ ಬಂದ ಮೇಲೆ ಪ್ರಮೀಳೆಗೆ ಮಾಧವರಾಯನ ನೆನಪು ಬರದಿರಲಿಲ್ಲ. ಹಲವಾರು ಬಾರಿ ಬಂದಿತ್ತು. ಅವನನ್ನು ಮರೆತು ಬಿಡಲು ಪ್ರಯತ್ನ ಮಾಡುತ್ತಿದ್ದಳು. ಆದರೂ ಅದು ಸುಲಭಸಾಧ್ಯವಾಗುತ್ತಿರಲಿಲ್ಲ. ಅವನ ಜ್ಞಾಪಕ ಬಂದೊಡನೆ ಉದ್ದೇಶಪೂರ್ವಕವಾಗಿ ಯಾರೊಂದಿಗಾದರೂ ಹೋಗಿ ಕುಳಿತುಕೊಂಡು ಏನಾದರೊಂದು ಮಾತು ಮೊದಲು ಮಾಡುವಳು. ಆ ಮಾತಿನ ಭರದಲ್ಲಿ ಒಮ್ಮೊಮ್ಮೆ ಅವನು ಬದುಕಿರುವುದೇ ಸ್ಮೃತಿ ಪಥದಿಂದ ಮಾಯವಾಗಿ ಹೋಗುವುದು. ಕೆಲವು ಸಲ ಮರೆಯಲಾಗುತ್ತಿರಲಿಲ್ಲ. ಆದರೆ ಅವಳು ತನ್ನ ಪ್ರಯತ್ನವನ್ನು ಬಿಡಲೇ ಇಲ್ಲ.

ಇಷ್ಟಾದರೂ ಒಮ್ಮೊಮ್ಮೆ ಅವನ ವಿಷಯ ನೆನಪಿಗೆ ಬರುವುದು. ಆ ಸಮಯದಲ್ಲಿ ಕೆಲವು ಸಲ ಮಾತನಾಡುವುದಕ್ಕೆ ಯಾರಾದರೂ ಸಿಕ್ಕುವರು. ಮತ್ತೆ ಕೆಲವು ಸಲ ಸಿಕ್ಕುತ್ತಿರಲಿಲ್ಲ. ಸಿಕ್ಕಿದಾಗ ಮಾತನಾಡುತ್ತಿದ್ದರೂ ಅವನ ವಿಷಯ ಮನಸ್ಸಿನಲ್ಲಿಯೇ ಸುತ್ತಿಸುತ್ತಿ ಬರುವುದು. ಏಕಾಂಗಿಯಾಗಿರುವಾಗಲಂತೂ ಮನಸ್ಸಿನಲ್ಲಿ ತಾನೇ ತಾನಾಗಿ ಆ ನೆನಪು ತುಂಬಿ ನಿಲ್ಲುವುದು.

ಆಗೆಲ್ಲಾ ಅವಳಂದುಕೊಳ್ಳುವಳು. ಹುಡುಗತನ. ತನಗೆ ಬುದ್ಧಿಯಿರಲಿಲ್ಲ. ವಿವೇಕವಿರಲಿಲ್ಲ. ತಾನು ಅವನನ್ನು ಪ್ರೇಮಿಸುತ್ತೇನೆಂದುಕೊಂಡಳು. ಆದರೆ ಅವುಗಳೆಲ್ಲಾ ಭ್ರಾಂತಿ – ಎಂದು ಕೊಳ್ಳುವಳು. ಅವನ

ತನ್ನನ್ನು ಪ್ರೇಮಮಾಡುತ್ತಿದ್ದೆನೆಂದು ಭ್ರಾಂತನಾಗಿದ್ದ. ಆದರೆ ವಾಸ್ತವವಾಗಿ ಪರಿಸ್ಥಿತಿ ಅದಾಗಿರಲಿಲ್ಲ. ಬಾಣಸಂದ್ರದಲ್ಲಿ ಆ ದಿನ ತಾವಿಬ್ಬರೂ ಮೈದಾನದಲ್ಲಿ ಕುಳಿತು ಮಾತನಾಡಿದುದರಲ್ಲಿ ಅದು ಸ್ಪಷ್ಟವಾಗಿ ಕಂಡು ಬರುತ್ತಿತ್ತು. ಈ ಪ್ರೇಮದ ಪರಿಣಾಮವನ್ನು ವರ್ಣಿಸಿದ್ದನ್ನು ನೋಡಿದರೆ ಅವನು ಹೆದರಿದ್ದನೆಂದು ಧಾರಾಳವಾಗಿ ಹೇಳಬಹುದು.

ತನ್ನದೂ ಹುಡುಗತನ. ಅವನದೂ ಹುಡುಗತನ. ಆದರೆ ಅಬ್ಬಾ! ಇಂದೂ ನೆನೆಸಿಕೊಂಡರೆ ಹೆದರಿಕೆಯಾಗುತ್ತದೆ. ಮೈ ನಡುಗುತ್ತದೆ. ಎಂತಹ ಅವಿವೇಕ. ದೇವರದಯ. ಆ ಅವಗಡ ಪೂರ್ವಾರ್ಜಿತ ಪುಣ್ಯಪರಿಪಾಕದಿಂದ ತಪ್ಪಿಹೋಯಿತು. ಇಲ್ಲದಿದ್ದರೆ ಎಷ್ಟು ತಪ್ಪಾಗಿ ಹೋಗುತ್ತಿತ್ತು.

ಅನೇಕ ಸಲ ಪ್ರಮಿಳೆಯು ಒಬ್ಬಳೇ ಕುಳಿತುಕೊಂಡಿದ್ದಾಗ ಮಾಧವರಾಯನನ್ನು ತಾನು ಪ್ರೀತಿಸುತ್ತಿದ್ದೆನೆಂಬುದು ಸುಳ್ಳು ಎಂದು ತೋರುವುದು. ಕೇವಲ ಅವನೊಬ್ಬ ಸ್ನೇಹಿತನಂತೆ ಭಾಸವಾಗುವುದು. ತಾನು ಅವನನ್ನು ಮದುವೆಯಾಗಿದ್ದರೂ ಕೇವಲ ಒಬ್ಬ ಸ್ನೇಹಿತನಂತಾಗುತ್ತಿದ್ದನೇ ವಿನಾ ಅವನು ಗಂಡನಾಗುತ್ತಿರಲಿಲ್ಲವೆಂದು ತೋರುವುದು.

ಆದರೆ ತನ್ನ ಗಂಡ ಹಾಗಲ್ಲ. ವಾಸ್ತವವಾಗಿ ಗಂಡ.

ಆಗೆಲ್ಲಾ ಮಾಧುವಿನ ಸಂಬಂಧವು ತಪ್ಪಿಹೋಗಿ ಗೋವಿಂದರಾಯನೊಡನೆ ಮದುವೆಯಾದದ್ದೇ ಒಳ್ಳೆಯದಾಯಿತೆಂದು ಯೋಚನೆ ಮಾಡುವಳು.

ಹೀಗೆ ಪ್ರಮಿಳಾ ಮಾಧುವನ್ನು ಪೂರ್ಣವಾಗಿ ಮರೆತುಬಿಡಲು ಪ್ರಯತ್ನ ಮಾಡುತ್ತಿರುವಾಗ ಶಾರದೆ ಕಣ್ಣಿಗೆ ಬಿದ್ದು ಪುನಃ ಹಳೆಯ ನೆನಪು ಮಾಡಿಕೊಟ್ಟಳು.

ಮೊದಲನೆಯ ದಿನ ಅವಳು ಸಂಗೀತ ಕಚೇರಿಯ ಬಳಿ ಸಿಕ್ಕಿದಾಗಲೇ ಪ್ರಮಿಳೆಗೆ ವಿಪರೀತ ಭಯವಾಗಿತ್ತು. ತನ್ನ ಹಾಲಿನಂತಹ ಸಂಸಾರದಲ್ಲಿ ಹುಳಿ ಹಿಂಡಲು ಇವಳು ಬಂದಳೇನೋ ಎಂದು ದಿಗಿಲಾಯಿತು. ಮಾರನೆಯ ದಿನ ಅವಳು ಬಂದಾಗ ತನ್ನ ಕಷ್ಟಗಳೆಲ್ಲವನ್ನೂ ಹೇಳಿಕೊಂಡಾಗ ಅದು ಮತ್ತಷ್ಟು ದೃಢವಾಯಿತು. ತನ್ನನ್ನು ಹೆದರಿಸಿ ದುಡ್ಡು ಕಸಿಯಲು ಪ್ರಯತ್ನ ಮಾಡುತ್ತಿದ್ದಾಳೆಯೇನೋ ಎಂಬ ಸಂದೇಹವೂ ಸಹ ಬಂದಿತು.

ಅದರಿಂದಲೇ ಅವಳಲ್ಲಿ ಇಲ್ಲದ ಪ್ರೀತಿಯನ್ನು ತೋರಿಸಿ, ಅವಳ ಮಕ್ಕಳಿಗೆ ಬಟ್ಟೆ ಬರೆಗಳನ್ನು ತೆಗೆದುಕೊಟ್ಟು, ಖರ್ಚಿಗೆ ದುಡ್ಡು ಕೊಟ್ಟು ಕಳಿಸಿದ್ದಳು.

ಪ್ರಮಿಳೆಯ ಬಳಿ ಇದ್ದ ಸರ್ವಸ್ವವೂ ಅಷ್ಟೇ. ಮದುವೆಯಲ್ಲಿ ಉಡುಗೊರೆಯಾಗಿ ಅವಳಿಗೊಂದಿಷ್ಟು ಹಣ ಬಂದಿತ್ತು. ಅದು ಸುಮಾರು ಐವತ್ತು ರೂಪಾಯಿಗಳಿರಬಹುದು. ಅದು ಅವಳ ಬಳಿಯಲ್ಲಿಯೇ ಇದ್ದಿತು. ಇನ್ನು ಅದರಲ್ಲಿ ಉಳಿದಿರುವುದು ಹತ್ತು ಹನ್ನೆರಡು ರೂಪಾಯಿಗಳು ಮಾತ್ರ. ಪುನಃ ಯಾವುದಾದರೂ ನೆಪದಿಂದ ಶಾರದೇ ಬಂದು ಕಷ್ಟವನ್ನು ಹೇಳಿಕೊಂಡರೆ ಆ ಹತ್ತು ರೂಪಾಯಿಗಳನ್ನೂ ಕೊಡಬಹುದು. ಅದಷ್ಟು ಬೇಕಾದರೆ ಅವಳ ಕೈಯಲ್ಲಿಟ್ಟು ಕೈ ಮುಗಿದುಬಿಡುವುದಕ್ಕೆ ಪ್ರಮಿಳೆ ಸಿದ್ಧ.

ಆದರೆ ಶಾರದೆ ಅಷ್ಟಕ್ಕೇ ತೃಪ್ತಳಾಗದೇ ಪುನಃ ಬಂದು ಕೇಳಿದರೆ ?

ಇದೇ ಯೋಚನೆಯಲ್ಲಿ ಪ್ರಮಿಳೆಯು ಎಂಟು ದಿನಗಳನ್ನು ಕಳೆದಳು.

ಮನೆಯಲ್ಲಿದ್ದಾಗಲೂ ಎಲ್ಲಿ ಶಾರದೆ ಬಂದು ಬಿಡುತ್ತಾಳೆಯೋ ಎಂದು ಹೆದರಿಕೆ. ಸಂಗೀತ ಕಚೇರಿಯಲ್ಲಿ ಕುಳಿತುಕೊಂಡಾಗಲೂ ಅವಳೆಲ್ಲಿ ಕಾಣಿಸಿಕೊಳ್ಳುತ್ತಾಳೆಯೋ ಎಂದು ದಿಗಿಲು. ಇದೇ ಚಿಂತೆಯಲ್ಲಿ ಪ್ರಮಿಳೆ ಕೊರಗಲಾರಂಭಿಸಿದಳು.

ಪ್ರಮಿಳೆಯಲ್ಲಿ ಮೊದಲಿದ್ದ ಸಂತೋಷವಿಲ್ಲ. ಉತ್ಸಾಹವಿಲ್ಲ. ಯಾವಾಗಲೂ ಮಂಕಾಗಿರುತ್ತಿದ್ದಳು.

ಈ ವ್ಯತ್ಯಾಸವು ನಾಗರತ್ನಮ್ಮನವರಿಗಾಗಲೀ ಗೋವಿಂದರಾಯರಿಗಾಗಲೀ ಗೊತ್ತಾಗದಿರಲಿಲ್ಲ. ಅವರುಗಳು ಎಷ್ಟೋ ವಿಧವಾಗಿ ಪ್ರಶ್ನೆ ಮಾಡಿದರು. ಪ್ರಮಿಳೆ ತನಗೊದಗಿದ್ದ ಕಷ್ಟವನ್ನು ಯಾರೊಂದಿಗೂ ಹೇಳಿಕೊಳ್ಳುವಂತಿರಲಿಲ್ಲ.

ದಿನಗಳ ಮೇಲೆ ದಿನಗಳು ಕಳೆಯುತ್ತಾ ಬಂದರೂ ಶಾರದೆ ಬರದಿರುವುದನ್ನು ನೋಡಿ ಪ್ರಮಿಳೆಯ ಮನಸ್ಸಿಗೆ ಸ್ವಲ್ಪಸ್ವಲ್ಪ ಧೈರ್ಯವು ಬರಲಾರಂಭವಾಯಿತು. ತಾನು ಮಾಡಿದ್ದೇ ಸರಿ. ಶಾರದೇ ಮನೆಗೆ ಬಂದಾಗ ಸಿಡುಗುಟ್ಟಿಕೊಂಡು ಮಾತನಾಡದೇ, ವಿಶ್ವಾಸದಿಂದ ನೋಡಿ ಮಕ್ಕಳಿಗೆ ಬಟ್ಟೆ ತೆಗೆದುಕೊಟ್ಟು ಖರ್ಚಿಗೆ ಹಣಕೊಟ್ಟು ಕಳಿಸಿದ್ದೇ ಸರಿಹೋಯಿತು. ಎಷ್ಟಾದರೂ

ಶಾರದೆ ವಿವೇಕಿ. ಅವಳು ಬಸ್ಸು ಹತ್ತುವಾಗ ತಾನು ಕಡೆಯಲ್ಲಿ ಹೇಳಿದ ಮಾತುಗಳು ಅವಳ ಮನಸ್ಸಿಗೆ ಚೆನ್ನಾಗಿ ನಾಟಿದೆ. ಅದರಿಂದಲೇ ಬರಲಿಲ್ಲ ವೆಂದುಕೊಳ್ಳುತ್ತಿದ್ದಳು.

ಆದರೆ ಪ್ರಸಂಗ ಪ್ರಮಿಳೆ ನೆನೆಸಿದಂತೆ ಆಗಲಿಲ್ಲ. ಸರಿಯಾಗಿ ಒಂಬತ್ತ ನೆಯ ದಿನ ಮಧ್ಯಾಹ್ನ ಶಾರದೆಯೂ ಬಂದಳು.

ಅವಳನ್ನು ನೋಡುತ್ತಲೇ ಪ್ರಮಿಳೆಯ ಎದೆ ಹೊಡೆದುಕೊಳ್ಳಲು ತೊಡಗಿತು.

ಈ ದಿನ ಮಕ್ಕಳು ಇರಲಿಲ್ಲ. ಅವಳೊಬ್ಬಳೇ ಬಂದಿದ್ದಳು.

ಪ್ರಮಿಳೆ ಮುಖದ ಮೇಲೆ ನಗುವನ್ನು ತಂದುಕೊಂಡು ಅವಳನ್ನು ಸ್ವಾಗತಿಸಿದಳು.

"ಇದೇನು, ಶಾರದಮ್ಮನವರೇ. ನೀವೊಬ್ಬರೇ ಬಂದಿದ್ದೀರಿ. ಮಕ್ಕ ಳೆಲ್ಲಿ ?"

ಶಾರದೆಯ ಮಕ್ಕಳಲ್ಲಿ ಪ್ರಮಿಳೆಗೆ ಯಾವ ವಿಧವಾದ ಆಸಕ್ತಿಯೂ ಇರ ಲಿಲ್ಲ. ಅವರು ಬಂದರೆಷ್ಟೋ ಬರದಿದ್ದರೂ ಅಷ್ಟೆ. ಒಂದು ರೀತಿಯಲ್ಲಿ ನೋಡಿದರೆ ಇವರುಗಳು ಬರುವುದಕ್ಕಿಂತಲೂ ಬರದಿರುವುದೇ ಕ್ಷೇಮ. ಆದರೆ ಮಕ್ಕಳ ವಿಷಯ ಬಹಳ ಆಸಕ್ತಿಯಿಂದ ಕೇಳುವುದರಿಂದ ತಾಯಂದಿರಿಗೆ ಸಂತೋಷವಾಗುತ್ತದೆಂದೂ ಅವರು ಸುಪ್ರಸನ್ನರಾಗುವರೆಂದೂ ಹಾಗೆ ಕೇಳಿದಳು.

"ಅವರನ್ನು ಬಸ್‌ನಲ್ಲಿ ಕರೆದುಕೊಂಡು ಬರುವುದು ಬಹಳ ತೊಂದರೆ ಯಾಗುತ್ತದೆಂದು ಕರೆದುಕೊಂಡು ಬರಲಿಲ್ಲ"

ಪ್ರಮಿಳೆ ಇನ್ನೇನಾದರೂ ಮಾತನಾಡುತ್ತಾಳೆಯೇನೋ ಎಂದು ಒಂದು ಕ್ಷಣ ತಡೆದು ಅನಂತರ ಶಾರದೆ ಹೇಳಿದಳು.

"ಪ್ರಮಿಳಾ ! ನಾನು ಹಿಂದಿನ ಬಾರಿ ಬಂದಿದ್ದಾಗ ನೀನು ಸ್ವಲ್ಪ ದುಡ್ಡು ಕೊಟ್ಟಿಯಲ್ಲಾ. ಅದನ್ನು ತೆಗೆದುಕೊಂಡು ಹೋಗಲು ನನಗೆ ಬಹಳ ಸಂಕೋ ಚವಾಯಿತು. ಆ ದಿನ ರಾತ್ರಿ, ಮಾರನೆಯ ದಿನ ನಿನಗದನ್ನು ವಾಪಸ್ಸು ತಂದುಕೊಟ್ಟು ಬಿಡಬೇಕೆಂದು ಮನಸ್ಸಿನಲ್ಲಿಯೇ ಆಲೋಚನೆ ಮಾಡುತ್ತಿದ್ದೆ.

ಬಡತನದಲ್ಲಿರುವವರು ಮನಸ್ಸಿನಲ್ಲಿ ಏನು ಭಾವನೆ ಮಾಡಿದರೂ ಅದನ್ನು ಕಾರ್ಯತಃ ಮಾಡುವುದಕ್ಕೆ ಆಗುವುದಿಲ್ಲ. ಆ ದಿನ ರಾತ್ರಿ ನಮ್ಮ ಯಜಮಾನರು ಮನೆಗೇ ಬರಲಿಲ್ಲ. ಮಾರನೆಯ ದಿನ ಹತ್ತು ಗಂಟೆಯಾದರೂ ಬರಲಿಲ್ಲ. ನಿನ್ನ ದುಡ್ಡೇ ಮುರಿಸಿ ಅಕ್ಕಿ ತರಬೇಕಾಯಿತು. ಹೋಗಲಿ ಬಿಡು. ನನ್ನ ಕಷ್ಟವನ್ನೆಲ್ಲಾ ಹೇಳಿ ನಿನ್ನ ಮನಸ್ಸಿಗೂ ಯಾಕೆ ನೋವು ಉಂಟು ಮಾಡಲಿ ? ಈಗ ನಾನು ಬಂದದ್ದು — — —"

ಇನ್ನೇನೋ ರಗಳೆ ತಂದಿದ್ದಾಳೆ ? ಎಲ್ಲಿಯ ಗ್ರಹಚಾರ. ಮಾತು ಮರೆಸೋಣವೆಂದು ಪ್ರಮಿಳೆ ಕೇಳಿದಳು.

"ಶಾರದಮ್ಮನವರೇ. ಅದೇನು ನಿಮ್ಮ ಕೈಯಲ್ಲಿರುವ ಆ ಪಟ್ಟಣ ?"

ಅವಳ ಕೈಯಲ್ಲಿದ್ದ ಕಾಗದದ ಪಟ್ಟಣವನ್ನು ಪ್ರಮಿಳೆ ಮೊದಲೇ ನೋಡಿದ್ದಳು.

"ಈ ಮಾತಿನಲ್ಲಿ ಮರೆತು ಬಿಟ್ಟೆ. ಮೊದಲೇ ನಿನಗಿದನ್ನು ತೆಗೆದು ಕೊಡಬೇಕಾಗಿತ್ತು. ನಿನಗೊಂದು ರವಿಕೆ ಹೊಲೆದು ತಂದಿದ್ದೇನೆ"

ಶಾರದೆ ಪೊಟ್ಟಣ ಬಿಚ್ಚಿ ಚೌಳೀ ತೆಗೆದು ತೋರಿಸಿದಳು. ಅದು ಸಾಧಾರಣವಾದ ಬಟ್ಟೆ. ಆದರೆ ಬಹಳ ಸೊಗಸಾಗಿ ಹೊಲೆದಿತ್ತು.

"ಅಯ್ಯೋ ! ನನಗಾಗಿ ಇಷ್ಟೆಲ್ಲಾ ಕಷ್ಟ ಯಾಕೆ ತೆಗೆದುಕೊಂಡಿರಿ ?"

"ಉಂಟೇ ಹಾಗೆನ್ನಬೇಡ. ಬಹಳ ಆಸೆಯಿಂದ ಹೊಲೆದು ತಂದಿದ್ದೇನೆ. ನೀನು ಆ ದಿನ ತೋರಿಸಿದ ಔದಾರ್ಯದ ಋಣವನ್ನು ನಾನು ತೀರಿಸಬಲ್ಲೆನೆ ? ಈ ರವಿಕೆ ತೆಗೆದುಕೊಂಡರೆ ನನ್ನ ಮನಸ್ಸಿಗೆ ಎಷ್ಟೋ ಸಂತೋಷವಾಗುತ್ತದೆ"

ತನ್ನ ಋಣವನ್ನು ತೀರಿಸಲು ಈ ರವಿಕೆ ಕೊಟ್ಟುಬಿಟ್ಟಳು. ಋಣವಿನ್ನಿಲ್ಲದ ಮೇಲೆ ತನ್ನ ದಾಕ್ಷಿಣ್ಯ ಅವಳಿಗಿಲ್ಲವಲ್ಲ.

"ನೀನು ತೆಗೆದುಕೊಳ್ಳಬೇಕು" ಎಂದು ರವಿಕೆಯನ್ನು ಕೈಗೆತ್ತಿಕೊಟ್ಟಳು.

ಪ್ರಮಿಳೆ ಅದನ್ನು ತೆಗೆದು ತನ್ನ ಪಕ್ಕದಲ್ಲಿಟ್ಟುಕೊಂಡಳು.

"ಮುಖ್ಯವಾಗಿ ಈಗ ನಾನು ಬಂದ ವಿಷಯವೇನೆಂದರೆ — —

ಕಡೆಗೂ ಆ ಘಟ್ಟ ಬಂದಿತು. ಬಂದು ಬಿಡಲಿ. ಏನು ಹೇಳುತ್ತಾಳೆಯೋ ಕೇಳಿ ಬಿಡೋಣ.

"ಏನು ವಿಷಯ ಹೇಳಿ"

"ನೀನು ಕೊಟ್ಟ ದುಡ್ಡಿನಲ್ಲಿ ಸ್ವಲ್ಪ ಮಾರನೆಯ ದಿನವೇ ಖರ್ಚಾಗಿ ಹೋಯಿತಲ್ಲ. ಅದರಲ್ಲಿ ಸ್ವಲ್ಪ ಭಾಗವೇ ಆಗಿರಲಿ. ಖರ್ಚು ಮಾಡಿಬಿಟ್ಟ ಮೇಲೆ ಪುನಃ ಸೇರಿಸಿ ಕೊಡುವುದು ನಮ್ಮಂತಹವರಿಂದ ಆಗಿ ಹೋಗದ ಮಾತು. ಮೊದಲೆಂದುಕೊಂಡಂತೆ ವಾಪ್ಸು ಮಾಡುವುದಂತೂ ಆಗುವುದಿಲ್ಲ. ಆ ಮೇಲೆ ಒಂದು ಯೋಚನೆ ಬಂದಿತು. ನಾನು ಬಾಣಸಂಧ್ರದಿಂದ ಬಂದ ಮೇಲೆ ಪುನಃ ಹೋಗುವುದಕ್ಕೇ ಆಗಿರಲಿಲ್ಲ. ನಮ್ಮಮ್ಮನನ್ನು ನೋಡಿ ಕೊಂಡು ಬರಬೇಕೆಂಬ ಚಪಲವಿತ್ತು. ಇನ್ನು ಯಾವಾಗ ಅನುಕೂಲವಾಗು ತ್ತದೆಯೋ ಏನೋ ? ಹಣ ಕೈಯಲ್ಲಿರುವಾಗಲೇ ಹೋಗಿ ನೋಡಿಕೊಂಡು ಬರಬೇಕೆಂದು ಆಸೆಯಾಯಿತು. ಅದರಿಂದ ಬಾಣಸಂದ್ರಕ್ಕೆ ಹೋದೆ. ನಿನ್ನೆಯ ದಿನ ಅಲ್ಲಿಂದ ವಾಪ್ಸು ಬಂದೆ.

"ಮಾಧು ಈಗ ಅಲ್ಲಿಯೇ ಇದ್ದಾನೆ. ನಾನು ಅವನಿಗೇನೋ ಮೈ ಚೆನ್ನಾಗಿಲ್ಲವೆಂದು ಹೇಳಿದೆನಲ್ಲ. ಅದು ಕೇವಲ್ಲ ಮೈ ಚೆನ್ನಾಗಿಲ್ಲ, ಅಲ್ಲ. ಅವನಿಗೆ ಕ್ಷಯರೋಗ. ಕಂಗೆಟ್ಟು ಕಡ್ಡಿಯಂತಾಗಿದ್ದಾನೆ. ಗುರುತು ಕೂಡಾ ಸಿಕ್ಕುವಂತಿಲ್ಲ. ನಮ್ಮ ತಾಯಿಯೂ ಎಷ್ಟೋ ಹೇಳಿದರಂತೆ. ನಾನೂ ಎಷ್ಟೋ ಹೇಳಿದೆ. ಯಾರೇನು ಹೇಳಿದರೂ ಅವನು ಔಷಧಿ ತೆಗೆದುಕೊಳ್ಳು ವುದಿಲ್ಲವೆಂದು ಹಟ ಹಿಡಿದು ಕುಳಿತಿದ್ದಾನೆ. "ಸತ್ತು ಹೋಗುತ್ತೇನೆ. ನಾನೇಕೆ ಬದುಕಿರಬೇಕು" ಎನ್ನುತ್ತಾನೆ. ಹೀಗೇ ಇದ್ದರೆ ಇಂದಲ್ಲ, ನಾಳೆಯಾದರೂ ಅವನು ಸಾಯುವುದು ಖಂಡಿತ"

ಇಷ್ಟು ಹೇಳಿ ಪ್ರಮಿಳೆಯು ಏನಾದರೂ ಹೇಳುತ್ತಾಳೆಯೆನೋ ಎಂದು ಶಾರದೆ ನಿರೀಕ್ಷೆ ಮಾಡಿದಳು. ಅವಳೇನೂ ಹೇಳಲಿಲ್ಲ. ಅವಳ ಮುಖದಲ್ಲಿ ಯಾವ ಭಾವವೂ ಕಂಡು ಬರಲಿಲ್ಲ.

"ಪ್ರಮಿಳಾ ! ನೀನೂ ಮಾಧುವೂ ಪರಸ್ಪರ ಪ್ರೇಮ ಮಾಡುತ್ತಿದ್ದೀ ರೆಂದರೆ ನನಗದು ಚೋದ್ಯವಾಗಿ ಕಂಡು ಬಂದಿತು. ನೀವುಗಳು ಹುಡುಗತನ ದಿಂದ ಹಾಗೆ ಮಾತನಾಡುತ್ತಿದ್ದೀರೆಂದುಕೊಂಡೆ. ನಾನು ಅಂದುಕೊಂಡುದು ತಪ್ಪು. ನೀನು ಮನಸ್ಸು ಬದಲಾಯಿಸುವಂತೆ [illegible] ವಾಪ್ಸು ಕಳಿಸಿದ

ವಳು ನಾನು. ನಾನೇ ಮಾಧುವಿನ ಮರಣಕ್ಕೆ ಕಾರಣಳಾದಂತಾಯಿತು. ಆದರಿಂದ ಈ ಕಡೆಗಾಲದಲ್ಲಿ ನಿನ್ನಲ್ಲಿ ಒಂದು ಪ್ರಾರ್ಥನೆಯನ್ನು ಮಾಡಲು ಬಂದೆ"

ಪ್ರಾರ್ಥನೆಯೇನು ಎಂದು ಕೇಳಲಿಲ್ಲ. ಏನು ಎಂಬಂತೆ ನೋಡಿದಳು.

"ಮಾಧುವಿನ ಪ್ರೀತಿಯು ಅಮರವಾದುದು. ಇಂದೂ ಅವನು ನಿನ್ನನ್ನು ಪ್ರೀತಿಸುತ್ತಿದ್ದಾನೆ. ನಿನಗೆ ಮದುವೆಯಾಗಿ ಪ್ರೇಮಭಗ್ನವಾದುದರಿಂದಲೇ ಜೀವನದಲ್ಲಿ ಅವನು ನಿರಾಶೆಗೊಂಡಿದ್ದಾನೆ. ಆದರಿಂದಲೇ ಔಷಧಿ ಸಹ ತೆಗೆದು ಕೊಳ್ಳದೇ ಸಾಯುವುದಕ್ಕೆ ಸಿದ್ಧವಾಗುತ್ತಿದ್ದಾನೆ. ಈ ಸಮಯದಲ್ಲಿ ನನಗಿ ರುವ ಆಸೆ ಒಂದೇ ಒಂದು. ನೀನೊಮ್ಮೆ ಬಾಣಸಂದ್ರಕ್ಕೆ ಬಂದು ಸಮಾ ಧಾನ ಹೇಳಿ ಔಷಧಿ ತೆಗೆದುಕೊಳ್ಳಬೇಕೆಂದು ಬಲಾತ್ಕಾರ ಮಾಡಿದರೆ ಅವನು ಒಪ್ಪಿಕೊಳ್ಳಬಹುದು. ನೀನು ನನ್ನೊಂದಿಗೆ ಬಾಣಸಂದ್ರಕ್ಕೆ ಬರಬೇಕು"

ಪ್ರಮಿಳೆಯು ತಲೆಯಾಡಿಸಿದಳು.

ಅದನ್ನು ನೋಡಿ ಉದ್ರೇಕಗೊಂಡು ಶಾರದೆ ಕೇಳಿದಳು.

"ಪ್ರಮಿಳಾ ! ನಿನ್ನ ಮನಸ್ಸಿನಲ್ಲಿ ಅಷ್ಟು ಕರುಣೆ ಸಹ ಇಲ್ಲವೇ ? ಅವನ ವಿಷಯದಲ್ಲಿ ನೀನೇಕೆ ಇಷ್ಟು ನಿರ್ದಯಳಾದೆ ?"

"ನಾನು ಅವರನ್ನು ಸಂಪೂರ್ಣವಾಗಿ ಮರೆತು ಬಿಟ್ಟಿದ್ದೇನೆ"

"ಹಾಗೆ ಹೇಳಬಾರದು. ಅವನು ನಿನಗಾಗಿ ಸಾಯುತ್ತಾ ಬಿದ್ದಿರುವಾಗ ನೀನು ಅವನಿಗೊಂದು ಸಮಾಧಾನದ ಮಾತು ಹೇಳಿ ಅವನನ್ನು ಉಳಿಸುವುದು ನಿನ್ನ ಕರ್ತವ್ಯ"

ಪ್ರಮಿಳೆಗೂ ಅದು ತನ್ನ ಕರ್ತವ್ಯವೆಂದೆನಿಸಿತು. ಗಳಿಗೆಯ ಕಾಲ ಯೋಚನೆ ಮಾಡಿದಳು. ತಾನು ಹಾಗೆ ಹೋದರೆ ತನ್ನ ಗಂಡ, ಅತ್ತೆ ಇವ ರೆಲ್ಲರೂ ಏನೆಂದುಕೊಂಡಾರು ? ವಿಷಯ ಗುಟ್ಟಾಗಿಯೇ ಇಡಬಹುದು. ಅಕ ಸ್ಮಾತ್ ಅವರಿಗೆ ಗೊತ್ತಾದರೆ ಹಳೆಯ ಪ್ರಕರಣವೆಲ್ಲಾ ಹೊರಗೆ ಬರುತ್ತದೆ. ಆ ಮೇಲೆ ತನ್ನ ಗತಿಯೇನು ? ಪುನಃ ಇಲ್ಲದ ವ್ಯವಹಾರ ಗಂಟು ಹಾಕಿ ಕೊಂಡ ಹಾಗಾಗುತ್ತದೆ.

ನಾರಾಯಣ ಪುರಾಣಿಕರು ಹೇಳಿದ ಸೀತೆಯ ವೃತ್ತಾಂತವೆಲ್ಲವೂ ಅವಳ ಮನಃ ಪಟಲದಲ್ಲಿ ಸುಳಿಯುತ್ತಿತ್ತು. ಎಂತಹವರಾದರೂ ಲೋಕಾಪ ವಾದಕ್ಕೆ ಭಯಪಡಬೇಕಮ್ಮ – ಎಂದು ಅವರತ್ತೆ ಶಾಂತಮ್ಮ ಹೇಳಿದ ಮಾತು ನೆನೆಪಿಗೆ ಬಂದಿತು.

"ಇಲ್ಲ, ಶಾರದಮ್ಮನವರೇ ! ಕ್ಷಮಿಸಿ ಬಿಡಿ. ನಾನು ಮದುವೆಯಾದ ಹೆಂಗಸು. ಪರಪುರುಷನೊಡನೆ ಯಾವ ಬಗೆಯಾದ ವ್ಯವಹಾರವನ್ನೂ ಇಟ್ಟು ಕೊಳ್ಳುವುದು ಸರಿಯಲ್ಲ"

"ನನಗೂ ಗೊತ್ತು. ಆದರೂ ಇದು ಸಾಧಾರಣ ವಿಷಯವಲ್ಲ. ಅವನ ಪ್ರಾಣ ಹೋಗುವಂತಹ ಸಂದರ್ಭ"

ಶಾರದೆ ಎಷ್ಟು ಬಲಾತ್ಕಾರ ಮಾಡಿದರೂ ಪ್ರಮಿಳೆ ಒಪ್ಪಿಕೊಳ್ಳಲಿಲ್ಲ. ಆಗ ಶಾರದೇ ಹೇಳಿದಳು.

"ಇಲ್ಲ, ಪ್ರಮಿಳಾ. ನಾನು ನಿನ್ನನ್ನು ಕರೆದುಕೊಂಡೇ ಹೋಗ ಬೇಕೆಂದು ಬಂದಿದ್ದೇನೆ"

"ಉಹುಂ. ನಾನು ಬರುವುದಕ್ಕಾಗುವುದಿಲ್ಲ"

"ಪ್ರಮಿಳಾ. ಮಾಧುವು ನನ್ನ ತಮ್ಮನಂತೆ. ಅವನು ಪ್ರಾಣ ಬಿಡುತ್ತಾ ಇದ್ದರೆ ನನ್ನಿಂದ ನೋಡಿಕೊಂಡಿರಲಾಗುವುದಿಲ್ಲ. ನೀನೇ ಬಂದರೆ ಸರಿ ಹೋಯಿತು. ಇಲ್ಲದಿದ್ದರೆ ನಿಮ್ಮ ಸೋದರತ್ತೆಗಾದರೂ ಹೇಳಿ ನಿನ್ನನ್ನು ಕರೆದುಕೊಂಡೇ ಹೋಗುತ್ತೇನೆ"

ಬಹಳ ದಿನಗಳಿಂದ ಪ್ರಮಿಳೆಯ ಮನಸ್ಸಿನಲ್ಲಿಯೇ ಕುದಿಯುತ್ತಿದ್ದುದು ಉಕ್ಕಿ ಮೇಲೆ ಬಂದಿತು.

"ನಾನು ನಿನ್ನನ್ನು ನೋಡಿದಾಗಲೇ ಅಂದುಕೊಂಡೆ. ನಿನ್ನ ಸಂಸಾ ರವು ಒಡೆದು ಛಿದ್ರವಾಗಿದೆ. ನಾನು ಇಲ್ಲಿ ಸುಖವಾಗಿರುವುದನ್ನು ನೀನು ಸಹಿಸಲಾರೆ. ಅದರಿಂದ ನನ್ನ ಸಂಸಾರವನ್ನೂ ಕೆಡಿಸುವುದಕ್ಕೆ ನೀನು ಬಂದಿದ್ದೀ"

ಶಾರದೆಯೂ ಅಷ್ಟೇ ಕಠಿಣವಾಗಿ ಹೇಳಿದಳು.

"ನೀನು ಏನುಬೇಕಾದರೂ ಅಂದುಕೋ. ನಾನಂತೂ ನಿನ್ನನ್ನು ಕರೆದುಕೊಂಡು ಹೋಗಲು ನಿಶ್ಚಯ ಮಾಡಿಕೊಂಡು ಬಂದಿದ್ದೇನೆ"

ಪ್ರಮಿಳೆಗೆ ದಿಕ್ಕೇ ತೋಚದಂತಾಯಿತು. ತಾನೇ ಹೋದರೂ ಅಪಾಯ. ಹೋಗದಿದ್ದರೂ ಅಪಾಯ. ಈ ಶಾರದೆ ತಾಟಕಿಯಂತೆ ಬಂದಿದ್ದಾಳೆ. ಗಾಢಾಂಧಕಾರದಲ್ಲಿ ಮಿಂಚು ಮಿಂಚಿದಂತೆ ಅವಳಿಗೊಂದು ಯೋಚನೆ ಬಂದಿತು.

"ನನಗಂತೂ ಇಷ್ಟವಿಲ್ಲ, ಶಾರದಮ್ಮನವರೇ! ಆದರೆ ಅವರು ಮರಣೋನ್ಮುಖರಾಗಿದ್ದಾರೆಂದೂ ನಾನೊಂದು ಮಾತು ಹೇಳಿದರೆ ಉಳಿದುಕೊಳ್ಳುತ್ತಾರೆಂದೂ ಹೇಳುತ್ತೀರಿ. ಆಗಲಿ. ಒಂದು ಬಾರಿ ಬಂದು ಹೇಳುತ್ತೇನೆ. ಪುನಃ ನೀವು ಈರೀತಿ ಬಂದು ನನ್ನನ್ನು ಬಲಾತ್ಕಾರ ಮಾಡಬಾರದು"

ಶಾರದೆಗೆ ಬಹಳ ಸಂತೋಷವಾಯಿತು.

"ಬಹಳ ಸಂತೋಷ, ಪ್ರಮಿಳಾ. ನಿನ್ನ ಮನೆ ನಂದಗೋಕುಲವಾಗಲಿ. ಮಾಧುವನ್ನು ಉಳಿಸಿಕೊಳ್ಳಲು ಒಂದೆರಡು ಕಠಿಣವಾದ ಮಾತು ಹೇಳಬೇಕಾಯಿತು. ಕ್ಷಮಿಸು. ಯಾವಾಗ ಹೊರಡೋಣ"

"ನಾಡಿದ್ದು ಮಧ್ಯಾಹ್ನ ಬಂದು ಬಿಡಿ. ಹೊರಡೋಣ"

"ಬಹಳ ನಿದಾನವಾಗುತ್ತದಲ್ಲ"

"ಅದಕ್ಕೂ ಬಲತ್ಕಾರ ಮಾಡಬೇಡಿ, ಶಾರದಮ್ಮ. ನಾನು ಮನೆಯಲ್ಲಿ ಏನಾದರೂ ಒಂದು ನೆವ ಹೇಳಿ ಬರಬೇಕು. ಯಾರಿಗೂ ಸೂಕ್ಷ್ಮ ಗೊತ್ತಾಗಬಾರದು"

"ಒಳ್ಳೆಯದು. ಹಾಗೆಯೇ ಮಾಡು. ನಾಡಿದ್ದು ಬರುತ್ತೇನೆ" ಎಂದು ಹೇಳಿ ಶಾರದೆ ಎದ್ದಳು.

"ಕುಳಿತುಕೊಳ್ಳಿ. ಟೀ ಕುಡಿದುಕೊಂಡು ಹೋಗುವಿರಂತೆ"

"ಅದೇನೂ ಬೇಡ. ನೀನು ಬಂದು ಮಾಧುವಿನ ಪ್ರಾಣವನ್ನು ಉಳಿಸಿಕೊಡು. ಸಾಕು"

ಶಾರದೆ ಹೊರಟು ಹೋದನಂತರ ತನಗೆ ಕಡೆಯಲ್ಲಿ ತೋರಿದ ವಿಷಯವನ್ನು ಕುರಿತು ಪ್ರಮಿಳೆ ಆಲೋಚನೆ ಮಾಡಿದಳು. ತಾನು ಬಾಣಸಂದ್ರಕ್ಕೂ

ಹೋಗಕೂಡದು. ಶಾರದೆ ಬಂದು ತೊಂದರೆ ಕೊಡುವಂತೆಯೂ ಇರಬಾರದು. ಹಾಗೇನಾದರೂ ಕಾರ್ಯಸಾಧನೆ ಮಾಡಬೇಕು. ಒಂದು ವೇಳೆ ಹಾಗಾಗದಿದ್ದರೆ ಸೀತಾ ಮಾತೆಯು ತೋರಿಸಿದ ದಾರಿಯೇ ಸರಿ. ತನ್ನಂತಹ ಪಾಪಿಗಳಿಗೆ 'ಭೂಮಿತಾಯಿ ಬಾಗಿಲು ತೆಗೆಯುವುದಿಲ್ಲ. ತೆರೆದಿರುವ ಯಾವುದಾದರೂ ಭಾವಿಯಲ್ಲಿಯೋ ಕೆರೆಯಲ್ಲಿಯೋ ಬಿದ್ದು ಪ್ರಾಣ ಕಳೆದು ಕೊಳ್ಳಬೇಕು – ಎಂದು ತೀರ್ಮಾನ ಮಾಡಿದಳು.

ಪ್ರಮಿಳೆ ಕುಳಿತುಕೊಂಡೇ ಇದ್ದಳು. ಶಾರದೆ ಹೊರಟು ಹೋಗಿದ್ದಳು. ಐದು ನಿಮಿಷವಾಗಿತ್ತು ಇಷ್ಟುಹೊತ್ತಿಗೆ ಅವಳು ದೂರ ಹೊರಟು ಹೋಗಿರಬಹುದು. ಪ್ರಮಿಳೆ ಒಳಗೆ ಹೋಗಿ ನೋಡಿದಳು. ಗೌರಮ್ಮ ಟೀಗೆ ನೀರಿಡಲು ಒಲೆ ಹೊತ್ತಿಸುತ್ತಿದ್ದರು.

"ಗೌರಮ್ಮನವರೇ ! ಶಾರದಮ್ಮನವರನ್ನು ಬಸ್ಸಿನವರೆಗೆ ಬಿಟ್ಟು ಬರುತ್ತೀನೆ"

"ಟೀ ಕುಡಿದುಕೊಂಡು ಹೋಗಲಿ. ಆಗಿಹೋಯಿತು"

"ಇಲ್ಲ. ಹೋಗುತ್ತಾರಂತೆ. ಅವರನ್ನು ಬಿಟ್ಟು ಬರುತ್ತೀನೆ"

"ಸರಿ, ಹೋಗಿ ಬಾಮ್ಮ"

ಪ್ರಮಿಳೆ ಎರಡು ರೂಪಾಯಿ ಚಿಲ್ಲರೆ ತೆಗೆದುಕೊಂಡು ನೇರವಾಗಿ ಗಾಂಧೀಬಜಾರಿಗೆ ಹೋಗಿ ಜಟಕಾಮಾಡಿಕೊಂಡು ಹೊರಟಳು. ಹೋಗುತ್ತಾ ದೊಡ್ಡ ಮೇಸ್ಟರು ವೆಂಕಟೇಶ್ ಸಿಕ್ಕದಿದ್ದರೆ ? ಅವರಿಗೆ ಯಾವುದಾದರೂ ಊರಿನಲ್ಲಿ ಕೆಲಸ ಆಗಿದ್ದರೆ ? ಹಾಗಿದ್ದರೆ ಮನೆಗೆ ಬರುವುದೇ ಇಲ್ಲ. ಕೆಂಪಾಂಬುಧಿಯ ಕಡೆ ಹೊರಟು ಹೋಗೋಣವೆಂದುಕೊಂಡಳು.

ಚಾಮರಾಜಪೇಟೆಯ ಮೂರನೆಯ ಬೀದಿಯಲ್ಲಿ ಅವರ ಮನೆ. ಹುಡುಕುವುದು ಕಷ್ಟವಾದರೂ ಮನೆ ಸಿಕ್ಕಿತು.

ಕೃಷ್ಣವೇಣೀ ಕರೆದುಕೊಂಡು ಹೋಗಿ ತುಲಸೀ ರಾಮಾಯಣವನ್ನು ಓದುತ್ತಾ ಕುಳಿತಿದ್ದ ಅಣ್ಣನಿಗೆ ಹೇಳಿದಳು.

"ವೆಂಕಣ್ಣಾ. ಶಿವನಸಮುದ್ರದ ಪ್ರಮಿಳೆ ಬಂದಿದ್ದಾರೆ"

ವೆಂಕಟೇಶನಿಗೆ ಬಹಳ ದಿನಗಳನಂತರ ಒಬ್ಬಳೇ ಒಬ್ಬಳೇ ಬಂದ ಪ್ರಮಿಳೆಯನ್ನು ನೋಡಿ ಆಶ್ಚರ್ಯವಾಯಿತು.

"ಏನು ಪ್ರಮಿಳಾ. ಬಹಳ ಅಪರೂಪ ಬಾ. ಕುಳಿತುಕೋ."

ಕುಳಿತುಕೊಂಡಳು.

ಮಾತನಾಡುವುದು ಪ್ರಮಿಳೆಗೆ ಪ್ರಯಾಸವಾಯಿತು. ಆದರೂ ಕಷ್ಟದಿಂದ "ನಿಮ್ಮೊಂದಿಗೆ ಎರಡು ಮಾತು ಹೇಳಬೇಕೆಂದು ಬಂದೆ" ಎಂದಳು.

"ಹೇಳು— —"

ಅವಳು ಹೇಳಲಿಲ್ಲ. ತಾನಿರುವುದರಿಂದ ಪ್ರಮಿಳೆ ಮಾತನಾಡಲು ಹಿಂಜರಿಗೆಯುತ್ತಿದ್ದಾಳೆಯೇನೋ ಎಂದು ಗ್ರಹಿಸಿದ ಕೃಷ್ಣವೇಣಿ "ಬಹಳ ಅಪರೂಪವಾಗಿ ಬಂದಿದ್ದಾರೆ. ಹೋಗಿ ಕಾಫೀ ತರುತ್ತೇನೆ" ಎಂದು ಒಳಗೆದ್ದು ಹೋದಳು.

ಅಳುತ್ತಾ, ಸಮಾಧಾನ ತಂದುಕೊಳ್ಳುತ್ತಾ ಪ್ರಮಿಳೆಯು ತನ್ನ ಕಷ್ಟವೆಲ್ಲವನ್ನೂ ಹೇಳಿಕೊಂಡು "ಮೇಷ್ಟರೇ! ತಾವು ನನಗೆ ಈ ಕಷ್ಟ ತಪ್ಪಿಸುವುದಾದರೆ ತಪ್ಪಿಸಿ. ಇಲ್ಲದಿದ್ದರೆ ಬಿಡಿ. ನಾನು ಮನೆಗೆ ಹೋಗುವುದಿಲ್ಲ. ಕೆಂಪಾಂಬುದಿಯಲ್ಲಿ ಬಿದ್ದು ಪ್ರಾಣ ನೀಗಿಕೊಳ್ಳುತ್ತೇನೆ" ಎಂದಳು.

"ನೀನು ಪ್ರಾಣವೇಕೆ ನೀಗಿಕೊಳ್ಳಬೇಕಮ್ಮ. ನನ್ನ ಕೈಲಾದದ್ದನ್ನೆಲ್ಲಾ ಮಾಡುತ್ತೇನೆ. ಈ ದಿನವೇ ಬಾಣಸಂದ್ರಕ್ಕೆ ಹೋಗುತ್ತೇನೆ. ಮಾಧುವಿಗೆ ಹೇಳಿ ನಿನಗೆ ಶಾರದಮ್ಮನ ಕಾಟ ತಪ್ಪಿಸುತ್ತೇನೆ. ನೀನು ಸಮಾಧಾನವಾಗಿರು"

ಅವನು ಹೇಳಿದ ಮಾತುಗಳಿಂದ ಪ್ರಮಿಳೆಗೆ ಎಷ್ಟೋ ಸಮಾಧಾನವಾಯಿತು. ಆದರೂ ಅವಳು ಕಣ್ಣಿನಲ್ಲಿ ನೀರು ಹಾಕುತ್ತಲೇ ಕುಳಿತಿದ್ದಳು.

"ಪ್ರಮಿಳಾ. ನೀನು ಅಳುತ್ತಿದ್ದರೆ ನಾನು ಏನೂ ಮಾಡುವುದಿಲ್ಲ. ನಾನು ಎಲ್ಲಾ ಸಂಪಡಿಸುತ್ತೇನೆ ಎಂದರೆ ಸುಮ್ಮನಿರಬೇಕು. ನಮ್ಮ ಮನೆಯವರು ನೋಡಿದರೆ ಏನೆಂದುಕೊಂಡಾರು? ಎಲ್ಲಿ. ಕಣ್ಣೊರಸಿಕೋ. ನಗು"

ಅವಳು ದೊಡ್ಡ ಮೇಸ್ತ್ರರ ಬಲಾತ್ಕಾರಕ್ಕೆ ಸೀರೆಯ ಸೆರಗಿನಿಂದ ಕಣ್ಣೊರಿಸಿಕೊಂಡು ಪ್ರಯಾಸಪೂರ್ವಕವಾಗಿ ಮುಖದಲ್ಲಿ ನಗುವನ್ನು ತಂದು ಕೊಂಡಳು.

ಅಳುವಿನ ನಡುವೆ ಬಂದ ನಗು ಮಳೆಗಾಲದ ಜಡಿಯಲ್ಲಿ ಬಿಸಿಲು ಬಂದ ಹಾಗಾಯಿತು.

ಆ ಸಮಯದಲ್ಲಿಯೇ ಕೃಷ್ಣವೇಣಿಯು ಒಳಗೆ ಬಂದು "ಪ್ರಮಿಳಾ. ಅಮ್ಮ ಹೇಳಿದರು. ನೀವು ಒಳಗಡೆಯೇ ಬರಬೇಕಂತೆ" ಎಂದಳು.

ಪ್ರಮಿಳೆ ಒಳಗಡೆ ಹೋದಳು. ಕೃಷ್ಣವೇಣಿಯೂ ವೆಂಕಟೇಶನೂ ಹೋದರು.

ಸೀತಮ್ಮ ಪ್ರಮಿಳೆಯನ್ನು ವಿಶ್ವಾಸದಿಂದ ಮಾತನಾಡಿಸಿದರು. ಕೃಷ್ಣವೇಣೀ ವೆಂಕಟೇಶರಂತೂ ಅಲ್ಲಿಯೇ ಇದ್ದರು. ಸೀತಮ್ಮನವರ ಇನ್ನೊಬ್ಬ ಮಗಳು ಜಯೂ, ಸೊಸೆಯರಾದ ಸರೋಜಾ, ಮೀನಾಕ್ಷಿಯರೂ ಬಂದು ಕೂಡಿಕೊಂಡರು.

ಇದೇನು ಒಳಗಡೆ ಸಂತೇ ಸೇರಿದಂತಿದೆಯಲ್ಲ ಎಂದು ಶಂಕರನಾರಣಪ್ಪನವರೂ ಬಂದರು. ಅವರಿಗೆ ಬಂದ ಹೊಸ ಹುಡುಗಿ ಯಾರೆಂಬುದು ಗೊತ್ತಾಗಲಿಲ್ಲ. ಪ್ರಮಿಳೆ ಎಂದಕೊಡಲೇ ಗೊತ್ತಾಯಿತು. ಅವರು ಮಾತನಾಡಿಸಿ ಹಜಾರದಲ್ಲಿ ತಾವು ಮಲಗಿದ್ದ ಚಾಪೆಯ ಮೇಲೆಯೇ ಹೋಗಿ ಕುಳಿತುಕೊಂಡರು.

ಸೀತಮ್ಮ ಪ್ರಮಿಳೆಗೂ ಮನೆಯವರಿಗೂ ಕಾಫಿಯನ್ನು ಕೊಟ್ಟರು. ಅವಳು ಹೊರಡುತ್ತೇನೆಂದು ಹೇಳಲು ಮುಖಕ್ಕೆ ಕುಂಕುಮವಿಟ್ಟು ತೆಂಗಿನ ಕಾಯಿಟ್ಟು ಎಲೆಅಡಿಕೆ ಕೊಟ್ಟು "ನಮ್ಮನ್ನು ಕರೆಯದೇ ಗುಟ್ಟಾಗಿ ಮದುವೆ ಮಾಡಿಕೊಂಡು ಬಿಟ್ಟೆ. ಆದರೂ ಪರವಾಯಿಲ್ಲ. ಮೇಸ್ತ್ರರ ಮನೆಯವರನ್ನು ನೆನೆಸಿಕೊಂಡು ಬಂದೆಯಲ್ಲಾ" ಎಂದರು.

ಪ್ರಮಿಳೆ ಯಥೋಚಿತವಾಗಿ ಮಾತನಾಡಿ ಹೊರಟಳು. ಹೊರಗೆ ಜಟಕಾಗಾಡಿಯು ನಿಂತೇ ಇತ್ತು. ಮಕ್ಕಳು ಜಗುಲಿಯ ಮೇಲೆಯೇ

ನಿಂತರು. ಜಯಾ ವೇಣಿಯರೂ ವೆಂಕಟೇಶನೂ ಜಟಕಾಗಾಡಿಯವರೆವಿಗೆ ಹೋದರು.

ಗಾಡಿಯು ಹೊರಡುವಾಗ "ನೀನೇನು ಯೋಚನೆ ಮಾಡಬೇಡ ಪ್ರಮಿಳಾ. ಸಮಾಧಾನವಾಗಿರು. ಏನಿದ್ದರೂ ನಾನು ನೋಡಿಕೊಳ್ಳುತ್ತೇನೆ" ಎಂದು ವೆಂಕಟೇಶ ಪುನಃ ಭರವಸೆಯನ್ನು ಹೇಳಿದ.

ಗಾಡಿಯು ಹೊರಟಿತು.

ಗಾಂಧೀ ಬಜಾರಿನಲ್ಲಿಯೇ ಗಾಡಿ ಬಿಟ್ಟು ನಡೆದುಕೊಂಡು ಮನೆಗೆ ಹೊರಟಳು. ಕೈಯಲ್ಲಿ ಅಡಿಕೆಎಲೆ ತೆಂಗಿನಕಾಯಿಗಳಿವೆ. ಯಾರಾದರೂ "ಇದೇನು" ಎಂದರೆ ಏನು ಹೇಳುವುದು ? ಹಾಗೆಂದು ಫಲತಾಂಬೂಲಗಳನ್ನು ಎಲ್ಲಿಯಾದರೂ ಬಿಟ್ಟು ಹೋಗುವುದಕ್ಕೆ ಆಗುತ್ತದೆಯೇ ? ಲಕ್ಷಣವಾಗಿ ಕೊಟ್ಟಿದ್ದನ್ನು.

ಅವಳೆಂದುಕೊಂಡುದು ಒಂದಲ್ಲ. ಆದುದೊಂದಲ್ಲ.

ಬಾಗಿಲು ತೆಗೆದ ಗೌರಮ್ಮನವರು "ಇದೇನು, ಪ್ರಮಿಳಮ್ಮ. ಫಲ ತಾಂಬೂಲಗಳು" ಎಂದರು.

"ಶಾರದಮ್ಮನ ಜೊತೆಯಲ್ಲಿ ಹೋಗುತ್ತಿದ್ದಾಗ ಯಾರೋ ಕೊಟ್ಟರಮ್ಮ. ಅವರ ಪರಿಚಯಸ್ಥರಂತೆ"

ಪ್ರಮಿಳೆ ಒಳಗೆ ಬಂದು ಟೀಕುಡಿದಳು.

ಆ ದಿನವೂ ಕಳೆಯಿತು. ಮಾರನೆಯ ದಿನವೂ ಕಳೆಯುತ್ತಾ ಬಂದಿತು. ಮೇಷ್ಟರಿಂದ ವರ್ತಮಾನವೇ ಇಲ್ಲ. ಅವರೇನು ಹೋದರೋ ಇಲ್ಲವೋ ಹೋದಕೆಲಸ ಆಯಿತೋ ಇಲ್ಲವೋ ಒಂದೂ ಗೊತ್ತಾಗಲಿಲ್ಲ. ಆ ದಿನವೂ ಹೊರಳಿ ಬಿಟ್ಟರೆ ತಾಟಕಿಯಂತೆ ಶಾರದಾ ಬಂದುಬಿಡುತ್ತಾಳೆ.

ಸಾಯಂಕಾಲ ಆರುಗಂಟೆಯ ಸಮಯ. ನಾಗರತ್ನಮ್ಮನವರೂ ಗೋವಿಂದರಾಯನೂ ಕೆಲಸಗಳನ್ನು ಮುಗಿಸಿಕೊಂಡು ಬಂದಿದ್ದರು. ಎಲ್ಲ ರಿಗೂ ಕಾಫೀ ತಿಂಡಿಗಳಾಗಿದ್ದವು. ಎಲ್ಲರೂ ರಾಮನವಮಿಯ ಸಂಗೀತ

ಹೊರಡಬೇಕು. ನಾಗರತ್ನಮ್ಮನವರೂ ಪ್ರಮಿಳೆಯೂ ಸಿದ್ಧವಾಗುತ್ತಿದ್ದರು. ಗೋವಿಂದರಾಯ ಬಟ್ಟೆಬರೆಗಳನ್ನು ಹಾಕಿಕೊಂಡು ಹೊರಡಲು ಸಿದ್ಧವಾಗಿ ವರಾಂಡದ ಬೆತ್ತದ ಕುರ್ಚಿಯಲ್ಲಿ ಕುಳಿತು ಬೆಳಗಾಗ ಬಂದಿದ್ದ ಪೇಪರ್ ನೋಡುತ್ತಿದ್ದ.

ಆ ಸಮಯದಲ್ಲಿ ಹಳೆಯ ಕಾರೊಂದು ಬಂದು ಮನೆಯ ಮುಂದೆ ನಿಂತಿತು. ಡ್ರೈವರ್ ಮನೆ ಯಾರದೆಂದು ವಿಚಾರಿಸಿಕೊಂಡು ಹೋಗಿ ಹಿಂದಿನ ಬಾಗಿಲು ತೆಗೆದು ಕೃಶನಾದ ವ್ಯಕ್ತಿಯೊಬ್ಬನನ್ನು ಇಳಿಸಿದ. ಆ ವ್ಯಕ್ತಿಗೆ ನಡೆಯಲಾಗಲಿಲ್ಲ. ಡ್ರೈವರೇ ಕರೆದುಕೊಂಡು ಬಂದು ಗೋವಿಂದ ರಾಯನ ಬಳಿಯಲ್ಲಿದ್ದ ಮತ್ತೊಂದು ಬೆತ್ತದ ಕುರ್ಚಿಯಮೇಲೆ ಕೂರಿಸಿದ.

ಕುಳಿತುಕೊಂಡ ವ್ಯಕ್ತಿ ಡ್ರೈವರನನ್ನು ಹೊರಗಿರುವಂತೆ ಹೇಳಿ ಗೃಹ ಸ್ವಾಮಿಯನ್ನು ಕುರಿತು "ನೀವೇ ಗೋವಿಂದರಾಯರೋ? ಪ್ರಮಿಳಮ್ಮನ ಗಂಡ" ಎಂದ.

ಕಾರು, ಡ್ರೈವರ್ ಬಂದು ವಿಚಾರಿಸಿದುದು, ರೋಗಿಷ್ಟನಾದ ವ್ಯಕ್ತಿ ಬಂದುದು, ಅವನು ಕೇಳಿದ್ದು ಎಲ್ಲವೂ ಗೋವಿಂದರಾಯನಿಗೆ ವಿಸ್ಮಯವ ನ್ನುಂಟುಮಾಡಿತ್ತು.

ಅವನು ವಿಸ್ಮಯದಿಂದಲೇ "ಹೌದು. ಏನು ವಿಷಯ?" ಎಂದ.

"ನಾನು ನಿಮ್ಮೊಂದಿಗೆ ಒಂದೆರಡು ಮಾತುಗಳನ್ನು ಹೇಳಲು ಬಂದೆ"

ಗೋವಿಂದರಾಯ ಹೇಳಿ ಎಂದ.

"ಮಿ॥ ಗೋವಿಂದರಾವ್. ನನಗೆ ಕ್ಷಯರೋಗ. ಹೆಚ್ಚೆಂದರೆ ಇನ್ನು ಕೆಲವು ದಿನಗಳಲ್ಲಿ ಸತ್ತು ಹೋಗುತ್ತೇನೆ. ಅಂತಹ ನನಗೆ ಈ ಪ್ರಪಂಚ ದಿಂದ ಆಗಬೇಕಾದುದೇನೂ ಇಲ್ಲ. ನಾನು ಸುಳ್ಳು ಹೇಳುವ ಕಾರಣವೇ ಇಲ್ಲ. ತಾವು ನನ್ನ ಮಾತು ನಂಬಿದರೆ ಸಾಯುವಾಗ ಸಂತೋಷದಿಂದ ಸಾಯುತ್ತೇನೆ"

"ಹೇಳಿ. ಮೊದಲು ನೀವು ಯಾರೆಂಬುದನ್ನು ಹೇಳಿ"

"ನಾನು ಮಾಧವರಾವ್ ಅಂತ. ಒಂದು ಕಾಲದಲ್ಲಿ ನಾನು ನಿಮ್ಮ ಹೆಂಡತಿಯ ಹಿಂದೀ ಮಾಸ್ಟರಾಗಿದ್ದೆ"

ಗೋವಿಂದರಾಯ ಏನೋ ಭಾಸವಾದಂತೆ ಅವನ ಕಡೆಗೆ ನೋಡಿದ. ಮರುಕ್ಷಣದಲ್ಲಿಯೇ ಸರಿಮಾಡಿಕೊಂಡು "ಹೇಳಿ, ಏನು ವಿಷಯ" ಎಂದ.

"ನಾನು ಶಿವನಸಮುದ್ರದಲ್ಲಿ ಹಿಂದೀ ಮೇಷ್ಟರಾಗಿದ್ದೆ. ತಮ್ಮ ಹೆಂಡತಿ ಪ್ರಮಿಳಮ್ಮ ಆಕೆ ತಂದೇ ಮನೆಯಲ್ಲಿಯೇ ಇದ್ದರು. ನನ್ನಲ್ಲಿ ಹಿಂದೀ ಪಾಠ ಹೇಳಿಸಿಕೊಳ್ಳುತ್ತಿದ್ದರು. ಆಗಿನ್ನೂ ನಿಮಗೆ ಮದುವೆಯಾಗಿರಲಿಲ್ಲ. ನಮ ಗಿಬ್ಬರಿಗೂ ಹುಡುಗತನ. ಪರಸ್ಪರ ಪ್ರೀತಿಸುತ್ತಿದ್ದೇವೆಂದು ಕೊಂಡಿದ್ದೆವು. ಮದುವೆ ಸಹ ಮಾಡಿಕೊಳ್ಳಬೇಕೆಂದಿದ್ದೆವು"

ಗೋವಿಂದರಾಯ ನಡುವೆ ಮಾತನಾಡಿ "ಅದಕ್ಕೇನು ? ಮದುವೆಯ ಮೊದಲು ಎಷ್ಟೋಮಂದಿ ಪರಸ್ಪರ ನೋಡುತ್ತಾರೆ. ಮದುವೆಮಾಡಿಕೊಳ್ಳ ಬೇಕು-ಎಂದಿರುತ್ತಾರೆ. ಆ ಸಂದರ್ಭಗಳು ಎಷ್ಟೋ ಕುದುರುತ್ತವೆ. ಎಷ್ಟೋ ಕುದುವುದಿಲ್ಲ. ಪ್ರಮಿಳಾ ನಿಮ್ಮನ್ನೇ ಮದುವೆಮಾಡಿಕೊಳ್ಳಬೇಕು ಅಂತ ಹಟ ಹಿಡಿದಿದ್ದಳು ಎಂದು ನಮ್ಮತ್ತೆ ಮದುವೆಗೆ ಮೊದಲೇ ನನಗೆ ಹೇಳಿದ್ದರು. ಆದರೆ ನಿಮ್ಮನ್ನು ನೋಡಿರಲಿಲ್ಲ. ಅಷ್ಟೆ" ಎಂದು ನಗುತ್ತಾ ಹೇಳಿದ.

ಅಷ್ಟುಹೊತ್ತಿಗೆ ನಾಗರತ್ನಮ್ಮನವರೂ ಪ್ರಮಿಳೆಯೂ ಹೊರಡಲು ಸಿದ್ಧವಾಗಿ ಬಂದಿದ್ದರು. ಮಾತು ಸ್ವಾರಸ್ಯವಾಗಿ ಕಂಡು ನಾಗರತ್ನಮ್ಮ ಒಳ ಬಾಗಿಲಿನಲ್ಲಿಯೇ ನಿಂತುಕೊಂಡರು. ಪ್ರಮಿಳೆ ಕಿಟಕಿಯಿಂದ ಹೊರಗೆ ನೋಡಿ ಮಾಧವರಾಯನನ್ನು ಗುರುತಿಸಿದಳು. ತನ್ನ ಕಡೆಗಾಲವು ಬಂದು ಬಿಟ್ಟಿತೆಂದು ನಿಶ್ಚಯಮಾಡಿಕೊಂಡಳು. ಅಂತಹ ಸಮಯದಲ್ಲಿ ಸೋದರತ್ತೆ ಏನೆನ್ನುತ್ತಾರೆಯೋ ಎಂಬುದೂ ಅವಳಿಗಿರಲಿಲ್ಲ. ಕಿಟಕಿಯ ಬಳಿ ಮರೆಯಲ್ಲಿ ನಿಂತು ನಡುಗುವ ಹೃದಯದಿಂದ ಏನೇನು ಮಾತುಗಳು ನಡೆಯುತ್ತವೆಯೋ ಎಂದು ಕೇಳುತ್ತಾ ನಿಂತಳು.

"ಇನ್ನೊಂದು ಸ್ವಲ್ಪ ವಿಷಯವಿದೆ, ಗೋವಿಂದರಾಯರೇ! ನಿಮ್ಮ ಮದುವೆಗೆ ಮೊದಲು ಪ್ರಮಿಳಮ್ಮ ಶಿವಮೊಗ್ಗೆಗೆ ಅಕ್ಕನ ಮನೆಗೆ ಹೊರಟಳು. ದಾರಿಯಲ್ಲಿ ಬಾಣಸಂದ್ರದಲ್ಲಿ ಇಳಿದುಬಿಟ್ಟಳು. ಅಲ್ಲಿ ನಮ್ಮ ಸಂಬಂಧೀಕರ ಮನೆಯಲ್ಲಿ ನಾನಿದ್ದೆ. ಪ್ರಮಿಳಮ್ಮ ಅಲ್ಲಿ ಎರಡು ದಿನವಿದ್ದಳು. ನಾವುಗಳಿ ಬ್ಬರೂ ಅಲ್ಲಿಂದ ಕಾಶಿಗೆ ಹೊರಟುಹೋಗೋಣವೆಂದಿದ್ದೆವು. ಏನೋ

ದೇವರು ದೊಡ್ಡವನು. ಅದೇನೂ ಆಗಲಿಲ್ಲ. ಪ್ರಮೀಳೆ ಅಕ್ಕನ ಮನೆಗೆ ಹೊರಟುಹೋದಳು. ಆಮೇಲೆ ನಿಮ್ಮ ಮದುವೆ ಗೊತ್ತಾಯಿತು. ನಾನೂ ಪ್ರಮೀಳನ್ನೂ ಬಹಳ ದಿನಗಳು ಪ್ರೀತಿಸುತ್ತಿದ್ದರೂ, ಅವಳು ಬಾಣಸಂದ್ರ ದಲ್ಲಿ ಎರಡು ದಿನಗಳಿದ್ದರೂ ನಮ್ಮ ಸಂಬಂಧ ಪವಿತ್ರವಾಗಿಯೇ ಇದ್ದಿತು.

ಗೋವಿಂದರಾಯನಿಗೆ ಈ ಎರಡನೆಯ ಭಾಗ ಗೊತ್ತಿರಲಿಲ್ಲ. ಮೂಕ ನಂತೆ ಕುಳಿತು ಮಾಧವರಾಯ ಹೇಳುತ್ತಿದ್ದುದನ್ನು ಕೇಳುತ್ತಿದ್ದ.

ಕೂಡಲೇ ತನ್ನ ಮಾತಿಗೆ ಉತ್ತರ ಕೊಡದುದನ್ನು ನೋಡಿ ಮಾಧವ ರಾಯ ಪುನಃ ಕೇಳಿದ.

"ಸಾಯುವ ಮನುಷ್ಯ. ನಾನು ಹೇಳುತ್ತಿರುವ ಪ್ರತಿಯೊಂದು ಅಕ್ಷ ರವೂ ಸತ್ಯ. ಹೇಳಿ, ಗೋವಿಂದರಾಯರೇ ! ನನ್ನ ಮಾತಿನ ಮೇಲೆ ಭರವಸೆ ಯನ್ನಿಡುತ್ತಿರಾ ?"

ನಿಶ್ಚೇಷ್ಟಿತನಾಗಿ ಕುಳಿತಿದ್ದ ಗೋವಿಂದರಾಯನ ಮೇಲೆ ಮಾಧವ ರಾಯನ ಆ ಕಡೆಯ ವಾಕ್ಯಗಳು ಮಂತ್ರದಂತೆ ಕೆಲಸಮಾಡಿದವು.

ಅವನು "ನಂಬುತ್ತೇನೆ" ಎಂದ.

"ನಿಮ್ಮ ಬಾಯಿಂದ ಆ ಮಾತು ಕೇಳಿ ಬಹಳ ಆನಂದವಾಯಿತು, ಗೋವಿಂದರಾಯರೇ. ಸಾಯುವವನು ಸಂತೋಷದಿಂದ ಪ್ರಾಣಬಿಡುವ ಮಹದನುಗ್ರಹ ಮಾಡಿದಿರಿ. ಇಂದೂ ಪ್ರಮೀಳೆಯನ್ನು ನಾನು ಪ್ರೀತಿಸು ತ್ತೇನೆ. ಅವಳು ಸುಖವಾಗಿರಲೆಂದು ನನ್ನ ಮನಸ್ಸು ಅಪೇಕ್ಷಿಸುತ್ತದೆ. ಆದರಿಂದ ನಾನು ಇಲ್ಲಿಯವರೆವಿಗೆ ಬರಬೇಕಾಯಿತು"

ಗೋವಿಂದರಾಯ ಸುಮ್ಮನಿದ್ದುದನ್ನು ನೋಡಿ ಪುನಃ ಹೇಳಿದ.

"ಇನ್ನೊಂದು ವಿಷಯ ಹೇಳಿಬಿಟ್ಟರೆ ನನ್ನ ಮಾತು ಮುಗಿಯಿತು. ಪ್ರಮೀಳೆಯನ್ನು ಶಿವಮೊಗ್ಗೆಗೆ ಕಳುಹಿಸಿ ನಾನು ನಮ್ಮೂರಿಗೆ ಹೊರಟು ಹೋದೆ. ನಮ್ಮ ತಾಯಿತಂದೆ ತೀರಿಹೋದರು ಪ್ರಮೀಳೆಗೂ ಮದುವೆ ಯಾಯಿತೆಂದು ಗೊತ್ತಾಯಿತು. ನಾನು ಬಾಣಸಂದ್ರದಲ್ಲಿಯೇ ಇದ್ದೆ. ದೇಹಾರೋಗ್ಯ ಕೆಟ್ಟಿತು. ಯಾರೋ ಕ್ಷಯರೋಗವೆಂದು ಹೇಳಿದರು. ನಾನಿದ್ದ ಮನೆ ನಮ್ಮ ಸಂಬಂಧಿಕರದೆಂದು ಹೇಳಿದೆನಷ್ಟೆ. ಆ ಮನೆಯವ...

ಗಂಗಮ್ಮನೆಂದು. ಆಕೆಯ ಮಗಳು ಶಾರದೆ ಎಂದು. ಅವರು ಔಷಧಿ ತೆಗೆದು ಕೊಳ್ಳಲು ಬಲಾತ್ಕಾರಮಾಡಿದರು. ನನಗೆ ಈ ಪ್ರಪಂಚದಲ್ಲಿ ಬದುಕುವ ಆಸೆಯೇ ಇಲ್ಲ. ಶಾರದೆ ಪ್ರಮಿಳೆಯನ್ನು ಇಲ್ಲಿ ನೋಡಿದ್ದಳಂತೆ. ಶಾರದೇ ನನಗೆ ಅಕ್ಕನ ಹಾಗೆ. ಪ್ರಮಿಳೆ ಬಂದು ಬಲಾತ್ಕಾರಮಾಡಿದರೆ ನಾನು ಔಷಧಿ ತೆಗೆದುಕೊಳ್ಳಬಹುದೆಂದು ಶಾರದೆ ಪ್ರಮಿಳೆಯನ್ನು ಬಲಾತ್ಕಾರ ಮಾಡಿ ದಳಂತೆ. ಈ ದಿನ ಬೆಳಗಾಗ ವೆಂಕಣ್ಣ ಬಂದು ಈ ವಿಷಯವನ್ನೆಲ್ಲಾ ಹೇಳಿ ದರು. ವೆಂಕಣ್ಣ ನನ್ನ ಸಹಪಾಟಿಗಳು. ಶಾರದೆಯನ್ನು ಕೂಡಲೇ ಊರಿಗೆ ಕರೆಸಿ ಬುದ್ಧಿ ಹೇಳುತ್ತೇನೆಂದು ಅವರನ್ನು ವಾಪ್ಸು ಕಳಿಸಿಬಿಟ್ಟೆ. ಅನಂತರ ಯೋಚನೆ ಮಾಡಿದೆ. ನಾನು ಶಾರದೆಯನ್ನು ಕರೆಸಿ ಅವಳಿಗೆ ಹೇಳಿದ್ದರೆ ನನ್ನ ಮಾತು ಅವಳು ಮೀರುತ್ತಿರಲಿಲ್ಲ. ಆದರೆ ಪ್ರಮಿಳೆ ಎಂದೆಂದಿಗೂ ಸುಖವಾಗಿರಬೇಕೆನ್ನುವುದೇ ನನ್ನ ಬಯಕೆ. ಅದು ಈಡೇರಬೇಕಾದರೆ ಇರುವ ವಿಷಯವನ್ನೆಲ್ಲಾ ಸ್ಪಷ್ಟವಾಗಿ ನಿಮ್ಮೊಡನೆ ಹೇಳಬೇಕೆಂದುಕೊಂಡ ನಾನು ಕಾರು ಮಾಡಿಕೊಂಡು ಇಲ್ಲಿಗೆ ಬಂದೆ"

ಅಲ್ಲಿಗೂ ಗೋವಿಂದರಾಯ ಮಾತನಾಡಲಿಲ್ಲ. ತಾನಾವುದೋ ಹೊಸ ಅನುಭವವನ್ನು ಪಡೆಯುತ್ತಿರುವವನಂತೆ ಭಾಸವಾಗಿ ಮೂಕನಾಗಿದ್ದ.

"ಇನ್ನೊಂದುಬಾರಿ ಹೇಳಿಬಿಡಿ, ಗೋವಿಂದರಾಯರೇ ! ನನ್ನ ಮಾತು ಗಳನ್ನು ನೀವು ನಂಬುತ್ತೀರಲ್ಲವೇ ?"

ಗೋವಿಂದರಾಯನ ಕೊರಳು ಕಟ್ಟಿಕೊಂಡು ಬಂದಿತ್ತು.

"ನಂಬುತ್ತೇನೆ. ಖಂಡಿತವಾಗಿ ನಂಬುತ್ತೇನೆ"

"ಸರಿ. ನಾನಿನ್ನು ಹೊರಡುತ್ತೇನೆ" ಎಂದು ಹೇಳಿ ಮಾಧವರಾಯ ಏಳುವುದಕ್ಕೆ ಹೋದ. ಕೂಡಲೇ ಏಳಲಾಗಲಿಲ್ಲ. ಕುರ್ಚಿಯನ್ನು ಹಿಡಿದು ಕೊಂಡು ಕಷ್ಟದಿಂದ ಮೇಲೆದ್ದು ನಿಂತುಕೊಂಡ.

ಹೊರಗೆ ಕಾರಿನ ಬಳಿ ಇದ್ದ ಡ್ರೈವರನನ್ನು ಕರೆದ. ಅವನು ಬಂದು ಮಾಧವರಾಯನನ್ನು ಹಿಡಿದುಕೊಂಡು ಹೊರಡಲುದ್ಯುಕ್ತನಾದ.

ಆಗ ಗೋವಿಂದರಾಯ "ಮಿ|| ಮಾಧವರಾವ್. ನನ್ನದೊಂದು ಪ್ರಾರ್ಥನೆ. ನೀವು ನಡೆಸಿ ಕೊಡಬೇಕು" ಎಂದ.

ಮಾಧು ಆಸಕ್ತಿಯಿಂದ ಹಿಂತಿರುಗಿ ಏನು ಎಂಬಂತೆ ನೋಡಿದ.

"ನೀವು ಇಲ್ಲಿಯೇ ಇರಬೇಕು. ಸರಿಯಾಗಿ ಚಿಕಿತ್ಸೆ ತೆಗೆದುಕೊಂಡು ಗುಣವಾದ ಮೇಲೆ ಎಲ್ಲಿ ಬೇಕಾದರೂ ಹೋಗಬಹುದು"

ಏನು ಹೇಳುವುದಕ್ಕೂ, ಏನು ಮಾಡುವುದಕ್ಕೂ ತೋರದೇ ಮಾಧು ವಿಸ್ಮಿತನಾಗಿ ನಿಂತುಕೊಂಡ. ಗೋವಿಂದರಾಯ ಅವನನ್ನು ಹಿಡಿದು ಕುರ್ಚಿಯ ಮೇಲೆ ಕೂರಿಸಿದ.

ಒಳಬಾಗಿಲಲ್ಲಿ ನಿಂತಿದ್ದ ನಾಗರತ್ನಮ್ಮ ಹೊರಗೆ ಬಂದು ಗದ್ಗದ ಸ್ವರದಿಂದ "ಗೋವಿಂದ. ನೀನು ಮನುಷ್ಯನಲ್ಲ. ದೇವರು" ಎಂದರು.

ಕಣ್ಣೀರು ಸುರಿಸುತ್ತಾ ಕಿಟಕಿಯ ಬಳಿ ನಿಂತಿದ್ದ ಪ್ರಮಿಳೆಯೂ ಹಾಗೆಯೇ ಎಂದುಕೊಂಡಳು.